

ಶ್ರೀ ಶೇಷಾಚಲ ಪ್ರೆಸ್ಸು

ಶ್ರೀ ಶೇಷಾಚಲ ಪ್ರೆಸ್ಸ ಮತ್ತು ಗ್ರಂಥಮಾಲೆ,
ಪೋ. ಆನಂದವನ, ಜಿ. ಧಾರವಾಡ.
श्री शेषाचल प्रेस व ग्रंथमाला.
पो. आनंदवन, जि. धारवाड
SHRI SHESHACHAL PRESS & GRANTHAMALA,
Manager- B. P. KALE. Post. ANANDVAN, Dist. Dharwar.

---

सर्वेपिसुखिनः संतु सर्वेसंतुनिरामयाः ॥
सर्वेभद्राणिपश्यंतु नकश्चित्दुःखमाप्नुयात् ॥

॥ ಶ್ರೀ ॥

# ಚಿಕಿತ್ಸಾ ಪ್ರಭಾಕರ

ಎಂಬ ವೈದ್ಯಕೀ ಪುಸ್ತಕದೊಳಗಿನ

# ಜ್ವರ



(ಎಂಬ ೩೨ನೇ ಪ್ರಕರಣವು.)



೧೯೩೧

ಬೆಲೆ ೧ ರೂ.

|| ಶ್ರೀ ||

ಚಿಕಿತ್ಸಾ ಪ್ರಭಾಕರ

ಎಂಬ ವೈದ್ಯಕೀ ಪುಸ್ತಕದೊಳಗಿನ

# ಜ್ವರ

(೩೨ನೇ ಪ್ರಕರಣ.)

ಗ್ರಂಥಕಾರ:—

ಪ್ರಭಾಕರ ಬಾಳಾಜಿ ಓಗಲೆ,

ಓಗಲೇವಾಡಿ. (ಸಂಸ್ಥಾನ ಔಂಧ.)

ಭಾಷಾಂತರಕಾರ:—

ಭಿಕಾಜಿ ಪರಶುರಾಮಪಂತ ಕಾಳೆ,

ವ್ಯಾನೇಜರ. ಶ್ರೀ ಶೇಷಾಚಲ ಪ್ರಿಂಟಿಂಗ ಪ್ರೆಸ್,

ಆನಂದವನ. (ಜಿಲ್ಲಾ ಧಾರವಾಡ)



ಶಾ. ಶಕೆ ೧೮೫೨ ಕ್ರಿ. ಶ. ೧೯೩೧

ಬೆಲೆ ೧ ರೂ.

# ಸೂಚನೆ.

೧ ಹೊಸ ಔಷಧಿ(ಗಿಡಮೂಲಿಕೆ)ಗಳನ್ನೇ ಉಪಯೋಗಿಸತಕ್ಕದ್ದು; ಹುಳಿತ, ಕೊಳೆತ ಹಾಗು ಬಹಳ ಹಳೆಯ ಗಿಡಮೂಲಿಕೆಗಳನ್ನು ಉಪಯೋಗಿಸಕೂಡದು.

೨ ಯಾವದೊಂದು ಔಷಧವು ಸಿಗದಿದ್ದರೆ ತತ್ಸಮಾನಗುಣದ ಬೇರೆ ಔಷಧವನ್ನು ತಕ್ಕೊಂಡು ಕೆಲಸ ಸಾಗಿಸತಕ್ಕದ್ದು. (ಔಷಧಿ ಪ್ರತಿನಿಧಿಗಳ ಪಟ್ಟಿಯು ಚಿಕಿತ್ಸಾ ಪ್ರಭಾಕರ ಪುಸ್ತಕದ ಎರಡನೇ ಭಾಗದಲ್ಲಿದೆ ನೋಡಿರಿ)ಬಹಳ ಔಷಧಿ ಜಿನಸುಗಳೊಳಗಿನ ಯಾವುದೊಂದು ಗೌಣ ಔಷಧವು ಸಿಗದಿದ್ದರೆ ಅದನ್ನು ಬಿಟ್ಟು ಬಿಡಬೇಕು. ಅದಕ್ಕಾಗಿ ಔಷಧ ಮಾಡುವದನ್ನೇ ಬಿಟ್ಟುಗೊಡಬಾರದು; ಆದರೆ ರಸಾಯನಿಕ ಔಷಧಗಳಲ್ಲಿ ಮಾತ್ರ ಹೀಗೆ ಮಾಡಿದರೆ ನಡೆಯಲಾರದು.

೩ ಯಾವದೊಂದು ಔಷಧಿಯು ತಮ್ಮ ಪ್ರಾಂತದಲ್ಲಿ ದೊರೆಯದಂತಿದ್ದರೆ, ತತ್ಸಮಾನ ಗುಣಧರ್ಮದ ತಮ್ಮ ನಾಡಿನಲ್ಲಿ ದೊರೆಯುವ ಬೇರೆ ಔಷಧಿಯನ್ನುಪಯೋಗಿಸಬೇಕು.

೪ ಯಾವುದೊಂದು ಔಷಧಿಯಾಗಲಿ, ವನಸ್ಪತಿಯಾಗಲಿ ಗೊತ್ತಾಗದಿದ್ದರೆ ತದ್ವಿಷಯವನ್ನು ತಜ್ಞರಿಂದ ತಿಳಕೊಳ್ಳಬೇಕು.

೫ ಔಷಧಗಳನ್ನು ಬಹು ಎಚ್ಚರಿಕೆಯಿಂದ ಮಾಡಬೇಕು; ಚೆನ್ನಾಗಿ ಪರೀಕ್ಷಿಸಿ ತಕ್ಕೊಳ್ಳಬೇಕು; ಪ್ರಮಾಣಕ್ಕಿಂತ ಹೆಚ್ಚು ತಕ್ಕೊಳ್ಳಬಾರದು. ಹಾಗು ಅವನ್ನು ತಯಾರಿಸುವಾಗ ಸ್ವಚ್ಛತೆಯ ಕಡೆಗೆ ವಿಶೇಷ ಲಕ್ಷ್ಯಗೊಡಬೇಕು.

೬ ಯಾವ ಔಷಧಗಳ ಎಲೆ, ತೊಗಟೆ, ಬೇರು, ಹೂ, ಕಾಯಿ ಇವುಗಳು ತೋಟದಲ್ಲಿ, ಹೊಲದಲ್ಲಿ, ಅಡವಿಯಲ್ಲಿ, ಬೈಲಲ್ಲಿ, ಬೇಲಿಯಲ್ಲಿ, ಹಿತ್ತಲಲ್ಲಿ ಹಾಗು ಗುಡ್ಡಗಾಡು ಪ್ರದೇಶದಲ್ಲಿ ದೊರೆಯಬಹುದಾಗಿವೆಯೋ, ಅಲ್ಲಲ್ಲಿಂದ ಅವನ್ನು ಪ್ರಯತ್ನಪೂರ್ವಕವಾಗಿ ತರತಕ್ಕದ್ದು; ಸಿಗದಿದ್ದರೆ ಮಾತ್ರ ಅವುಗಳನ್ನು ಅಂಗಡಿಯೊಳಗಿಂದ ಚೆನ್ನಾಗಿ ಪರೀಕ್ಷಿಸಿ ಕೊಂಡುಕೊಳ್ಳತಕ್ಕದ್ದು. ಅಂಗಡಿಯ ಔಷಧಗಳಿಗಿಂತ ಆಗ ತಾನೆ ಗಿಡಮೂಲಿಕೆಗಳಿಂದ ತಂದ ಔಷಧಿಗಳು ಹೆಚ್ಚು ಹಾಗು ತೀವ್ರ ಗುಣಕಾರಿಯಾಗಿರುತ್ತವೆ.

೭ ಪ್ರತಿಯೊಂದು ಔಷಧವನ್ನು ಎಷ್ಟೆಷ್ಟು ತೆಗೆದುಕೊಳ್ಳಬೇಕೆಂಬುದನ್ನು ಎಲ್ಲಿ ಹೇಳಿಲ್ಲವೋ, ಅಲ್ಲಿ ಎಲ್ಲವನ್ನೂ ಸಮಭಾಗವಾಗಿ ತಕ್ಕೊಳ್ಳತಕ್ಕದ್ದು.

೮ ಚೂರ್ಣವನ್ನು ತಕ್ಕೊಳ್ಳಲು ಹೇಳಿದಲ್ಲಿ ವಸ್ತ್ರದಿಂದ ಸೋಸಿದ ಚೂರ್ಣವನ್ನೇ ಉಪಯೋಗಿಸತಕ್ಕದ್ದು.

೯ ಕಾಢೆಗಳನ್ನು ಮಾಡಲಿಕ್ಕೆ ಮಣ್ಣಿನ ಪಾತ್ರೆ(ಗಡಿಗೆ)ಯನ್ನು ಉಪಯೋಗಿಸುವದು ಉತ್ತಮವು. ಅದು ಸಿಗದಿದ್ದರೆ ಕಲಾಯಿಯ ಪಾತ್ರೆಯಲ್ಲಿ ಮಾಡಬೇಕು. ಕಾಢೆಯನ್ನು ಕುದಿಸುವಾಗ ಆ ಪಾತ್ರೆಯ ಮೇಲೆ ಮುಚ್ಚಳವನ್ನಿಡಕೂಡದು; ಹಾಗು ತಮಗೆ ಬೇಕಾದ ಪ್ರಮಾಣಕ್ಕಿಂತ ಕುಸ ಹೆಚ್ಚು ಕಾಢೆಯಿರುವಾಗಲೇ ಆ ಪಾತ್ರೆಯನ್ನು ಒಲೆಯ ಮೇಲಿಂದ ಕೆಳಗಿಳಿಸಬೇಕು. ಅಂದರೆ ಆ ಕಾಢೆಯು ಆರುವಷ್ಟರಲ್ಲಿ ತಕ್ಕ ಪ್ರಮಾಣಕ್ಕೆ ನಿಲ್ಲುವದು.

೧೦ ಕಷಾಯದಲ್ಲಿ ಜೇನುತುಪ್ಪವನ್ನು ಕೂಡಿಸಬೇಕಾಗಿದ್ದರೆ ಕಷಾಯವು ಪೂರಾ ಆರಿದ ಮೇಲೆಯೇ ಕೂಡಿಸತಕ್ಕದ್ದು; ಬಿಸಿ ಕಷಾಯದಲ್ಲಿ ಬೆರಿಸಿದರೆ ವಿರುದ್ಧವಾಗುವದು. ಕಷಾಯದ ಪ್ರಮಾಣವು ಸಣ್ಣ ಹುಡುಗರಿಗೆ ೧ ತೊಲಿ, ೨ ರಿಂದ ೫ ವರ್ಷ ವಯಸ್ಸಿನ ಬಾಲಕರಿಗೆ ೨-೨॥ ತೊಲಿ, ೬ ರಿಂದ ೧೨ ವರ್ಷದ ವರೆಗೆ ೩ ತೊಲಿ, ಅದಕ್ಕೂ ದೊಡ್ಡವರಿಗೆ ೪-೫ ತೊಲಿ.

೧೧ ಈ ಪುಸ್ತಕದಲ್ಲಿಯ ಔಷಧದ ಪ್ರಮಾಣವನ್ನು ಬಹುಶಃ ದೊಡ್ಡವರಿಗಾಗಿ ಬರೆದಿರುತ್ತದೆ. ಚಿಕ್ಕ ಮಕ್ಕಳಿಗೂ, ಅಶಕ್ತ ಪ್ರಕೃತಿಯವರಿಗೂ ಪ್ರಕೃತಿಯ ಮಾನದಂತೆ ನೋಡಿ ಕೊಡಬೇಕು.

೧೨ ಯಾವುದೊಂದು ಔಷಧದ ಅನುಪಾನ ಅಥವಾ ಅವುಗಳೊಳಗಿನ ಯಾವುದೊಂದು ಜಿನಸು ರೋಗಿಗೆ ಸೇರದಂತಿದ್ದರೆ ಅಥವಾ ಆ ಬಗ್ಗೆ ಒಕರಿಕೆಯುಂಟಾಗುತ್ತಿದ್ದರೆ, ಅದನ್ನು ಬಿಟ್ಟು ತತ್ಸಮಾನ ಗುಣದ ಬೇರೆ ಔಷಧವನ್ನಾಗಲಿ, ಅನುಪಾನವನ್ನಾಗಲಿ ಯೋಜಿಸಬೇಕು. ರೋಗಿಗೆ ಅದೇ ಔಷಧದ ಬಗ್ಗೆ ಒತ್ತಾಯ ಮಾಡಬಾರದು; ಯಾಕಂದರೆ ಒತ್ತಾಯದಿಂದ ಕೊಟ್ಟ ಔಷಧವು ಹಿತಕರವಾಗುವದಿಲ್ಲ.

೧೩ ಔಷಧವನ್ನು ಬೆಳ್ಳಿಯ ಇಲ್ಲವೆ ಕಾಜಿನ ಅಥವಾ ಕಲಾಯಿ ಮಾಡಿದ ಬಟ್ಟಲಲ್ಲಿ ತಕ್ಕೊಳ್ಳಬೇಕು. ಉಳಿದ ಧಾತುಗಳ ಪಾತ್ರೆಗಳಲ್ಲಿ ಅದು ಕಿಲುಬುತ್ತದೆ; ಇಲ್ಲವೆ ಕೆಡುತ್ತದಾದ್ದರಿಂದ ತಕ್ಕೊಳ್ಳಬಾರದು.

೧೪ ಕಷಾಯದಲ್ಲಿ ಹಾಕುವ ಔಷಧಗಳನ್ನು ಅಬಡು-ಜಬಡಾಗಿ ಕುಟ್ಟಿ ಹಾಕಬೇಕು. ವಯೋಮಾನದಂತೆ ೧ ರಿಂದ ೩ ತೊಲಿಯ ವರೆಗೆ ಎಲ್ಲ ಔಷಧಗಳೂ ಕೂಡಿದ ಪ್ರಮಾಣವಿರಬೇಕು. ಎಷ್ಟು ಕಷಾಯವು ಉಳಿಯಬೇಕಾಗಿರುತ್ತದೋ, ಅದರ ೮ ಪಟ್ಟು ನೀರು ಹಾಕಿ ಮಂದಾಗ್ನಿಯ ಮೇಲೆ ಕುದಿಸಬೇಕು. ಅಷ್ಟಮಾಂಶದ ಹೊರತು, ಚತುರ್ಥಾಂಶ, ತೃತೀಯಾಂಶ, ದ್ವಿತೀಯಾಂಶ ಕಷಾಯಗಳು ಬೇಕಿದ್ದರೆ ಅದರಂತೆ ನೀರು ಹಾಕಬೇಕು.

೧೫ ಎಲ್ಲೆಲ್ಲಿ ಯಾವ ಯಾವ ಪಥ್ಯವನ್ನು ಹೇಳಿರುತ್ತದೆಯೋ, ಅದರಂತೆಯೇ ಪಥ್ಯ ಮಾಡತಕ್ಕದ್ದು. ಹೇಳದಿದ್ದಲ್ಲಿ ಸರ್ವ ಸಾಧಾರಣ ಪಥ್ಯವನ್ನು ಮಾಡಲೇಬೇಕು. ಉಷ್ಣ ಪದಾರ್ಥಗಳನ್ನು ಸೇವಿಸತಕ್ಕ ಔಷಧಕ್ಕೆ ವಿರುದ್ಧವಾದ ಪದಾರ್ಥಗಳನ್ನೂ ಹಾಗು ಔಷಧದ ವೀರ್ಯವನ್ನು ಕಡಿಮೆ ಮಾಡುವ ಪದಾರ್ಥಗಳನ್ನೂ ಸರ್ವಥಾ ಸೇವಿಸಕೂಡದು.

೧೬ ಔಷಧಗಳನ್ನರೆಯಲಿಕ್ಕೆ ಕಪ್ಪಿನ ಕಲಬತ್ತನ್ನು ಉಪಯೋಗಿಸಬೇಕು; ಇಲ್ಲವೆ ಚಿನೀಮಣ್ಣಿನ ಕಲಬತ್ತನ್ನಾಗಲಿ, ಅಲ್ಪಸ್ವಲ್ಪ ಅರೆಯುವ ಕೆಲಸಕ್ಕೆ ಕಾಜಿನ ಕಲಬತ್ತನ್ನಾಗಲಿ ಉಪಯೋಗಿಸಬಹುದು.

೧೭ ಗಂಡಸರಿಗಿಂತ ಹೆಂಗಸರಿಗೆ ಔಷಧದ ಪ್ರಮಾಣವನ್ನು ತುಸ ಕಡಿಮೆ ಮಾಡಬೇಕು. ಚಿಕ್ಕ ಮಕ್ಕಳಿಗೂ, ಬಸುರಿದ್ದ ಹೆಂಗಸರಿಗೂ ಅತ್ಯುಷ್ಣ ವೀರ್ಯದ ಔಷಧವನ್ನೂ, ತೀಕ್ಷ್ಣ ರೇಚಕವನ್ನೂ, ವಾಂತಿಯ ಔಷಧವನ್ನೂ ಅಥವಾ ಗರ್ಭಕ್ಕೆ ವಿಘಾತಕವಾದ ಔಷಧವನ್ನೂ ಕೊಡಕೂಡದು.

೧೮ ಔಷಧ ತೂಗುವ ತಕ್ಕಡಿ, ಕಲ್ಲು, ಅಳತೆಯ ಮಾಪು, ಕಲಬತ್ತು, ಪಾತ್ರೆ, ಸೋಸುವ ಅರಿವೆ, ಸವಟು, ಡಮಚೆ, ಬಟ್ಟಲು, ಸೀಸೆ ಮೊದಲಾದವುಗಳನ್ನು ಯಾವಾಗಲೂ ಸ್ವಚ್ಛವಾಗಿಡತಕ್ಕದ್ದು; ಮತ್ತು ಔಷಧದ ಕೆಲಸವಾದ ಕೂಡಲೆ ಮತ್ತೆ ಸ್ವಚ್ಛ ಮಾಡಿಡಬೇಕು. ಒಂದು ಔಷಧದ ಪಾತ್ರೆ-ಸೀಸೆಗಳನ್ನು ಸ್ವಚ್ಛ ಮಾಡದ ಹೊರತು ಅವುಗಳಲ್ಲಿ ಬೇರೆ ಔಷಧವನ್ನೆಂದೂ ಹಾಕಕೂಡದು

೧೯ ಯಾವ ಔಷಧದ ಪಾಠದಲ್ಲಿ ಅದನ್ನು ತೆಗೆದುಕೊಳ್ಳುವ ಇಲ್ಲವೆ ಹಚ್ಚಿಕೊಳ್ಳುವ ಅವಧಿಯನ್ನು ಹೇಳಿರುವದಿಲ್ಲವೋ, ಆ ಪ್ರಸಂಗದಲ್ಲಿ ಆ ರೋಗವು ಗುಣವಾಗುವವರೆಗೆ ಅದನ್ನು ಸಾಧಿಸತಕ್ಕದ್ದು. ಅವಧಿಯನ್ನು ತಿಳಿಸಿರುವಲ್ಲಿ ಮಾತ್ರ ಆ ಪ್ರಕಾರ ನಡೆಯುವದು.

೨೦ ಔಷಧಗಳನ್ನು ಮನೆಯಲ್ಲಿಡುವಾಗ ಜೋಪಾನದಿಂದಿಡತಕ್ಕದ್ದು; ಮಕ್ಕಳ ಇಲ್ಲವೆ ಇತರರ ಕೈಗೆ ಸಿಗುವಂತಿಡಬಾರದು.

೨೧ ಚಿಕ್ಕ ಮಕ್ಕಳಿಗೂ, ಗರ್ಭಿಣಿ ಸ್ತ್ರೀಯರಿಗೂ ಪಾರದ, ಗಂಧಕ, ಸೋಮಲ, ಜೇಪಾಳ ಇವುಗಳನ್ನೂ ತೀವ್ರ ಭಸ್ಮಗಳನ್ನು ಬೆರಸಿದ ರಸಾಯನಗಳನ್ನೂ ಎಂದೂ ಕೊಡಕೂಡದು. ಸಾಧ್ಯವಿದ್ದಷ್ಟು ಸೌಮ್ಯ ಔಷಧಗಳನ್ನೇ ಕೊಡಬೇಕು.

೨೨ ಇತ್ತೀಚೆಗೆ ಪಾವಲಿ, ಚವಲಿ, ಅಣೆ ಇವುಗಳು ನಿಕಲ ಧಾತುವಿನಿಂದ ಮಾಡಲ್ಪಟ್ಟಿವೆ ಪೂರ್ವದ ಎಷ್ಟೋ ಗ್ರಂಥಗಳಲ್ಲಿ ಔಷಧಗಳನ್ನು

ಕೊಡುವ ಪ್ರಮಾಣವನ್ನು ಪಾವಲೀ ತೂಕ, ಚವಲೀ ತೂಕ, ಎಂದು ಬರೆದಿದೆ. ಆ ಸಂದರ್ಭಗಳಲ್ಲಿ ಹಳೇ ನಾಣ್ಯಗಳಾದ ಬೆಳ್ಳಿಯ ಪಾವಲಿ, ಚವಲಿಗಳನ್ನೇ ಉಪಯೋಗಿಸತಕ್ಕದ್ದು. ಆಧುನಿಕ ನಿಕಲ್ ನಾಣ್ಯಗಳನ್ನುಪಯೋಗಿಸಲಾಗದು.

೨೩. ರೋಗಿಯ ಪ್ರಕೃತಿಯನ್ನು ಚೆನ್ನಾಗಿ ಪರೀಕ್ಷಿಸಬೇಕು. ಆತನ ಕೂಡ ಸವಿಮಾತಾಡಬೇಕು. ಪ್ರೇಮದಿಂದ ವರ್ತಿಸಬೇಕು. ಧೈರ್ಯ ಹೇಳಬೇಕು. ಆತನ ಸಮೀಪದಲ್ಲಿ ಆತನಿಗೆ ಕೇಳಬರುವ ಹಾಗೆ ಕುಚು ಕುಚು ಎಂದು ಅವನ ವಿಷಯವಾಗಿ ಕಿವಿಮಾತಾಡಬಾರದು. ಅವನಿಗೆ ಸಂಶಯ ಬರುವ ಹಾಗೆ ನುಡಿಯಬಾರದು; ಹಾಗು ಆತನ ಮರಣವನ್ನು ಅವನಿಗೆಂದೂ ತಿಳಿಸಬಾರದು.



ಇದು ಆನಂದವನ-ಅಗಡಿಯ ಶ್ರೀ ಶೇಷಾಚಲ ಪ್ರಿಂಟಿಂಗ ಪ್ರೆಸ್ಸಿನಲ್ಲಿ
ಭ. ಪ. ಕಾಳೆ ಇವರಿಂದ ಮುದ್ರಿಸಲ್ಪಟ್ಟಿತು.

# ಅನುಕ್ರಮಣಿಕೆ.

# ಗ್ರಂಥಕಾರನ ಪ್ರಸ್ತಾವನೆಯು.

"ಚಿಕಿತ್ಸಾ ಪ್ರಭಾಕರ" ಎಂಬ ಹೆಸರಿನ ದೊಡ್ಡ ವೈದ್ಯಕೀ ಪುಸ್ತಕವನ್ನು ಸರ್ವಜನರ ಉಪಯೋಗಕ್ಕಾಗಿ (ಮರಾಠಿಯಲ್ಲಿ) ಬರೆದಿರುತ್ತದೆ. ಅದರಲ್ಲಿ ಸಣ್ಣ ದೊಡ್ಡ ಎಲ್ಲ ರೋಗಗಳ ಲಕ್ಷಣಗಳನ್ನೂ, ಅವುಗಳಿಗಾಗಿ ಹಲವು ಬೇರೆ ಬೇರೆ ಉಪಾಯಗಳನ್ನೂ, ಔಷಧಗಳನ್ನೂ ಒತ್ತಟ್ಟಿಗೆ ಕೊಟ್ಟಿರುತ್ತದೆ. ಅದರಿಂದ ರೋಗನಿದಾನ ಮಾಡಲಿಕ್ಕೆ ಒಳ್ಳೇ ಅನುಕೂಲವಾಗಬಹುದು; ಆದರೆ ಆ ಗ್ರಂಥವು ಬಹು ದೊಡ್ಡದಿದ್ದು, ಅದಕ್ಕೆ ತಕ್ಕಂತೆ ಬೆಲೆಯೂ ಹೆಚ್ಚಾಗಿರುವದರಿಂದ ಸರ್ವಸಾಮಾನ್ಯ ಜನರಿಗೆ ಸಂಗ್ರಹಿಸಲು ಅನುಕೂಲವಾಗಬೇಕೆಂದು ಅದರೊಳಗಿನ ಮಹತ್ವದ ಈ ಜ್ವರ ಪ್ರಕರಣವನ್ನು ಪ್ರತ್ಯೇಕ ಛಾಪಿಸಿರುತ್ತದೆ.

ಸರ್ವರೋಗಗಳಲ್ಲಿ ಜ್ವರದಂಥ ತೀವ್ರ ಪ್ರಾಣಘಾತುಕವಾದ ಬೇರೆ ರೋಗವಿಲ್ಲ. ದೊಡ್ಡ ದೊಡ್ಡ ಅನುಭವಿಕ ವೈದ್ಯರಿಗೂ ಡಾಕ್ಟರರಿಗೂ ಜ್ವರಪರೀಕ್ಷೆಯ ವಿಷಯದಲ್ಲಿ ಹೇಗೆ ಭ್ರಮೆಯುಂಟಾಗುವದೆಂಬುದು ಸರ್ವಶ್ರುತನೇ ಇದೆ. ಇದ್ದರಿಂದ ಯೋಗ್ಯಕಾಲಕ್ಕೆ ತಕ್ಕ ಉಪಚಾರಗಳಾಗದಿದ್ದರೆ, ಜ್ವರವು ವಿಕೋಪಕ್ಕೆ ಹೋಗಿ ಅಸಾಧ್ಯವಾಗುವದು; ಮತ್ತು ಅದರಿಂದ ಮೃತ್ಯುವೂ ಒದಗುವದು. ಈ ಪುಸ್ತಕದಲ್ಲಿ ಎಲ್ಲ ಪ್ರಕಾರದ ಜ್ವರಗಳೂ ಅವುಗಳ ಮುಖ್ಯಾಂಗ-ಉಪಾಂಗಗಳೂ ಮತ್ತು ಅವೆಲ್ಲವುಗಳ ಮೇಲೆ ಹಲವು ಬೇರೆ ಬೇರೆ ಅನುಭವಿಕ ಔಷಧಗಳೂ ಕೊಡಲ್ಪಟ್ಟಿರುತ್ತವೆ. ಅದರಂತೆ ಸಾಂಸರ್ಗಿಕ ರೋಗ, ಪ್ಲೇಗ ಹಾಗು ಇತರ ಜಂತುಜನ್ಯಜ್ವರ, ಹವೆ ಬದಲಾದ್ದರಿಂದುಂಟಾಗುವ ಜ್ವರ, ಬೇರೆ ಕ್ಷುಲ್ಲಕ ಕಾರಣಗಳಿಂದುಂಟಾಗುವ ಜ್ವರ ಇವೆಲ್ಲವುಗಳ ಲಕ್ಷಣಗಳೂ ಉಪಚಾರಗಳೂ ವಿಶದವಾಗಿ ಕೊಡಲ್ಪಟ್ಟಿವೆ. ಪ್ಲೇಗಿನ ಕಾರಣ, ಪೂರ್ವೇತಿಹಾಸ, ಪೂರ್ವದ ಉಪಾಯ ಇವೆಲ್ಲವುಗಳ ಯಥಾಸಾಂಗ-ಲಭ್ಯವಾದಷ್ಟು ಮಾಹಿತಿಯನ್ನೂ ಸಂಗ್ರಹಿಸಿ ಬರೆದಿದೆ; ಮತ್ತು ಅನುಭವಿಕ ಉಪಾಯಗಳನ್ನೂ ಹೇಳಿದೆ; ಇದರಂತೆ ಜ್ವರ ನಿಂತ ಲಕ್ಷಣ, ಜ್ವರ ನಿಂತ ಮೇಲೆ ಹೇಗೆ ವರ್ತಿಸಬೇಕು, ಶಕ್ತಿ ಬರಲಿಕ್ಕೆ ಯಾವ ಉಪಾಯ ಮಾಡಬೇಕು ಮುಂತಾದ್ದರ ಸಂಪೂರ್ಣ ಮಾಹಿತಿಯನ್ನು ಸರ್ವ ಮಾನ್ಯವಾಗುವಂತೆ ಕೊಟ್ಟಿದೆ; ಮತ್ತು ಜ್ವರದಲ್ಲಿ ಆಗುವ ಇತರ ಉಪದ್ರವಗಳೂ, ಅವುಗಳ ಲಕ್ಷಣಗಳೂ ಅವನ್ನು ನಿವಾರಿಸುವ ಉಪಾಯಗಳೂ ಅಲ್ಲಲ್ಲಿ ಬರೆಯಲ್ಪಟ್ಟಿರುತ್ತವೆ. ಪ್ರತಿಯೊಂದು ಕುಟುಂಬದಲ್ಲಿ ಈ ಪುಸ್ತಕವನ್ನು ಸಂಗ್ರಹಿಸಿ, ಪ್ರಸಂಗ ಬಿದ್ದಾಗ ಉಪಯೋಗ ಮಾಡಿಕೊಳ್ಳಲಿಕ್ಕೆ ಸುಲಭವಾಗ

ಬೇಕೆಂದು, ಪುಸ್ತಕವ(ಭಾಷೆಯು)ನ್ನು ಸರ್ವರಿಗೂ ತಿಳಿಯುವಂತಹ ಸುಲಭ ಶೈಲಿಯಲ್ಲಿ ಬರೆದಿರುತ್ತದೆ. ಆದುದರಿಂದ ಪ್ರತಿಯೊಬ್ಬ ಕೌಟುಂಬಿಕನು ಈ ಪುಸ್ತಕವನ್ನು ಅವಶ್ಯವಾಗಿ ಸಂಗ್ರಹಿಸತಕ್ಕದ್ದು.

ಇದರಂತೆಯೇ ಬಾಲರೋಗ, ಸ್ತ್ರೀರೋಗ-ಮುಂತಾದ ಪ್ರಕರಣಗಳನ್ನಾದರೂ ಪ್ರತ್ಯೇಕವಾಗಿ ಛಾಪಿಸಲುದ್ಯುಕ್ತವಾಗಿರುತ್ತೇವೆ. ಅವುಗಳಾದರೂ ಈ ಪುಸ್ತಕದಂತೆಯೇ ಉಪಯುಕ್ತಗಳಾಗುವವೆಂದು ಎದೆ ಚಟ್ಟಿ ಹೇಳಬಲ್ಲೆವು.

ಓಗಲೆವಾಡಿ,
ಮಿತಿ ಕಾರ್ತಿಕ ಬ| ೮ ಶಕೆ ೧೮೪೬. } ಪ್ರಭಾಕರ ಬಾಳಾಜಿ ಓಗಲೆ.

---

## ಭಾಷಾಂತರಕರ್ತನ ಮುನ್ನುಡಿ.

ಕನ್ನಡದಲ್ಲಿ ವೈದ್ಯಕೀಯ ಗ್ರಂಥಗಳೇ ಅಪರೂಪ. ಅದರಲ್ಲೂ ಜ್ವರದಂಥ ಅತಿ ಮಹತ್ವದ ವಿಷಯವನ್ನು ಸಾಂಗೋಪಾಂಗವಾಗಿ ವಿವೇಚಿಸಿ, ಪ್ರತಿಯೊಂದು ಕಡೆಗೆ ಸುಲಭ ಸಾಧ್ಯವಾಗಿ ದೊರೆಯುವ ಗಿಡಮೂಲಿಕೆಗಳ ಔಷಧಿಗಳನ್ನು ತಿಳಿಸುವ ವೈದ್ಯಕೀಯ ಗ್ರಂಥಗಳಂತೂ ಇಲ್ಲವೇ ಇಲ್ಲವೆಂದು ಅನ್ನಬಹುದು. ಪ್ರಸ್ತುತದ ಜ್ವರ ಪ್ರಕರಣದಲ್ಲಿ ನೆಗಡಿ-ಕೆಮ್ಮಿನ ಜ್ವರದಿಂದ ಮಹಾಸನ್ನಿಪಾತ-ಪ್ಲೇಗದಂಥ ಅತಿ ದುಸ್ಸಾಧ್ಯವಾದ ಜ್ವರಗಳ ವಿವೇಚನವು ಬಹು ಚೆನ್ನಾಗಿ ಮಾಡಲ್ಪಟ್ಟಿದ್ದು, ಔಷಧಿ-ಪಥ್ಯಗಳ ಯೋಜನೆಯಂತೂ ತೀರ ಸುಲಭವಾಗಿದೆ. ಈ ಗ್ರಂಥದ ಸಹಾಯದಿಂದ ಪ್ರತಿಯೊಂದು ಕುಟುಂಬದವರು ತಮ್ಮ ಆರೋಗ್ಯವನ್ನು ಸಹಜವಾಗಿ ಕಾಪಾಡಿಕೊಳ್ಳಬಹುದಾಗಿದೆ. ಓದು-ಬರಹ ಕಲಿತಂಥ ಎಷ್ಟೋ ಜನ ಹೆಣ್ಣುಮಕ್ಕಳು ಕೂಡ ಈ ಗ್ರಂಥವನ್ನು ನೋಡಿಕೊಂಡು ತಮ್ಮ ಮಕ್ಕಳ ಆರೋಗ್ಯವನ್ನು ಸ್ಥಿರಪಡಿಸಿಕೊಳ್ಳುತ್ತಿರುವರು. ಇಂಥ ಉಪಯುಕ್ತ ಹಾಗು ಮಹತ್ವದ ಗ್ರಂಥವನ್ನು ಬಹು ಶ್ರಮಬಟ್ಟು (ಅನುಭವದಿಂದ) ಬರೆದ ಗ್ರಂಥಕರ್ತರ ಅಪ್ಪಣೆ ಪಡೆದು ಭಾಷಾಂತರಿಸಿ, ನನ್ನ ಕನ್ನಡ ಸಮಾಜದ ಮುಂದಿರಿಸಿರುತ್ತೇನೆ. ಈ ಗ್ರಂಥಕ್ಕೆ ಚೆನ್ನಾಗಿ ಆಶ್ರಯವು ದೊರೆತರೆ, 'ಚಿಕಿತ್ಸಾ ಪ್ರಭಾಕರ'ವೆಂಬ ಎಲ್ಲ ರೋಗಗಳ ನಿದಾನ, ಚಿಕಿತ್ಸೆ, ಔಷಧಿ ಯೋಜನೆಗಳನ್ನೊಳಗೊಂಡ ಬೃಹತ್ ಗ್ರಂಥವನ್ನು ಪರಿವರ್ತಿಸಿ ನಮ್ಮ ಕನ್ನಡಿಗರಿಗೆ ಅರ್ಪಿಸಬೇಕೆಂದಿರುತ್ತೇನೆ.

ಜಗದೀಶನು ಸರ್ವರಿಗೂ ಅಖಂಡವಾದ ಆರೋಗ್ಯವನ್ನೀಯಲಿ!

ಆನಂದವನ.
ತಾ| ೧-೧-೧೯೩೧ } ಕನ್ನಡಿಗರ ಸೇವಕ,
ಭಿ. ಪ. ಕಾಳೆ.

# ಶರೀರದ ಉಷ್ಣತೆಯನ್ನಳೆಯುವ ಯಂತ್ರವು.

## [ಥರ್ಮಾಮೀಟರ.]




ಶರೀರದ ಉಷ್ಣತೆಯನ್ನು ಯಾವ ಯಂತ್ರದಿಂದ ಅಳೆಯಬಹುದೋ ಆ ಯಂತ್ರಕ್ಕೆ ಇಂಗ್ಲಿಷ ಭಾಷೆಯಲ್ಲಿ "ಥರ್ಮಾಮೀಟರ" ಎಂದೆನ್ನುತ್ತಾರೆ. ಜ್ವರದ ಮಾನವನ್ನು ಕಂಡು ಹಿಡಿಯುವದಕ್ಕೆ ಇದು ಅತ್ಯುಪಯುಕ್ತವಾಗಿರುತ್ತದೆ. ಮೊಟ್ಟ ಮೊದಲು ಜ್ವರಗ್ರಸ್ತನಾದವನ ಶರೀರದೊಳಗಿನ ಉಷ್ಣತೆಯನ್ನಳೆಯಬೇಕು. ಥರ್ಮಾಮೀಟರವೆಂದರೆ ಒಂದು ಕಾಜಿನಕೊಳವೆಯಲ್ಲಿ ಪಾರಜವನ್ನು ಹಾಕಿ, ಆ ಕೊಳವೆಯ ಬಾಯಿಯು ಮುಚ್ಚಲ್ಪಟ್ಟಿರುತ್ತದೆ. (ಮಗ್ಗಲಿನ ಚಿತ್ರವನ್ನು ನೋಡಿರಿ) ಮತ್ತು ಆ ಕೊಳವೆಯಲ್ಲಿ ಬೇರೊಂದು ಚಿಕ್ಕ ಕೇಶಾಕೃತಿಯ ಕೊಳವೆಯಿರುತ್ತದೆ. ಪಾರಜಕ್ಕೆ ಕೊಂಚ ಉಷ್ಣತೆಯೂ ಸಹನವಾಗುವದಿಲ್ಲ. ಆದ್ದರಿಂದ ಅತ್ಯಲ್ಪ ಉಷ್ಣತೆ ತಗಲಿದರೂ ಕೂಡ ಅದು ಒಳಗಿನ ಕೇಶಾಕೃತಿಯ ಕೊಳವೆಯಲ್ಲಿ ಸೇರಿ, ಮೇಲಕ್ಕೇರಹತ್ತುತ್ತದೆ.

ಆ ಕೊಳವೆಯ ಮೇಲೆ ಕೂಡ್ರಿಸಿದ ಮತ್ತೊಂದು ಕೊಳವೆಯ ಮೇಲೆ ಉಷ್ಣತೆಯನ್ನು ತಿಳಿಯುವ ಅಂಶಗಳ ಅಂಕಿಗಳು ಬರೆಯಲ್ಪಟ್ಟಿರುತ್ತವೆ. ಆದ್ದರಿಂದ ಶರೀರದೊಳಗೆ ಉಷ್ಣತೆಯೆಷ್ಟಿರುತ್ತದೆಂಬದು ಗೊತ್ತಾಗುತ್ತದೆ. ಆ ಕೊಳವೆಯ ಮೇಲೆ ಉಷ್ಣತೆಯನ್ನು ತೋರಿಸುವ (ಅಂಶಗಳು) ೯೫ರಿಂದ ೧೧೦ರ ವರೆಗೆ ಅಂಕಿಗಳಿರುತ್ತವೆ. ಅದಕ್ಕಿಂತ ಶರೀರದ ಉಷ್ಣತೆಯು ಹೆಚ್ಚು ಕಡಿಮೆಯುಂಟಾಗಲಾರದು. ಪ್ರತಿಯೊಂದು ಅಂಶದ ಭಾಗಗಳನ್ನು ತೋರಿಸುವದಕ್ಕಾಗಿ ಒಂದು ಅಂಶದಿಂದ ಮತ್ತೊಂದು ಅಂಶದ ವರೆಗೆ ಐದು ಗೆರೆಗಳು ತೋರಿಸಿರುತ್ತವೆ. ಆ ಐದು ಒಳಭಾಗಗಳಲ್ಲಿಯೇ ನಡುವೆ ಮತ್ತೊಂದೊಂದು ಸಣ್ಣ ಗೆರೆಯಿರುತ್ತವೆ. ಆಕೃತಿಯೊಳಗೆ ಉಷ್ಣತೆಯ ದರ್ಶಕವು ೯೮ ಅಂಶದ ವರೆಗೆ ಏರುತ್ತದೆ. ಅಲ್ಲ

ಬಾಣದ ತುದಿಯಂತೆ ಗುರ್ತ ತೋರಿಸಲ್ಪಟ್ಟಿರುತ್ತದೆ. ೯೮.೪ಅಂಶ ಇದು ಮನುಷ್ಯನ ಶರೀರದ ಸ್ವಾಭಾವಿಕ ಉಷ್ಣತೆಯಾಗಿರುತ್ತದೆ.

ಆ ಸ್ವಾಭಾವಿಕ ಉಷ್ಣತೆಯು ವಿಶೇಷ ಕಾರಣದ ಹೊರತು ಹೆಚ್ಚು ಕಡಿಮೆಯಾಗುವದಿಲ್ಲ. ೯೫ರ ಮೇಲಿರುವ ಉಷ್ಣತಾದರ್ಶಕವು ೧೦೦ರ ವರೆಗೆ ಏರಿದರೆ ೧೦೦ ಅಂಶ ಉಷ್ಣತೆಯಿದೆಯೆಂದು ತಿಳಿಯತಕ್ಕದ್ದು. ಇದರಂತೆಯೇ ಉಷ್ಣತಾದರ್ಶಕ ಪಾರಜವು ಯಾವ ಅಂಶದ ವರೆಗೆ ಏರುವದೋ ಅಷ್ಟು ಅಂಶ ಉಷ್ಣತೆಯಿರುತ್ತದೆಂದು ತಿಳಿಸುತಕ್ಕದ್ದು.

ಉಷ್ಣತಾಮಾಪಕ ಯಂತ್ರಗಳು ಎರಡು ಪ್ರಕಾರದವಿರುತ್ತವೆ. ಒಂದಕ್ಕೆ ಸೆಂಟಿಗ್ರೇಟ ಎಂತಲೂ, ಎರಡನೇದಕ್ಕೆ ಫಾರೆನ್‌ಹೀಟ ಎಂತಲೂ ಅನ್ನುವರು. ಜ್ವರ ಮೊದಲಾದವುಗಳಲ್ಲಿಯು ಉಷ್ಣತೆ ತಿಳಿಯುವ ಸಲುವಾಗಿ ಫಾರೆನ್‌ಹೀಟ ಎಂಬ ಯಂತ್ರವನ್ನೇ ಉಪಯೋಗಿಸುವರು. ಆರೋಗ್ಯವಂತರ ಶರೀರದ ಉಷ್ಣತೆಯು ೯೮.೪ ಅಂಶವೆಂದು ಗೊತ್ತಾಗಿದೆ; ಆದರೆ ಎಷ್ಟೋ ಪ್ರಸಂಗಗಳಲ್ಲಿ ೯೭ರ ವರೆಗೂ ಇಳಿಯುವದು. ಇಲ್ಲವೆ ೯೯ರ ವರೆಗೆ ಸಹ ಏರುವದು. ಎಷ್ಟೋ ರೋಗಗಳಲ್ಲಿ ಮನುಷ್ಯನ ಶರೀರದ ಉಷ್ಣತೆಯು ಮಾನವು ೮೦.೭೫ ವರೆಗೆ ಸಹ ಇಳಿದಿರುತ್ತದೆ. ಕೃತಿಮ ರೀತಿಯಿಂದಲೂ ಶರೀರದ ಉಷ್ಣತೆಯನ್ನು ಹೆಚ್ಚು-ಕಡಿಮೆ ಮಾಡಲಿಕ್ಕೆ ಬರುತ್ತದೆ. ಒಟ್ಟಿನಲ್ಲಿ ೯೯ ಅಂಶಕ್ಕಿಂತ ಹೆಚ್ಚು ಉಷ್ಣತೆಯಿತ್ತೆಂದರೆ ಜ್ವರಬಂದಿದೆ ಎಂದು ತಿಳಿಯಬೇಕು; ಹಾಗು ೯೭ಕ್ಕಿಂತ ಉಷ್ಣತೆಯು ಮಾನವು ಕಡಿಮೆಯಿದ್ದರೆ, ಪ್ರಾಣಕ್ಕೆ ಭೀತಿಯುಂಟಾಗಿದೆಯೆಂದು ಭಾವಿಸಬೇಕು; ಆದರೆ ಇದಕ್ಕೆ ಅಪವಾದವಾಗಿ ಎಷ್ಟೋ ಜನರ ಶರೀರದ ಉಷ್ಣತೆಯು ೯೬ ಅಂಶವಿದ್ದದ್ದೂ ಕಂಡು ಬರುತ್ತದೆ. ಪ್ರತಿಯೊಂದು ತರದ ಉಷ್ಣತಾಮಾಪಕ ಯಂತ್ರದ ಮೇಲೆ ಅದನ್ನೆಷ್ಟು ಮಿನೀಟು ಹಚ್ಚತಕ್ಕದ್ದೆಂಬದನ್ನು ವಿಶೇಷ ಬರೆದಿರುತ್ತದೆ. ಯಾವ ಯಂತ್ರದ ಮೇಲೆ ಅದನ್ನು ಬರೆದಿರುವದಿಲ್ಲವೋ, ಅದನ್ನು ೫ ಮಿನೀಟುಗಳ ವರೆಗೆ ಹಚ್ಚತಕ್ಕದ್ದು. ಯಂತ್ರದ ಮೇಲೆ ಬರೆದ ಮಿನೀಟುಗಳಿಗಿಂತ ಒಂದು-ಒಂದೂವರೆ ಮಿನೀಟು ಹೆಚ್ಚು ಹಚ್ಚತಕ್ಕದ್ದು. ಹೆಚ್ಚು ವೇಳೆ ಹಚ್ಚುವದರಿಂದ ಪಾರಜವು ಹೆಚ್ಚಿಗೇನೂ ಏರುವದಿಲ್ಲ. ಯಾಕೆಂದರೆ, ಉಷ್ಣತೆಯು ಪರಮಾವಧಿಗಿಂತ ಹೆಚ್ಚು ಅಂಶದ ವರೆಗೆ ಪಾರಜವು ಎಂದೂ ಏರಲಾರದೆಂಬದನ್ನು ಎಲ್ಲರೂ ಲಕ್ಷ್ಯದಲ್ಲಿಡಬೇಕು.

ಶರೀರದ ಉಷ್ಣತೆಯನ್ನು ೪ ಸ್ಥಳಗಳಲ್ಲಿ ಅಳೆದುಕೊಳ್ಳಲಿಕ್ಕೆ ಬರುತ್ತಿದೆ. ಬಗಲು, ಬಾಯಿ, ಮೊಣಕಾಲ ಸಂದು ಹಾಗು ಗುದ ಈ ನಾಲ್ಕು ಸ್ಥಳಗಳಲ್ಲಿ ಅಳೆದುಕೊಳ್ಳಲಿಕ್ಕೆ ಬರುತ್ತಿದ್ದರೂ ಬಗಲಲ್ಲಿಯೇ ಪ್ರಾಮುಖ್ಯವಾಗಿ ಅಳೆಕೊ

ಳ್ಳುವ ಪರಿಪಾಠ ಬಿದ್ದಿದೆ. ಬಗಲೊಳಗಿನಗಿಂತ ಬಾಯೊಳಗಿನ ಉಷ್ಣತೆಯು ವಾಸವು ಅರ್ಧ ಡಿಗ್ರಿ(ಅಂಶ) ಹೆಚ್ಚು ಇರುತ್ತದೆ. ಗುದದ್ವಾರದೊಳಗಿನ ಉಷ್ಣತೆಯು ಅದಕ್ಕೂ ಹೆಚ್ಚಿರುತ್ತದೆ. ರೋಗಿಯ ವಯಸ್ಸು, ಉಷ್ಣತೆ ಅಳೆಯುವ ಕಾಲ, ವ್ಯಾಯಾಮ, ಋತುಮಾನ, ಹವೆ ಮತ್ತು ತಿನ್ನತಕ್ಕ ಆಹಾರ ಇವು ಉಷ್ಣತೆಯ ಪ್ರಮಾಣವನ್ನು ಹೆಚ್ಚು ಕಡಿಮೆ ಮಾಡಲಿಕ್ಕೆ ಕಾರಣಗಳಾಗುತ್ತವೆ. ದೊಡ್ಡವರಿಗಿಂತ ಚಿಕ್ಕಮಕ್ಕಳ ಉಷ್ಣತೆಯು ಒಂದು ಅಂಶದಷ್ಟು ಹೆಚ್ಚು ಇರುತ್ತದೆ. ಪ್ರಾಯದ ಕಾಲದಲ್ಲಿ ಮನುಷ್ಯನ ಉಷ್ಣತೆಯು ಕಡಿಮೆಯಾಗಿರುತ್ತದೆ; ಆದರೆ ವಾರ್ಧಕ್ಯದಲ್ಲಿ ಅದು ಮತ್ತೆ ಬೆಳೆಯಹತ್ತುತ್ತದೆ. ಆಗಲೆ ಹುಟ್ಟಿದ ಅರ್ಭಕನ ಶರೀರದ ಉಷ್ಣತೆಯನ್ನು ನೋಡಿದರೆ ಅದು ದೊಡ್ಡವರಿಗಿಂತ ೧ ಅಂಶದಷ್ಟಾದರೂ ಹೆಚ್ಚಾಗಿರುತ್ತದೆ. ಅದರಂತೆ ಮುಪ್ಪಿನ ಕಾಲದಲ್ಲಿಯೂ ಅದು ಹೆಚ್ಚಾಗಿರುತ್ತದೆ. ಗಂಡಸರಿಗಿಂತ ಹೆಂಗಸರ ಉಷ್ಣತೆಯು ಅಧಿಕವಾಗಿರುತ್ತದೆ. ಬೆಳಗಿನ ೯ ಗಂಟೆಯಿಂದ ಸಾಯಂಕಾಲದ ೪ ಗಂಟೆಯ ವರೆಗೆ ಪ್ರತಿಯೊಬ್ಬನ ವ್ಯಕ್ತ ಉಷ್ಣತೆಯು ಅಧಿಕವಾಗಿರುತ್ತದೆ. ಅಲ್ಲಿಂದ ರಾತ್ರಿಯ ೧೨ ಗಂಟೆಯ ವರೆಗೆ ಅದು ಕಡಿಮೆಯಾಗಹತ್ತಿ, ಬೆಳಗಿನ ೩-೪ ಗಂಟೆಯ ವರೆಗೆ ಇದ್ದ ಸ್ಥಿತಿಯಲ್ಲಿ ಸ್ಥಿರವಾಗಿರುತ್ತದೆ. ಬೆಳಗಿನ ಝಾವದ ಹಾಗು ಸಾಯಂಕಾಲದ ಉಷ್ಣತೆಯು ಮಾನದಲ್ಲಿ ಒಂದು ಒಂದೂವರೆ ಅಂಶದಷ್ಟು ಹೆಚ್ಚುಕಡಿಮೆಯಾಗಿರುತ್ತದೆ. ಬೆಳಗಿನ ಝಾವದ ೩ ಗಂಟೆಗೂ ಸಾಯಂಕಾಲದ ೩ ಗಂಟೆಗೂ ಉಷ್ಣತೆಯು ವಾಸವು ತೀರ ಕಡಿಮೆಯಾಗಿರುತ್ತದೆ. ದೇಹವನ್ನು ಕಷ್ಟಪಡಿಸಿ ದುಡಿಯುತ್ತಿರುವಾಗಿನ ಶರೀರದ ಉಷ್ಣತೆಯು ಅಧಿಕವಾಗುತ್ತದೆ. ಚಹ, ಕಾಫಿ, ಸರೆ ಮುಂತಾದ ಪೇಯಗಳೂ, ದ್ವಿಪಕ್ವ-ತ್ರಿಪಕ್ವಾದಿ ಜಡಾನ್ನಗಳೂ ಶರೀರದ ಉಷ್ಣತೆಯು ಬೆಳವಣಿಗೆಗೆ ಕಾರಣವಾಗುತ್ತವೆ.

ಥರ್ಮಾಮಿಟರನ್ನು ಯಾವನೊಬ್ಬನಿಗೆ ಹಚ್ಚುವ ಮೊದಲು ಅದರಲ್ಲಿ ಪಾರಜವಿರುವ ಭಾಗವನ್ನು ಕೆಳಗಡೆ ಮಾಡಿ ಹಿಡಿದು ಅದನ್ನು ಮೆಲ್ಲಮೆಲ್ಲಗೆ ಕೊಡವಬೇಕು; ಅಂದರೆ ಉಷ್ಣತಾದರ್ಶಕ ಪಾರಜವು ಮೇಲೆ ಏರಿದ್ದರೆ ಕೆಳಗಿಳಿದು ತನ್ನ ಸ್ಥಳಕ್ಕೆ ಬಂದು ನಿಲ್ಲುತ್ತದೆ. ಅದು ೯೫ ಅಂಶಕ್ಕೆ ಬಂದಿತೆಂಬದನ್ನು ಮನವರಿಕೆ ಮಾಡಿಕೊಂಡು ಪಾರಜವಿದ್ದ ಭಾಗವನ್ನು ರೋಗಿಯ ಬಗಲಲ್ಲಿಟ್ಟು, ಅಥವಾ ಮತ್ತಾವ ಸ್ಥಳದಲ್ಲಿಡುವದು ಅವಶ್ಯವಿರುವದೋ ಅಲ್ಲಿಟ್ಟು, ಆ ಯಂತ್ರವನ್ನು ಎಷ್ಟು ಮಿನೀಟುಗಳ ವರೆಗೆ ಹಚ್ಚಬೇಕೆಂದು ಅದರ ಮೇಲೆ ಬರೆದಿರುವದೋ ಅಷ್ಟು ಮಿನೀಟುಗಳ ವರೆಗೆ ತಡೆಯಬೇಕು. ನಂತರ ಹೊರಗೆ ತೆಗೆದು ನೋಡಬೇಕು. ಅದರೊಳಗಿನ ಪಾರಜವು ೯೫ ಅಂಶಕ್ಕೇ ಅಂದರೆ ಇದ್ದಷ್ಟಕ್ಕೇ

ಇಷ್ಟರ ಥರ್ಮಾಮೀಟರು ಚೆನ್ನಾಗಿ ಹತ್ತಿರುವದಿಲ್ಲೆಂದು ತಿಳಿಯಬೇಕು; ಹಾಗು ಮತ್ತೆ ಅದನ್ನು ಸರಿಯಾಗಿ ಹಚ್ಚಬೇಕು. ಎಷ್ಟೋ ಪ್ರಸಂಗಗಳಲ್ಲಿ ಮನಸ್ತಾಪ, ರಸಾಯನ ಕ್ರಿಯೆ, ಕ್ರೋಧ, ಹರ್ಷ ಇವುಗಳ ಉತ್ತೇಜನದಿಂದಲೂ ರೋಗಿಯ ಶರೀರದ ಉಷ್ಣತಾಮಾನವು ಹೆಚ್ಚುಕಡಿಮೆಯಾಗುವ ಸಂಭವವಿರುತ್ತದೆ.

ಕೆಲ ಕೆಲವು ಪ್ರಸಂಗಗಳಲ್ಲಿ ಬಗಲೊಳಗಿಟ್ಟ ಥರ್ಮಾಮೀಟರವು ಶರೀರಕ್ಕೆ ಚೆನ್ನಾಗಿ ಸೋಂಕದೆ, ಮೇಲಿನ ಅರಿವೆ-ಅಂಚಡಿಗಳಿಗೇ ಹತ್ತುವ ಸಂಭವವಿರುವದರಿಂದ ಉಷ್ಣತೆಯ ಪ್ರಮಾಣವು ಚೆನ್ನಾಗಿ ತಿಳಿಯುವದಿಲ್ಲ. ಅದರಂತೆ ಬಗಲೊಳಗೆ ಬೆವರು ಬಂದಿದ್ದರೂ ತಿಳಿಯಲಾರದು. ಆಗ ರೋಗಿಯ ಬೆವರನ್ನು ಚೆನ್ನಾಗಿ ಒರಸಿ, ಬಳಿಕ ಅಲ್ಲಿ ಥರ್ಮಾಮೀಟರನ್ನಿಡಬೇಕು. ಥರ್ಮಾಮೀಟರನ್ನು ಹಚ್ಚುವ ಪೂರ್ವದಲ್ಲಿ ರೋಗಿಗೆ ಸ್ವಸ್ಥವಾಗಿ ಬಿದ್ದುಕೊಂಡಿರಲಿಕ್ಕೆ ತಿಳಿಸಬೇಕು; ಹಾಗು ಅದನ್ನಿಟ್ಟ ಮೇಲೆ ಆ ಕಡೆಯ ಭುಜವನ್ನು ತುಸ ಒತ್ತಿಹಿಡಿಯಬೇಕು. ಅಂದರೆ ಥರ್ಮಾಮೀಟರು ಪೊಳ್ಳಿನಲ್ಲುಳಿಯದೆ, ಯೋಗ್ಯ ಉಷ್ಣತೆಯನ್ನು ತೋರಿಸುವದು; ಮತ್ತು ಅದರಿಂದ ಥರ್ಮಾಮೀಟರು ಕೆಳಗೆ ಬಿದ್ದು ಒಡೆಯುವ ಅಂಜಿಕೆಯೂ ಉಳಿಯಲಾರದು.

ಥರ್ಮಾಮೀಟರನ್ನು ಬಾಯೊಳಗೆ ಕೊಟ್ಟು ನೋಡುವ ಪ್ರಸಂಗದಲ್ಲಿ ಮೊದಲು ಅದನ್ನು ಚೆನ್ನಾಗಿ ತೊಳೆದು ಒರಸಬೇಕು. ಬಳಿಕ ಅದನ್ನು ರೋಗಿಯ ನಾಲಿಗೆಯ ಕೆಳಗೆ ಹಿಡಿಯಲಿಕ್ಕೆ ಕೊಡಬೇಕು; ಆದರೆ ಹಲ್ಲಿನ ಆಘಾತವು ಅದರ ಮೇಲಾಗದಂತೆ ಬರೇ ತುಟಿಗಳಿಂದಲೇ ಒತ್ತಿ ಹಿಡಿಯಲಿಕ್ಕೆ ತಿಳಿಸಬೇಕು; ಹಾಗು ನಿಯಮಿತ ಕಾಲದ ನಂತರ ಹೊರಗೆ ತೆಗೆದು ನೋಡಬೇಕು.

ಎಷ್ಟೋ ಉಷ್ಣತಾಮಾಪಕ ಯಂತ್ರಗಳು ಬಹಳ ಸೂಕ್ಷ್ಮವಿರುವದರಿಂದ ಅವನ್ನು ಬಗಲೊಳಗಿಂದ ಇಲ್ಲವೆ ಬಾಯೊಳಗಿಂದ ಹೊರಗೆ ತೆಗೆದು ನೀಟಾಗಿ ಹಿಡಿದೊಡನೆ ಅವುಗಳೊಳಗಿನ ಉಷ್ಣತೆಯು ಒಮ್ಮೆಲೆ ಕೆಳಗಿಳಿಯುತ್ತದೆ. ಅದರಿಂದ ಉಷ್ಣತೆಯು ಸರಿಯಾಗಿ ತಿಳಿಯುವದಿಲ್ಲ. ಆದ್ದರಿಂದ ಯಂತ್ರವನ್ನು ಹೊರಗೆ ತೆಗೆದೊಡನೆ ಅದನ್ನು ನೆಟ್ಟಗೆ ನಿಲ್ಲಿಸಿ ಉಷ್ಣತೆಯ ಅಂಶಗಳನ್ನೆಣಿಸ ಹೋಗದೆ ಅಡ್ಡ ಹಿಡಿದೇ ಅಂಶಗಳನ್ನು ನೋಡಿಕೊಳ್ಳಬೇಕು. ಹೀಗೆ ಮಾಡುವದರಿಂದ ಜರ್ಕ ಪಾರಜವು ಕೆಳಗಿಳಿಯುವ ಅಂಜಿಕೆಯಿಲ್ಲ; ಆದರೆ ಉತ್ತಮ ಪ್ರಕಾರದ ಥರ್ಮಾಮೀಟರುಗಳನ್ನು ಹೇಗೆ ಹಿಡಿದರೂ ಅವುಗಳ ಪಾರಜವು ಕೆಳಗಿಳಿಯುತ್ತಿರುವದಿಲ್ಲ; ಹಾಗು ತೊಂದರೆಯಾಗುವದಿಲ್ಲ. ಥರ್ಮಾಮೀಟರನ್ನುಪಯೋಗಿಸುವಾಗ ಪ್ರತಿಯೊಂದು ಸಾರೆ ಅದನ್ನು ತೊಳೆದು ಚೆನ್ನಾಗಿ ಒರಸಿಯೇ ಹಚ್ಚಬೇಕು. ಅದನ್ನು ತೊಳೆಯಲಿಕ್ಕೆ ರಸಕರ್ಪೂರದ ನೀರನ್ನುಪಯೋಗಿಸು

ವದು ಯೋಗ್ಯವು. ಈ ನೀರಿನಿಂದ ರೋಗಜಂತುಗಳು ಖಂಡಿತವಾಗಿ ನಾಶವಾಗುವವು. ಹೀಗೆ ಮಾಡುವದರಿಂದ ಒಬ್ಬ ರೋಗಿಯ ಬಾಯೊಳಗಿನ ರೋಗಜಂತುಗಳ ಸಂಸರ್ಗವು ಇನ್ನೊಬ್ಬನಿಗೆ ಆಗಿ ಅನರ್ಥವೊದಗಲಿಕ್ಕಿಲ್ಲ.

ಹಸುಗೂಸುಗಳಿಗೆ ಥರ್ಮಾಮೀಟರನ್ನು ಹಚ್ಚಬೇಕಾದರೆ ಅವುಗಳ ತೊಳ ಕಾಲ ಸಂದಿಗೆ ಹಚ್ಚಬೇಕು. ಯಾಕಂದರೆ ಸ್ವಾಭಾವಿಕವಾಗಿಯೇ ಕೂಸುಗಳು ಕಾಲನ್ನು ಮೇಲಕ್ಕೆತ್ತುತ್ತಿರುತ್ತವೆ.

ಗುದದ್ವಾರದಲ್ಲಿ ಥರ್ಮಾಮೀಟರ ಹಚ್ಚುವ ಪ್ರಸಂಗವು ಸಹಸಾ ಒದಗುವದಿಲ್ಲ. ಆದರೂ ರೋಗಿಯು ಅಶ್ಯವಸ್ಥೆಯಲ್ಲಿದ್ದು, ಆತನ ಚಲನವಲನದ ಮೂಲಕ ಬೇರೆ ಕಡೆಗೆ ಹಚ್ಚಲಿಕ್ಕೆ ಸಾಧ್ಯವಿರದಿದ್ದಾಗ ಮಾತ್ರ ಗುದದ್ವಾರದಲ್ಲಿಯೇ ಇಡಬೇಕಾಗುತ್ತದೆ.

ಥರ್ಮಾಮೀಟರದ ಹೊರತು ಕೈಯೊಳಗಿನ ನಾಡಿಯನ್ನು ಪರೀಕ್ಷಿಸಿ ಜ್ವರವನ್ನು ತಿಳಿಯುವ ಪ್ರಾಚೀನ ಪದ್ಧತಿಯುಂಟು. ಆ ಬಗ್ಗೆ ಚಿಕಿತ್ಸಾ ಪ್ರಭಾಕರ ಗ್ರಂಥದೊಳಗೆ ಅಷ್ಟವಿಧ ಪರೀಕ್ಷೆಯಲ್ಲಿ ನಾಡೀ ಪರೀಕ್ಷೆಯ ವಿಷಯವನ್ನು ವಿಶದವಾಗಿ ಕೊಟ್ಟಿರುತ್ತಾರೆ. ಅದರ ಮೇಲಿಂದಲೂ ಜ್ವರವನ್ನು ಪರೀಕ್ಷಿಸಬಹುದು.





# ಚಿಕಿತ್ಸಾಪ್ರಭಾಕರ.

# ಜ್ವರ.



## ಜ್ವರ ಬರಲಿಕ್ಕೆ ಕಾರಣಗಳು:—

ಹೆಚ್ಚಾಗಿ ನೀರು ಕುಡಿಯೋಣ, ಅವೇಳೆಯಲ್ಲಿ ಊಟ ಮಾಡೋಣ, ಮಿತಿಮೀರಿ ತಿನ್ನೋಣ, ತಂಗಳ ಆಹಾರವನ್ನುಣ್ಣೋಣ ಅಥವಾ ಹಸಿ ಬಿಸಿ ಮಿಶ್ರ ಆಹಾರ ಮಾಡೋಣ ಈ ಕಾರಣಗಳಿಂದಲೂ; ಹಗಲು ಮಲಗುವದೂ, ರಾತ್ರಿಯಲ್ಲಿ ನಿದ್ದೆ ಮಾಡದಿರುವದೂ, ಮಲ-ಮೂತ್ರಗಳನ್ನವರೋಧಿಸುವದೂ ಮುಂತಾದವುಗಳಿಂದಲೂ; ಅಧಿಕ ಶ್ರಮ, ಸಂತಾಪ-ಭಯ-ಚಿಂತೆ ಮೊದಲಾದವುಗಳಿಂದಲೂ ಜ್ವರ ಬರಹತ್ತುತ್ತವೆ.

ಎಲ್ಲ ರೋಗಗಳಲ್ಲಿ ಜ್ವರವು ಶ್ರೇಷ್ಠ ರೋಗವಾಗಿದ್ದಂತೆ, ಬಹು ದುಷ್ಟ ಹಾಗು ಘಾತುಕವೂ ಆಗಿರುತ್ತದೆ. ಉಳಿದ ರೋಗಗಳಿಗಿಂತಲೂ ಜ್ವರದಿಂದ ಸಾಯುವವರ ಸಂಖ್ಯೆಯು ಹೆಚ್ಚಾಗಿರುತ್ತದೆ. ಇದು ಮನುಷ್ಯನ ಓಜಸ್ಸು ಅಂದರೆ ಎಲ್ಲ ಧಾತುಗಳ ತೇಜವನ್ನು ಭಕ್ಷಿಸುತ್ತದೆ. ಜ್ವರ ಹುಟ್ಟಿದಂದಿನಿಂದ ಕಡೆಯುವರೆಗೂ ಪ್ರಸಿದ್ಧ ವೈದ್ಯರಿಗೂ ಕೂಡ ಅದರ ಮಟ್ಟು ತಿಳಿಯುವದಿಲ್ಲ. ಹೆಸರುವಾಸಿಯಾದ ಚಿಕಿತ್ಸಕರು ಕೂಡ ಜ್ವರದ ಪರೀಕ್ಷೆಯಲ್ಲಿ ಕಕ್ಕಾಬಿಕ್ಕಿಯಾಗುತ್ತಾರೆ. ಈ ಭಯಂಕರ ರೋಗವು ನಾನಾ ಕಾರಣಗಳಿಂದ ಅತಿ ತೀವ್ರ ಉತ್ಪನ್ನವಾಗುತ್ತದೆ; ಮತ್ತು ಬೇರೆ ಬೇರೆ ಸ್ವರೂಪದಲ್ಲಿ ಬೇರೆ ಬೇರೆ ಹೆಸರಿನಿಂದ ಮೆರೆಯುತ್ತದೆ. ಜ್ವರದ ಮುಖ್ಯ ಭೇದಗಳು ಎಂಟು ಇರುತ್ತವೆ. ೧ ವಾತ, ೧ ಪಿತ್ತ, ೧ ಕಫ, ೩ ದ್ವಂದ್ವಜ, ೧ ಸನ್ನಿಪಾತ, ೧ ಆಗಂತುಕ. ಆದರೆ ಜ್ವರದ ಉಪಭೇದಗಳು ಅಗಣಿತವಿರುತ್ತವೆ ಅವುಗಳ ವಿವರವನ್ನು ಮುಂದೆ ಕೊಟ್ಟಿದೆ:—

## ಜ್ವರದ ಸಾಮಾನ್ಯ ಲಕ್ಷಣಗಳು.

ಬೆವರು ಬರದಿರೋಣ; (ಆದರೆ ಪಿತ್ತಜ್ವರದಲ್ಲಿಯೂ ಶೀತಜ್ವರ, ಚಳಿಜ್ವರಗಳಲ್ಲಿಯೂ ಬೆವರು ಬರುತ್ತಿರುತ್ತದೆ.) ದೇಹ, ಇಂದ್ರಿಯ, ಮನಸ್ಸು ಇವುಗಳಿಗೆ

ಸ್ವಾಸ್ಥ್ಯಪರದಿರೋಣ; ಸಂತಾಪ, ದೇಹಜಡತ್ವ, ವೇದನೆ ಇವೆಲ್ಲ ಇಲ್ಲವೆ ಒಂದೆರಡು ವಿಕಾರಗಳು ಒಮ್ಮೆಲೆ ಉತ್ಪನ್ನವಾಗೋಣ; ಬಾಯಿಗೆ ರುಚಿಯಿರದಿರೋಣ; ಅನ್ನದ ಮೇಲೆ ವಾಸನಾರಹಿತವಾಗೋಣ; ಬಹಿರ್ದೆಸೆಗೆ ಆಗದಿರೋಣ; ಅಥವಾ ಹೊಟ್ಟೆ ಝಾಡಿಸಹತ್ತೋಣ, ಕೈಕಾಲುಗಳಲ್ಲಿ ಶಕ್ತಿ ಇರದಂತಾಗೋಣ, ನಿದ್ರಾನಾಶವಾಗೋಣ ಇಲ್ಲವೆ ಅತಿ ನಿದ್ರೆ ಬರೋಣ, ಅಪಥ್ಯ ಪದಾರ್ಥಗಳ ಮೇಲೆ ವಾಸನೆಯುಂಟಾಗೋಣ, ಆಪ್ತೇಷ್ಟರ ಹಾಗು ಹುಡುಗರು ಹುಪ್ಪಡಿಗಳ ವಿಷಯವಾಗಿ ತಿರಸ್ಕಾರ ಉಂಟಾಗೋಣ, ಕಾರಣವಿಲ್ಲದೆ ಶಬ್ದ, ಅಗ್ನಿ, ಛಳಿ, ಗಾಳಿ, ನೀರು, ಬಿಸಿಲು, ನೆರಳು ಇವುಗಳ ತಿರಸ್ಕಾರವುಂಟಾಗೋಣ ಇಲ್ಲವೆ ಇಚ್ಛೆಯಾಗೋಣ ಇವೇ ಮೊದಲಾದ ಲಕ್ಷಣಗಳೂ ಅಲ್ಲದೆ ಅಸಂತೋಷ ಮುಂತಾದ ಲಕ್ಷಣಗಳೂ ಕಂಡು ಬರುತ್ತವೆ.

## ಶಾಸ್ತ್ರಾರ್ಥ.

ವಾಗ್ಭಟಸೂತ್ರಸ್ಥಾನ:—ಆತ್ರೇಯಾದಿ ಮಹರ್ಷಿಗಳು ಜ್ವರದ ಬಗ್ಗೆ ಹೇಳಿರುವದೇನಂದರೆ, ಆಮಾಶಯದೊಳಗಿನ ದೋಷಗಳು ಅಗ್ನಿಯನ್ನು ಮಂದಗೊಳಿಸಿ, ಆಮದೊಳಗೆ ಬೆರೆಸುಕೊಂಡು, ಸ್ರೋತಸುಗಳು (ಮಾರ್ಗಗಳಿಂದ) ಹೊರಬೀಳದಂತೆ ತಡೆದು, ಜ್ವರವನ್ನು ಹುಟ್ಟಿಸುತ್ತವೆ. ಆದ್ದರಿಂದ ಜ್ವರದ ಪೂರ್ವಲಕ್ಷಣಗಳು ತೋರಹತ್ತುತ್ತಲೆ ಇಲ್ಲವೆ ಜ್ವರ ಬರಹತ್ತಿದ ಕೂಡಲೆ ಶಕ್ತಿ ಕ್ಷೀಣವಾಗದಷ್ಟೇ ಲಂಘನ ಮಾಡಬೇಕು. ಯಾಕಂದರೆ ಶಕ್ತಿಯೇ ಆರೋಗ್ಯಕ್ಕೆ ಮೂಲಾಧಾರವಾಗಿದೆ; ಮತ್ತು ಆರೋಗ್ಯವೇ ಚಿಕಿತ್ಸೆಯ ಪ್ರಯೋಜಕ ಫಲವಾಗಿರುವದು. ಲಂಘನದಿಂದ ದೋಷಗಳು ಕ್ಷೀಣಿಸುತ್ತವೆ, ಅಗ್ನಿಯು ಪ್ರದೀಪವಾಗುತ್ತದೆ ಮತ್ತು ಶರೀರವು ಹಗುರಾಗುತ್ತದೆ. ಇವ್ವಾಯಿತೆಂದರೆ ದೇಹಸ್ವಾಸ್ಥ್ಯ, ಹಸಿವೆ, ನೀರಡಿಕೆ, ಅನ್ನದ ಮೇಲೆ ವಾಸನೆ, ಪಚನಶಕ್ತಿ, ಬಲ, ಮತ್ತು ತೇಜಸ್ಸುಗಳು ಉಂಟಾಗುತ್ತವೆ.

---

## ೧ ಲಂಘನದ ಬಗ್ಗೆ ನಿಯಮಗಳು.

ಚಿಂತಾಮಣಿ ನಿಘಂಟಿನಲ್ಲಿ:—ಲಂಘನ ಮಾಡುವಾಗ ವಾತ, ಪಿತ್ತ, ಕಫ ಇವುಗಳ ಬಲಾಬಲಗಳನ್ನರಿತು ಲಂಘನ ಮಾಡಬೇಕು. ಏನೂ ತಿನ್ನದಿರೋಣ, ಅಲ್ಪಾಹಾರ ಮಾಡೋಣ, ಒರೇ ಬಿಸಿ ನೀರು ಕುಡಿಯೋಣ ಹೀಗೆ ಮೂರು ಬಗೆಗಳು ಲಂಘನದಲ್ಲಿ ಹೇಳಿವೆ. ಲಂಘನವು ಎಲ್ಲ ಔಷಧಗಳಿಗಿಂತಲೂ ಶ್ರೇಷ್ಠವಾಗಿರುತ್ತದೆ.

ಭೇಷಜರತ್ನಾವಲಿಯಲ್ಲಿ:—ಸನ್ನಿಪಾತ ಜ್ವರದಲ್ಲಿ ಆರೋಗ್ಯ ಉಂಟಾಗುವ ಫಲುವಾಗಿ ೩, ೫ ಇಲ್ಲವೆ ೧೦ ದಿನಗಳ ಲಂಘನ ಮಾಡಬೇಕೆಂದು ಹೇಳಿದೆ.

ಆದರೆ *ಸಾಮಜ್ವರದಲ್ಲಿ ಮಾಡುವ ಲಂಘನವು ಹೆಚ್ಚು ಪ್ರಖರವಾಗಿರತಕ್ಕದ್ದು. ನಿರಾಮಜ್ವರದೊಳಗೆ ಅಷ್ಟು ತೀಕ್ಷ್ಣ ಲಂಘನವು ಕೆಲಸದ್ದಲ್ಲ. ಈ ಜ್ವರದಲ್ಲಿ ಲಂಘನ ಮಾಡದಿದ್ದರೂ ನಡೆಯುವದು. ಕ್ಷಯರೋಗದ ಜ್ವರಕ್ಕೆ ಲಂಘನವು ಅಪಥ್ಯಕರವಾಗಿದೆ. ಜ್ವರದೊಳಗೆ ಹಾಲು ವರ್ಜ್ಯ ಪದಾರ್ಥವೆಂದು ಹೇಳಿದೆ; ಆದರೆ ಕ್ಷಯರೋಗದೊಳಗೆ ಜ್ವರ ಬರಹತ್ತಿದರೂ ಹಾಲು ಕೊಡಲಿಕ್ಕೆ ಅಡ್ಡಿಯಿಲ್ಲ. ಯಾಕೆಂದರೆ ಆ ರೋಗದೊಳಗಿನ ಜ್ವರಗಳು ನಿರಾಮ ಜ್ವರಗಳಾಗಿವೆ. ಅದರಂತೆ ಬೇರೆಯವರ ಅಭಿಪ್ರಾಯದಂತೆ ಎಲ್ಲ ಜ್ವರಗಳಲ್ಲಿಯೂ ಲಂಘನ ಮಾಡಲೇಬೇಕೆಂಬದು ನಿರ್ಬಂಧವಿಲ್ಲ. ಬರೇ ವಾತಜ್ವರ, ಪಿತ್ತಜ್ವರ, ಧಾತುಕ್ಷಯಾತ್ಮಕಜ್ವರ, ಆಗಂತುಕಜ್ವರ, ಜೀರ್ಣಜ್ವರ, ಭಯಜ್ವರ, ಕ್ರೋಧಜ್ವರ, ಕಾಮಜ್ವರ, ದೃಷ್ಟಿಜ್ವರ, ಶ್ರಮಜ್ವರ, ರಕ್ತಕ್ಷಯಜ್ವರ, ಅಧಾಂತಜ್ವರ ಇವುಗಳಲ್ಲಿ ಲಂಘನ ಮಾಡಕೂಡದು. ಅವುಗಳಿಗೆ ಆಯಾ ದೋಷಗಳ ಶಮನೋಪಾಯಗಳೇ ಹಿತಾವಹಗಳಾಗಿರುತ್ತವೆ.

ಆಯುರ್ವೈದ್ಯಕದಲ್ಲಿ ಲಂಘನದ ದಿವಸಗಳ ಗುಣಧರ್ಮಗಳು ಕೆಳಗೆ ಬರೆದಂತೆ ಇರುತ್ತವೆ:—

೧ ದಿನದ ಲಂಘನ ಮಾಡಿದರೆ:—ಆಮನಾಶವಾಗಿ ಅಪಚನವು ಹೋಗುವದು.
೨ ದಿನಗಳ ,, —ಪಿತ್ಥವು ಕಡಿಮೆಯಾಗುವದು.
೩ ,, ,, —ಕಫವು ಕಡಿಮೆಯಾಗುವದು.
೪ ,, ,, —ವಾತದ ಬಲ ಕುಂದುವದು.
೫ ,, ,, —ಹಸಿವೆ ಹೆಚ್ಚಾಗುವದು.
೬ ,, ,, —ಎಲ್ಲ ಅವಯವಗಳು ಉತ್ಸಾಹ ಹೊಂದುತ್ತವೆ
೭ ,, ,, —ಜ್ವರವು ಯೋಗ್ಯರೀತಿಯಿಂದ ಪಚನವಾಗುತ್ತದೆ.
೮ ,, ,, —ಜ್ವರ ನಿಲ್ಲುವವು.
೯ ,, ,, —ಎಲ್ಲ ದೋಷಗಳೂ ಇಲ್ಲದಂತಾಗುವವು.

ಹೆಚ್ಚು ಲಂಘನದ ಬಗ್ಗೆ ನಿಷೇಧವು.

ಹೆಚ್ಚು ಲಂಘನ ಮಾಡಿದರೆ ಅಶಕ್ತತೆ ಹೆಚ್ಚುವದು. ಕೆಮ್ಮು, ನೀರಡಿಕೆ, ಅರುಚಿ, ಸ್ನಿಗ್ಧತೆ, ಅಗ್ನಿ, ನಿದ್ದೆ, ದೃಷ್ಟಿ, ಶ್ರವಣಶಕ್ತಿ, ವೀರ್ಯ, ಓಜಸ್ಸು, ಹಸಿವೆ ಹಾಗು ಜ್ವರ ಇವುಗಳು ಕ್ಷಯಿಸುವವು; ಮತ್ತು ಬಸ್ತಿ, ಹೃದಯ, ತಲೆ, ಪಿಂಡ, ಮುಂಡಿಗಳು, ತಿಗದ ಎಲುವು ಹಾಗು ಪಕ್ಕಡಿಗಳು ಇವೆಲ್ಲವು ನೋವಾಗ

* ಸಾಮಜ್ವರವೆಂದರೆ ಆಮದೋಷಯುಕ್ತ ಜ್ವರಗಳು. ನಿರಾಮಜ್ವರವೆಂದರೆ ಆಮದೋಷ ರಹಿತ ಜ್ವರಗಳು.

ಹತ್ತಿ, ಜ್ವರ, ಬಡಬಡಿಕೆ, ಅರ್ಧಾಂಗವಾಯು, ಗ್ಲಾನಿ, ಓಕರಿಕೆಗಳು ಉಂಟಾಗುವವು. ಎಲುವುಗಳ ಸಂದುಗಳಲ್ಲಿ ನೋವುಂಟಾಗಿ ಮಲ-ಮೂತ್ರಗಳು ಕಟ್ಟುವವು; ಹಾಗು ಇನ್ನೂ ಅನೇಕ ಅನಿಷ್ಟ ವಿಕಾರಗಳಾಗಹತ್ತುವವು.

ದೋಷಗಳ ನಾನಾ ಭೇದಗಳಿಗನುಸರಿಸಿ ಚಿಕಿತ್ಸೆಯಲ್ಲಿಯೂ ಗ್ರಾಹೀ, ಭೇದೀ ಮೊದಲಾದ ಅನೇಕ ಪ್ರಕಾರಗಳಿರುತ್ತವೆ. ಹೀಗೆ ದೋಷಗಳಲ್ಲಿ ಎಷ್ಟೋ ಭೇದಗಳುಂಟಾದರೂ ರೋಗವು ಮಾತ್ರ ಸಾಮ ಮತ್ತು ನಿರಾಮ ಇವೆರಡರ ಹೊರತು ಇರುವದಿಲ್ಲ. ಅದರಂತೆ ಚಿಕಿತ್ಸೆಯಲ್ಲಿ ನಾನಾಪ್ರಕಾರಗಳುಂಟಾಗಿದ್ದರೂ ಲಂಘನ ಮತ್ತು ಬೃಂಹಣ ಇವೆರಡು ಮುಖ್ಯ ಭೇದಗಳಲ್ಲೇ ಅವುಗಳ ಸಮಾವೇಶವಾಗಿ ಹೋಗುತ್ತದೆ.

ಲಂಘನದ ಪ್ರಕಾರಗಳು:—ಆಹಾರವಾವುದನ್ನೂ ಸ್ವೀಕರಿಸದಿರೋಣ, ಬರೇ ಬಿಸಿ ಇಲ್ಲವೆ ತಣ್ಣೀರು ಕುಡಿಯೋಣ, ಲಘುವಾದ ಅಲ್ಪ ಆಹಾರವನ್ನು ತಕ್ಕೊಳ್ಳೋಣ, ಬರೇ ಹಣ್ಣುಗಳನ್ನು ತಿಂದಿರೋಣ, ಒಂದೇಸಾರೆ ಊಟ ಮಾಡಿರೋಣ, ಕೇವಲ ಹಾಲು ಇಲ್ಲವೆ ಮಜ್ಜಿಗೆಯನ್ನು ಕುಡಿದಿರೋಣ ಈ ಪ್ರಕಾರ ಲಂಘನಗಳನ್ನು ದೋಷದ ಹೆಚ್ಚು ಕಡಿಮೆ ಪ್ರಮಾಣಗಳಿಗನುಸರಿಸಿ ಮಾಡಬೇಕು.

---

## ೨ ಜ್ವರ ರೋಗಿಯ ಚಿಕಿತ್ಸೆ.

ಯಾವ ಔಷಧವು ದೋಷಗಳನ್ನು ಹೊರಗೆ ಹಾಕದೆ, ಸಮದೋಷಗಳನ್ನು ವಿಕೃತಗೊಳಿಸದೆ, ವಿಷಮದೋಷಗಳನ್ನಷ್ಟೇ ಸಮಸ್ಥಿತಿಯಲ್ಲಿ ತರುವದೋ ಆ ಚಿಕಿತ್ಸೆಗೆ ಶಮನವೆಂಬ ಹೆಸರು. ಅದರಲ್ಲಿ ಪಾಚನ, ದೀಪನ, ನಿರಾಹಾರ, ನೀರು ಕುಡಿಯದಿರೋಣ, ವ್ಯಾಯಾಮ ಮಾಡೋಣ, ಕಾವು ಕೊಡೋಣ ಇಲ್ಲವೆ ಬಿಸಿಲು ಕಾಸೋಣ ಮತ್ತು ಗಾಳಿ ಬಡಿಸಿಕೊಳ್ಳೋಣ ಎಂಬ ಏಳು ಬಗೆಯ ಶಮನ ಚಿಕಿತ್ಸೆಗಳಿರುವವು. ಇದರಂತೆ ಶೋಧನದಲ್ಲಿ ಬಸ್ತಿ, ವಮನ, ವಿರೇಚನ, ರಕ್ತಮೋಕ್ಷ, ಊರ್ಧ್ವವಿರೇಚನ ಎಂಬ ೫ ಪ್ರಭೇದಗಳಿವೆ. ಯಾವ ಜ್ವರಗಳಿಗೆ ಲಂಘನವು ಯೋಗ್ಯವಾಗಿದೆಯೋ ಯೋಗ್ಯವಾದ ಲಂಘನದ ನಂತರ ಆ ರೋಗಿಯ ಇಂದ್ರಿಯಗಳ ಪ್ರಸನ್ನತೆ, ಮಲಶುದ್ಧಿ, ದೇಹಲಾಘವ, ರುಚಿ, ಹಸಿವೆ, ನೀರಡಿಕೆ ಇವೆಲ್ಲ ಸುಧಾರಿಸುವವು. ಹೃದಯ, ಕಂಠ ಮತ್ತು ತೇಗುಗಳು ಸುಧಾರಿಸುವವು. ವ್ಯಾಧಿಯ ಕಸುವು ಕಡಿಮೆಯಾಗುವದು. ಮನಸ್ಸಿಗೆ ಉತ್ಸಾಹವುಂಟಾಗುವದು; ಮತ್ತು ಮಬ್ಬು ಇಳಿಯುವದು. ರೋಗಿಯು ಈ ಸ್ಥಿತಿಗೆ ಬಂದನೆಂದರೆ ಮುಂದೆ ೬ ದಿನಗಳ ವರೆಗೆ ಅಥವಾ ಜ್ವರ ನಿಲ್ಲುವ ವರೆಗೆ ಔಷಧಗಳಿಂದ ಸಿದ್ಧಮಾಡಲ್ಪಟ್ಟ ಅಕ್ಕಿಯ ಗಂಜಿಯನ್ನು ಅವನಿಗೆ ಕೊಡತಕ್ಕದ್ದು. ಗಂಜಿ

ಯನ್ನು ಕೊಡುವಾಗ ಮೊದಲು ಅವನಿಗೆ ಮಂಡ = (ಅಕ್ಕಿಯು ನಾಲ್ಕು ಪಾಲು ನೀರು ಹಾಕಿ ಕುದಿಸಿ ಅನ್ನದ ಅಗಳು ಸಹ ಇಲ್ಲದಂತೆ ಮಾಡುವ ಗಂಜಿಯನ್ನು) ವನ್ನು ಕೊಡಹತ್ತಬೇಕು. ಅಂದರೆ ಜಠರಾಗ್ನಿಯು ಪ್ರದೀಪ್ತವಾಗುವದು. (೧) ಭಕ್ತದ ಅರಳಿನ ಗಂಜಿ ಇಲ್ಲವೆ ಅಕ್ಕೀ ಹುರಿದು ಮಾಡಿದ ಗಂಜಿಯಲ್ಲಿ ಶುಂಠಿ, ಹವೀಜ, ಸೈಂಧಲವಣ, ಹಿಪ್ಪಲಿ ಇವುಗಳ ಕಾಲುತೊಲಿ ಚೂರ್ಣವನ್ನು ಹಾಕಿ ಕೊಡಬೇಕು. ರೋಗಿಗೆ ಹುಳಿ ಪದಾರ್ಥದ ಮೇಲೆ ವಾಸನೆಯುಂಟಾಗಿದ್ದರೆ ದಾಳಿಂಬದ ರಸದಲ್ಲಿ ಸೈಂಧಲವಣ ಹಾಕಿ ಕೊಡಬೇಕು. (೨)ಜ್ವರದ ರೋಗಿಗೆ ಜುಲಾಬುಗಳಾಗುತ್ತಿದ್ದರೆ ಇಲ್ಲವೆ ಪಿತ್ತವು ಹೆಚ್ಚಾಗಿದ್ದರೆ ಶುಂಠಿ ಹಾಗು ಜೇನತುಪ್ಪಗಳನ್ನು ಆರಿದ ಗಂಜಿಯಲ್ಲಿ ಹಾಕಿ ಕೊಡಬೇಕು. (೩)ಕಿಬ್ಬೊಟ್ಟೆ, ಪಕ್ಕಡಿ ಹಾಗು ತಲೆ ಇವುಗಳು ನೋಯುತ್ತಿದ್ದರೆ ನೆಲಗುಳ್ಳದ ಬೇರು ಮತ್ತು ನೆಗ್ಗೀಮುಳ್ಳು ಇವುಗಳ ಕಷಾಯದಿಂದ ಸಿದ್ಧಮಾಡಲ್ಪಟ್ಟ ಗಂಜಿಯನ್ನು ಕೊಡಬೇಕು. (೪) ಜ್ವರ ಮತ್ತು ಅತಿಸಾರ ರೋಗಗಳಾಗಿದ್ದರೆ ಉರಿಹೊನ್ನೆ, ಕಲ್ಲಕಡಲೆ ಬೇರು, ಎಳೇ ಪತ್ರಿಕಾಯಿ ಕೊಯ್ದೊಣಗಿಸಿದ ಪುದಿ, ಶುಂಠಿ, ನೆಯ್ದಿಲೆ ಮತ್ತು ಹವೀಜ ಇವುಗಳ ಕಷಾಯದಿಂದ ಸಿದ್ಧಮಾಡಿದ, ದೀಪನ ಹಾಗು ಪಚನವಾಗುವಂಥ ಗಂಜಿಯನ್ನು ಕೊಡಬೇಕು. (೫) ಬಿಕ್ಕು ಮತ್ತು ವೇದನೆಗಳು, ಶ್ವಾಸ/ಮತ್ತು ಕೆಮ್ಮುಗಳುಂಟಾಗಿದ್ದರೆ ಲಘುಪಂಚಮೂಲಿಕೆಯ ಕಷಾಯದಿಂದ ಸಿದ್ಧಮಾಡಿದ ಸದಕದ ಹಿಟ್ಟಿನ ಗಂಜಿಯನ್ನು ಕೊಡಬೇಕು ರೋಗಿಗೆ ಕಫದ ವಿಕಾರವು ಹೆಚ್ಚಾಗಿದ್ದರೆ ಬೃಹತ್ ಪಂಚಮೂಲಿಕೆಯ ಕಷಾಯದಿಂದ ಸಿದ್ಧಮಾಡಿದ ಸದಕದ ಹಿಟ್ಟಿನ ಗಂಜಿಯನ್ನು ಕೊಡಬೇಕು. (೬) ಮಲಾವರೋಧವಾಗಿದ್ದರೆ ಸದಕ, ಹಿಪ್ಪಲಿ ಮತ್ತು ನೆಲ್ಲೀಚೆಟ್ಟು ಇವುಗಳಿಂದ ಸಿದ್ಧಮಾಡಲ್ಪಟ್ಟ ತುಪ್ಪದ ಒಗ್ಗರಣೆಯನ್ನು ಕೊಟ್ಟ ಪುರೀಷಾದಿ ಮಲಗಳನ್ನೂ ವಾತಾದಿ ದೋಷಗಳನ್ನೂ ಅನುಲೋಮನ ಮಾಡುವಂಥ ಗಂಜಿಯನ್ನು ಕೊಡಬೇಕು. (೭) ಬದ್ಧಕೋಷ್ಠ ಮತ್ತು ಹೊಟ್ಟೆಮುರಿಯುತ್ತಿದ್ದರೆ—ಕಾಡಮೆಣಸಿನ ಬೇರು, ಹಿಪ್ಪಲಿ ಬೇರು, ಕರೀದ್ರಾಕ್ಷಿ, ನೆಲ್ಲೀಚೆಟ್ಟು, ಶುಂಠಿ ಇವುಗಳ ಕಷಾಯದಿಂದ ಮಾಡಿದ ಅಕ್ಕೀ ಗಂಜಿಯನ್ನು ಕೊಡಬೇಕು. (೮)ಗುದದ್ವಾರಕ್ಕೆ ಕತ್ತರಿಸಿದಂತೆ ವೇದನೆಯಾಗುತ್ತಿದ್ದರೆ— ಬಾರೀಹಣ್ಣು, ಆಮಸೋಲು, ಶಾಲೀಪರ್ಣ, ಉರಿಹೊನ್ನೆ ಹಾಗು ಎಳೇ ಪತ್ರೀಕಾಯಿ ಇವುಗಳ ಕಷಾಯದಿಂದ ಮಾಡಿದ ಅಕ್ಕೀ ಗಂಜಿಯನ್ನು ಕೊಡಬೇಕು. (೯) ಬೆವರು ಹಾಗು ನಿದ್ರೆ ಬರದೆ ನೀರಡಿಕೆಯಿಂದ ಪೀಡಿತನಾಗಿದ್ದರೆ—ಕಲ್ಲುಸಕ್ಕರೆ, ನೆಲ್ಲೀಚಟ್ಟು, ಶುಂಠಿ ಇವುಗಳಿಂದ ತಯಾರಿಸಿದ ಅಕ್ಕೀ ಗಂಜಿಯನ್ನು ಕೊಡಬೇಕು, (೧೦) ನೀರಡಿಕೆ

ಶಾಂತಿ, ದಾಹ ಮತ್ತು ಜ್ವರಗಳಿದ್ದರೆ:-ಕಲ್ಲುಸಕ್ಕರೆ, ಕರೇದ್ರಾಕ್ಷಿ, ಬಾರೀಹಣ್ಣು, ಕಿರಬಂಟ, ಜೇಕಿನ ಗಡ್ಡೆ, ರಕ್ತಚಂದನ ಇವುಗಳ ಕಷಾಯದಿಂದ ಸಿದ್ಧಮಾಡ ಲ್ಪಟ್ಟ ಅಕ್ಕೀ ಗಂಜಿಯನ್ನು ಆರಿಸಿ, ಅದರಲ್ಲಿ ಜೇನುತುಪ್ಪ ಕೂಡಿಸಿ ಕೊಡಬೇಕು. (೧೧) ನೆರೆ ಇಲ್ಲವೆ ಮಾದಕ ಪದಾರ್ಥಗಳಿಂದ ಉಂಟಾದ ಜ್ವರಗಳಿಗೆ— ರೋಗಿಯು ನೀರಡಿಕೆ, ಓಕರಿಕೆ, ಹಾಗು ದಾಹ ಇವುಗಳಿಂದ ಪೀಡಿತನಾಗಿದ್ದರೆ ಮತ್ತು ಊರ್ಧ್ವಗಾಮಿ ರಕ್ತಪಿತ್ತವಾಗಿದ್ದರೆ ಗಂಜಿಯನ್ನು ಕೊಡಬಾರದು. ಅಂಥ ಕಾಲಕ್ಕೆ ಜ್ವರನಾಶಕಗಳಾದ ದಾಳಿಂಬ,ಕಿತ್ತಳೆ ಮೊದಲಾದ ಹಣ್ಣುಗಳ ರಸ ತೆಗೆದು ಕೊಡಬೇಕು; ಇಲ್ಲವೆ ನೀರೊಳಗೆ ಜೇನುತುಪ್ಪ, ಸಕ್ಕರೆ ಬೆರಿಸಿ, ಅದನ್ನು ಭತ್ತದ ಅರಳಿನ ಗಂಜಿಯೊಡನೆ ಕೊಡಬೇಕು. ಅನಂತರ ಭತ್ತದ ಅರ ಳಿನ ಕಾಟಿ ಇಲ್ಲವೆ ಜವಿಗೋದಿಯ ಕಾಟಿ ಅಥವಾ ರೋಗಿಗೆ ದಕ್ಕುತ್ತಿದ್ದರೆ, ಧಾನ್ಯದ ಯೂಷ ಅಥವಾ ಕಾಟಿ—ಧಾನ್ಯದ ಎಂಟು ಪಟ್ಟು ನೀರು ಬೆರಿಸಿ ಬೆಯಿ ಸಿದ ಸಾರು ಇಲ್ಲವೆ ಹೆಸರಿನ ಸಾರು ಹುರಿದ ಅಕ್ಕಿಯ ಅನ್ನ ಅಥವಾ ಗಂಜಿ ಇವು ಗಳನ್ನು ಕೊಡಬೇಕು.

ಔಷಧವು ಜೀರ್ಣಿಸುವ ಮೊದಲು ಆಹಾರ ತಕ್ಕೊಂಡರೆ ಇಲ್ಲವೆ ಆಹಾ ರವು ಜೀರ್ಣಿಸುವ ಪೂರ್ವದಲ್ಲಿ ಔಷಧ ತಕ್ಕೊಂಡರೆ ಅದರಿಂದ ರೋಗ ಪರಿಹಾರ ವಾಗುವದೊತ್ತಟ್ಟಿಗೇ ಉಳಿದು, ಬೇರೆ ಹೊಸ ರೋಗವೇ ಉಂಟಾಗುತ್ತದೆ. ಈ ಬಗ್ಗೆ ಚಿಕಿತ್ಸಕರೂ ರೋಗಿಯೂ ಎಚ್ಚರಪಡಬೇಕು.

---

## ೩ ಜ್ವರದೊಳಗೆ ಬಿಸಿ ನೀರಿನ ಉಪಯೋಗವು !

ವಾತಕಫಾತ್ಮಕ ಜ್ವರದೊಳಗೆ ನೀರಡಿಕೆಯಾಗುತ್ತಿದ್ದರೆ, ಸ್ವಲ್ಪ ಸ್ವಲ್ಪ ಬಿಸಿನೀರು ಕೊಡಬೇಕು; ಅಂದರೆ ಕಫವನ್ನು ನೀರು ಮಾಡಿ ನೀರಡಿಕೆಯನ್ನು ಬೇಗನೆ ಕಡಿಮೆ ಮಾಡುತ್ತದೆ; ಮತ್ತು ಅಗ್ನಿಯನ್ನು ಪ್ರದೀಪ್ತಗೊಳಿಸಿ, ಶ್ರೋತಸುಗಳನ್ನು ಮೆತ್ತಗೆ ಮಾಡುತ್ತದೆ. ಬಿಸಿನೀರಿನಿಂದ ಸ್ತಬ್ಧವಾದ ಪಿತ್ತ, ವಾತ, ಬೆವರು, ಮಲ ಮತ್ತು ಮೂತ್ರಗಳು ಅನುಲೋಮನಗೊಳಿಸುತ್ತವೆ; ಹಾಗು ಅತಿ ನಿದ್ರೆ, ಜಡತ್ವ, ಅರುಚಿ ಇವುಗಳೂ ನಾಶಹೊಂದುತ್ತವೆ. (೧) ಒಂದೂ ಕುದಿ ಕೊಟ್ಟ ನೀರು ಕುಡಿಯುವದರಿಂದ ಮಹಾ ಶ್ರೋತಸು(ದೊಡ್ಡ ಕರಳು)ಗಳಿಗೆ ಮೇಲಿನಿಂದ ಕೆಳಗಿಳಿಯುವ ಗತಿಯನ್ನುಂಟು ಮಾಡುತ್ತದೆ. ಇದರಿಂದ ಮಲೋತ್ಸರ್ಜನವು ಚೆನ್ನಾಗಿ ಆಗುತ್ತದೆ. (೨) ಇದರಿಂದ ಶ್ಲೇಷ್ಮಲ ತ್ವಚೆಯೊಳಗಿಂದ ಹರಿಯುವ ಹಾಗು ಅನೇಕ ಬೇರೆ ಬೇರೆ ಜಿಗಟು, ಸ್ರಾವ, ಕಫ, ಜೊಲ್ಲು, ಹೊಟ್ಟೆಯೊಳಗಿನ ಮತ್ತು ಕರುಳುಗಳೊಳಗಿನ ದ್ರವ ಮುಂತಾದವುಗಳು

ತೆಳ್ಳಗಾಗಿ ಅವುಗಳ ಜಿಗಟುತನವೂ ಕಡಿಮೆಯಾಗುತ್ತದೆ. (೩) ಆ ಬಿಸಿನೀರಿನಿಂದ ಒಳಗಿನ ಶರೀರವೆಲ್ಲ ತೊಳೆದಂತಾಗಿ, ಪಿತ್ತ, ಆಮ, ಹೊಲಸು ಮುಂತಾದವುಗಳೆಲ್ಲ ಕೆಳಗೆ ದೂಡಲ್ಪಟ್ಟು, ಅನ್ನಕೋಶವು ಸ್ವಚ್ಛವಾಗಿ, ಪುನಃ ಅನ್ನಗ್ರಹಿಸಲಿಕ್ಕೆ ಸಿದ್ಧವಾಗುತ್ತದೆ. (೪) ಅದರಿಂದ ಪಿತ್ತ ಮಾರ್ಗದೊಳಗಿನ ಪಿತ್ತವೂ ಕೆಳಗಿಳಿದು, ಮಲವು ಹಳದೀ ಬಣ್ಣದ್ದಾಗುವದು; ಹಾಗು ಮಲದ ಅಸಹ್ಯ ದುರ್ಗಂಧ (ನಾತ)ವು ಕಡಿಮೆಯಾಗುವದು. (೫) ಅದರಿಂದ ರಕ್ತದೊಳಗೆ ಹೆಚ್ಚು ಕಡಿಮೆ ಮಾನದಿಂದಾದ ಗಂಟುಗಳೂ ಅಥವಾ ಆಗಂತುಕ ಕ್ಷಾರದ ಗಂಟುಗಳೂ ವಿದ್ರಾವ ಹೊಂದಿ ಲೋಪವಾಗುವವು. (೬) ಅದರಿಂದ ಮೂತ್ರವು ಸ್ವಚ್ಛವಾಗುತ್ತದೆ. (೭) ತಡೆಯುವಷ್ಟು ಹೆಚ್ಚು ಬಿಸಿ ಬಿಸಿಯಾದ ನೀರನ್ನು ಕುಡಿಯುವದರಿಂದ ಸಾಕಷ್ಟು ಬೆವರು ಬರುತ್ತದೆ. (೮) ಅದರಿಂದ ಎಲ್ಲ ಸ್ರಾವಗಳ ಉತ್ಸರ್ಜನವು ಚೆನ್ನಾಗಿ ಜರಗುತ್ತದೆ. (೯) ಮತ್ತು ತುಸ ಹೊತ್ತಿನಲ್ಲಿಯೇ ನೀರಡಿಕೆಯು ಕಡಿಮೆಯಾಗಿ ಶ್ಲೇಷ್ಮಲ ತ್ವಚೆಯ ಆರಿಕೆಯೂ ಕಡಿಮೆಯಾಗುತ್ತದೆ (೧೦) ರೋಗಿಯ ಮನೋವಿಕಾರಗಳು ಸುಧಾರಿಸಿ, ಅವನಿಗೆ ಹುಷಾರಿಯೆನಿಸುತ್ತದೆ. (೧೧) ಪಚನಕ್ರಿಯೆಯು ಸುಧಾರಿಸುತ್ತದೆ. (೧೨) ಇದರೊಳಗಿನ ತತ್ವವಿಷ್ಟೇ; ಒಂದು ಕುದಿ ಬಂದ ನೀರು ನಿರ್ದೋಷವಾಗುತ್ತದೆ. (೧೩) ಬಿಸಿನೀರು ಕುಡಿಯುವದರಿಂದ ನೀರಡಿಕೆಯು ಕಡಿಮೆಯಾಗುತ್ತದೆ. (೧೪) ನೆರೆಗುಡುಕನಿಗೆ ದಿನಾಲು ಬಿಸಿನೀರು ಕುಡಿಸುತ್ತ ಹೋದರೆ ಅವನ ಮದ್ಯದ ಚಟವು ಕಡಿಮೆಯಾಗುವದು. ಅದರ ಮೇಲಿನ ಆಸಕ್ತಿಯು ಹೋಗುವದು. (೧೫) ಬಿಸಿನೀರು ಕುಡಿಯಲಿಕ್ಕೆ ಬೇಸರಿಕೆ ಬರಬಾರದೆಂದು ಅದರಲ್ಲಿ ಶುಂಠಿಯ ಪುಡಿ, ಲಾವಂಗ, ಅಜವಾನ ಇವುಗಳನ್ನು ಹಾಕಬೇಕು. ಅಂದರೆ ಬೇಸರಿಕೆ ಬರಲಾರದು. (೧೬) ಮಲಾವರೋಧದ ಚಟವಿದ್ದವರು ದಿನಾಲು ರಾತ್ರಿ ನೆಲವರಿಯ (ಸೋನಾಮುಖಿಯ) ಎಲೆಯ ಪುಡಿಯನ್ನಾಗಲಿ, ಕಕ್ಕೇ ಕಾಯಿಯೊಳಗಿನ ತಿರುಳನ್ನಾಗಲಿ ಬಿಸಿನೀರೊಳಗೆ ಹಾಕಿ ಕುಡಿಯಬೇಕು. ಅದರಿಂದ ಮಲಶುದ್ಧಿಯು ನೆಟ್ಟಗಾಗುತ್ತದೆ. (೧೭) ರಾತ್ರಿ ಕುಡಿಯಬೇಕಾದ ಬಿಸಿನೀರನ್ನು ೨೦ ತೊಲಿ ಕುಡಿಯಬೇಕು. ಅದನ್ನು ಮಲಗುವಾಗ ಸಾವಕಾಶವಾಗಿ ಕುಡಿಯತಕ್ಕದ್ದು.

ತಣ್ಣೀರಿನ ಗುಣಗಳು ಬಿಸಿನೀರಿನ ವಿರುದ್ಧಗಳಾಗಿರುತ್ತವೆ. ತಣ್ಣೀರು ದೋಷಗಳನ್ನು ಬೆಳೆಸುವದು. ಬಿಸಿನೀರಿನಲ್ಲಿ ಮೇಲೆ ವಿವರಿಸಿದಂತೆ ಗುಣಗಳಿದ್ದರೂ ಪಿತ್ತಜ್ವರದಲ್ಲಿ; ಪಿತ್ತಾಧಿಕ್ಯಜ್ವರದಲ್ಲಿ; ಕಣ್ಣು-ಮೂಗುಗಳೊಳಗಿಂದ ಉಷ್ಣಶ್ವಾಸಗಳು ಬಂದು, ದಾಹ, ಮೋಹ, ಅತಿಸಾರ ಇತ್ಯಾದಿಗಳಿಂದ ಯುಕ್ತ

ವಾದ ಜ್ವರದಲ್ಲಿ; ವಿಷ ಮತ್ತು ಮದ್ಯಗಳಿಂದ ಉಂಟಾದ ಜ್ವರದಲ್ಲಿ; ಉರಃಕ್ಷತ, ಕ್ಷಯ, ರಕ್ತಪಿತ್ತವಾದ ರೋಗಿಗಳಿಗೆ ಬಿಸಿನೀರು ಕೊಡಕೂಡದು. ಇಂಥ ರೋಗಿಗಳಿಗೆ ಜೇಕಿನಗಡ್ಡೆ, ಚಂದನ, ಶುಂಠಿ, ಬಾಳದಬೇರು, ಕಲ್ಲುಸಬ್ಬಸಿಗಿ, ಕರೇಬಾಳದಬೇರು ಇವುಗಳ ಚೂರ್ಣವನ್ನು ಹಾಕಿ ತಯಾರಿಸಿದ ತಣ್ಣೀರು ಹಿತಾವಹವಿರುತ್ತದೆ. ಅದು ಪಾಚಕವಾಗಿ ಜ್ವರ ಮತ್ತು ನೀರಡಿಕೆಗಳನ್ನು ನಾಶಮಾಡುತ್ತದೆ.

ಉಷ್ಣತೆಯು ಪಿತ್ತದ ವಿನಃ ಇರಲಾರದು; ಮತ್ತು ಜ್ವರವು ಉಷ್ಣತೆಯು ಹೊರತು ಉಂಟಾಗದು. ಆದುದರಿಂದ ಪ್ರತಿಯೊಂದು ಬಗೆಯ ಜ್ವರದಲ್ಲಿ, ವಿಶೇಷವಾಗಿ ಪಿತ್ತಜ್ವರದಲ್ಲಿ ಪಿತ್ತವನ್ನು ಹೆಚ್ಚಿಸುವ ಪದಾರ್ಥಗಳನ್ನು ಬಿಟ್ಟುಬಿಡಬೇಕು. ಅದರಂತೆ ಜ್ವರದಲ್ಲಿ ಸ್ನಾನ, ಮೈಗೆ ಎಣ್ಣೆಹಚ್ಚುವದು, ಚಂದನ ಮುಂತಾದವುಗಳ ಲೇಪಕೊಡುವದು ಮತ್ತು ನಿರರ್ಥಕ ಲಂಘನಗಳು ವರ್ಜ್ಯವಾಗಿರುತ್ತವೆ.

---

## ೪ ದೋಷಗಳ ಪರಿವರ್ತನ.

ಒಂದು ದೋಷವುಂಟಾಯಿತೆಂದರೆ ಅದು ಮತ್ತೊಂದು ದೋಷವನ್ನು ಹುಟ್ಟಿಸುತ್ತದೆ; ಮತ್ತು ಆ ಎರಡನೇ ದೋಷದಿಂದ ಮೊದಲನೇ ದೋಷವು ಬೆಳೆಯುತ್ತದೆ. ಮೊದಲನೇದು ಬೆಳೆಯಿತೆಂದರೆ ಅದರಿಂದ ಎರಡನೇದು ಬೆಳೆಯುತ್ತದೆ. ಹೀಗೆ ಅವು ಒಂದಕ್ಕೊಂದು ಸಹಾಯಕಾರಿಗಳಾಗಿ ಎರಡೂ ದೋಷಗಳು ಬಲಿಯುತ್ತವೆ. ಹೀಗೆ ಒಂದಕ್ಕೊಂದು ಸಂಬಂಧಿಸಿದ ದೋಷಗಳ ಸರಪಳಿಗೆ ದೋಷಗಳ ಪರಿವರ್ತನವೆನ್ನುವರು. ಆ ಸರಪಳಿಯನ್ನು ಕಡಿದೊಗೆಯುವ ಪ್ರಯತ್ನಮಾಡದಿದ್ದರೆ, ಆ ದೋಷಗಳು ಹೆಚ್ಚು ಬಲಿಷ್ಠವಾಗುತ್ತವೆ. ಆದ್ದರಿಂದ ಕುಶಲ ವೈದ್ಯನು ದೋಷಗಳನ್ನು ಸೂಕ್ಷ್ಮರೀತಿಯಿಂದ ಅವಲೋಕಿಸಿ, ಅವನ್ನು ನಾಶಗೊಳಿಸಬೇಕು. ಅಂದರೆ ಜ್ವರದ ಚಿಕಿತ್ಸೆ ಮಾಡಲಿಕ್ಕೆ ಸುಲಭವಾಗುತ್ತದೆ.

ರೋಗಿಯು ಬಲಕುಂದದಂತೆ ಮತ್ತು ದೋಷಗಳು ಬಲಿಷ್ಠವಾಗದಂತೆ ೭ ದಿನಗಳನ್ನು ಕಳೆಯಬೇಕು. ಬಳಿಕ ಲಂಘನಾದಿಗಳಿಂದ ದೋಷಗಳ ಪಾಕವಾಯಿತೆಂದರೆ ಶೇಷ-ದೋಷಗಳ ಪಚನ ಹಾಗು ಶಮನ ಮಾಡಲಿಕ್ಕೆ ಯೋಗ್ಯವಾದ ಕಷಾಯವನ್ನು ಕೊಡಬೇಕು. ಪಿತ್ತಜ್ವರಗಳಿಗೆ ವಿಶೇಷವಾಗಿ ಕಹಿಯಾದ, ಕಫಜ್ವರಗಳಿಗೆ ಖಾರವಾದ ಕಷಾಯಗಳನ್ನು ಕೊಡಬೇಕು. ಒಗರು ರಸವು ಪಿತ್ತ ಮತ್ತು ಕಫಜ್ವರಗಳ ನಾಶಕವಾಗಿದ್ದರೂ ನವಜ್ವರಗಳಲ್ಲಿ ಅಂದರೆ ಅಪಕ್ವ

ಅಥವಾ ಆಮಜ್ವರಗಳಲ್ಲಿ ಒಗರು ಕಷಾಯವನ್ನು ಕೊಡದಾರದು. ಯಾಕಂದರೆ ಅದರಿಂದ ಮಲಾವರೋಧವಾಗಿ ವಿಷಮವಾಗುತ್ತದೆ; ಮತ್ತು ಅರುಚಿ, ಬಿಕ್ಕು, ಉಬ್ಬಸ, ಹೊಟ್ಟೆಯುಬ್ಬುವದು ಮುಂತಾದ ವಿಕಾರಗಳುಂಟಾಗುತ್ತವೆ.

---

## ೫ ಔಷಧದ ಯೋಜನೆ.

ಕೆಲವರು ೭ ದಿನಗಳಿಗೆ, ಕೆಲವರು ೧೦ ದಿನಗಳಿಗೆ, ಕೆಲವರು ಲಘು ಅನ್ನವನ್ನು ಸೇವಿಸಿದ ನಂತರ ಜ್ವರನಾಶಕ್ಕಾಗಿ ಔಷಧವನ್ನು ಪ್ರಾರಂಭಿಸಬೇಕೆನ್ನುತ್ತಾರೆ. ಯಾವಾಗ ಕೊಟ್ಟರೂ, ಆಮವು ಹೆಚ್ಚಾಗಿದ್ದಾಗ ಮಾತ್ರ ಕೊಡಕೂಡದು; ಆದರೆ ಜ್ವರ ಹುಟ್ಟಿದ ದಿವಸ ರಾತ್ರಿಯಲ್ಲಿ ಚತುರ್ಥಾಂಶ ಕಷಾಯದ ನೀರನ್ನು ಮಾತ್ರ ಕೊಡಬೇಕು. ಅದನ್ನು ಬಹಳ ಬಿಸಿಯಾಗಿ ಕೊಡದೆ ಮಂದೋಷ್ಣವಾದದ್ದನ್ನು ಕೊಡತಕ್ಕದ್ದು. ಅದರಿಂದ ಆಮ ಹಾಗು ಇತರ ದೋಷಗಳು ಶಾಂತವಾಗುತ್ತವೆ. ವಾತ, ಪಿತ್ತ, ಕಫ ಮುಂತಾದ ಯಾವ ದೋಷಗಳಿವೆಯೆಂಬದು ಮೂರು ದಿನಗಳಲ್ಲಿ ಸ್ಪಷ್ಟವಾಗಿ ತಿಳಿದು, ಅವುಗಳ ಪಚನಕ್ಕೆ ಉಪಾಯವನ್ನು ಯೋಚಿಸಲಿಕ್ಕೆ ಅನುಕೂಲವಾಗುತ್ತದೆ. ತೀವ್ರ ಜ್ವರದಿಂದ ಪೀಡಿತನಾದವನಿಗೆ ದೋಷಗಳ ಉದ್ವೇಗ ಸಮಯದಲ್ಲಿ (ವಾಂತಿ, ದಾಹ, ತಳಮಳ ಇತ್ಯಾದಿಗಳಿಂದ ಯುಕ್ತನಾದಾಗ) ಅಥವಾ ದೋಷಗಳ ಸಂಚಯವಾಗಿ, ಕಣ್ಣಿಗೆ ಮಬ್ಬು ಒಂದು, ಮೈಗೆ ಒದ್ದೆಯ ಅರಿವೆಯನ್ನು ಸುತ್ತಿದ ಹಾಗಾದ ಲಕ್ಷಣಗಳುಂಟಾದಾಗ್ಗೆ ಕೊಟ್ಟ ಔಷಧದಿಂದ ಪಚನವಾಗದೆ ಅದು ಪುನಃ ಜ್ವರವನ್ನು ಹೆಚ್ಚಿಸುತ್ತದೆ. ಜ್ವರ ಕಡಿಮೆಯಾಗಿ ಮೈ ಹಗುರಾಗಿ ದೋಷಗಳು ಚಲಿತವಾಗಹತ್ತಿದ (ಅಂದರೆ ಮಲ, ಮೂತ್ರ, ಬೆವರುಗಳ ಪ್ರವೃತ್ತಿಯಾಯಿತೆಂದರೆ) ವೆಂದರೆ ಆ ರೋಗಿಗೆ ಅಗರ ಜ್ವರಬರಹತ್ತಿದ್ದರೂ ಔಷಧವನ್ನು ಕೊಡಬೇಕು.

ಎರಡನೆಯದೇನಂದರೆ:—ಹೊಸದಾಗಿ ಹುಟ್ಟಿದ ಜ್ವರದಲ್ಲಿ ಹಗಲು ನಿದ್ದೆ, ಸ್ನಾನ, ಅಭ್ಯಂಗ, ಊಟ, ಸಿಟ್ಟು, ಮೈಥುನ, ಗಾಳಿ ಒಡಿಸಿಕೊಳ್ಳುವದು, ವ್ಯಾಯಾಮ, ಕಷಾಯ ಇವೆಲ್ಲ ವರ್ಜ್ಯವಾಗಿವೆ. ಸಾರಾಂಶವಿಷ್ಟೇ, ಹೊಸದಾಗಿ ಉಂಟಾದ ಜ್ವರಕ್ಕೆ ಅದರ ವೇಗವು ತುಸುಮಟ್ಟಿಗಾದರೂ ಕಡಿಮೆಯಾಗುವ ವರೆಗೆ ಯಾವ ಪ್ರಕಾರದ ಔಷಧವನ್ನೂ ಕೊಡಕೂಡದು; ಮತ್ತು ಅಂಥ ರೋಗಿಗೆ ಊಟವೂ ಹಿತಕರವಾಗುವದಿಲ್ಲ; ಆದ್ದರಿಂದ ಮೊದಲು ಅವನಿಗೆ ಹಿಂದೆ ಹೇಳಿದಂತೆ ಗಂಜಿ, ಕಾಟಿ, ಯವಾಗೂ ಮತ್ತು ಯೂಷಗಳನ್ನು ಕೊಟ್ಟು ಜ್ವರದ ವೇಗವು ಕಡಿಮೆಯಾದನಂತರ ಔಷಧೋಪಚಾರ ಮಾಡಬ

ಕ್ಕದ್ದು. ಹಾಗೆ ಮಾಡದೆ, ಹೊಸದಾಗಿ ಬಂದ ಜ್ವರಕ್ಕೆ ಯಾವುದೊಂದ
ವನ್ನು ಕೊಟ್ಟರೆ ಅಥವಾ ಶೋಧನವನ್ನು ಕೊಟ್ಟರೆ ಅದು ವಿಷಮಕ್ಕೆ
ತ್ತದೆ. ವಿಷಮಜ್ವರವೆಂದರೆ ಯಾವ ಜ್ವರವು ವಿಕೃತ-ವಿಕೋಪಕ್ಕೆ
ತ್ತದೋ ಅದಕ್ಕೆ ವಿಷಮಜ್ವರವೆನ್ನುತ್ತಾರೆ.

---

## ೬ ರೋಗಿಯ ಶುಶ್ರೂಷೆ.

ಬೇನೆಯವನ ಕೋಣೆಯು ಥಳಥಳವಾಗಿಯೂ ಗಾಳಿಯಾಡತಕ್ಕ
ಇರತಕ್ಕದ್ದು. ಆ ಕೋಣೆಯಲ್ಲಿ ತೇವವಿರಕೂಡದು. ಅಲ್ಲಿ ಜನರ
ಇರಬಾರದು. ಹಾಸಿಗೆಯು ಸ್ವಚ್ಛವಾಗಿರಬೇಕು; ಹಾಗು ದಿನಾಲು
ಹಾಕಿ ಬದಲು ಮಾಡಬೇಕು; ಮತ್ತು ಒಗೆದು ಥಳಥಳ ಮಾಡಿ ಒಣಗಿ
ಕೋಣೆಯೊಳಗಿನ ಮಲ-ಮೂತ್ರಗಳಹೊಲಸನ್ನು ತೆಗೆದು ನೆಲವನ್ನು
ಸ್ವಚ್ಛ ಮಾಡಬೇಕು. ಆ ಕೋಣೆಯಲ್ಲಿ ಬೇವಿನ ಎಲೆ, ಲೋಭಾನ,
ಗುಗ್ಗುಳ, ಜೇಕಿನಗಡ್ಡೆ, ಚಂದನ, ಜಟಾಮಾಂಸಿ ಇವುಗಳಲ್ಲಿ ಸಿಕ್ಕಷ್ಟು
ಗಳ ಧೂಪ ಹಾಕಬೇಕು. ಅಂದರೆ ಆಗಂತುಕ ರೋಗಜಂತುಗಳ ನಾ
ಹವೆಯು ಸ್ವಚ್ಛವಾಗುವದು

---

## ೭ ತಕ್ರಪ್ರಶಂಸೆ (ಮಜ್ಜಿಗೆಯ ಮಹತ್ವ)

ಯಥಾಸುರಾಣಾಮಮೃತಂ ಹಿತಾಯ |
ತಥಾನರಾಣಾಮಿಹತಕ್ರಮಾಹುಃ || (ರಾಜನಿಘಂ

ದೇವರಿಗೆ ಅಮೃತವು ಹೇಗೆ ಹಿತಾವಹವಾಗಿರುವದೋ ಹಾ
ವರಿಗೆ ಮಜ್ಜಿಗೆಯು ಹಿತಕಾರಕವಾಗಿರುತ್ತದೆ ಆರೋಗ್ಯದಿಂದಿರುವ
ರೋಗವುಂಟಾದಾಗಲೂ ಮಜ್ಜಿಗೆಯನ್ನು ತೆಗೆದುಕೊಂಡರೆ ಹಿತಕರವೆ
ತ್ತದೆ. ನಮ್ಮ ಹಿಂದುಗಳ ಊಟದಲ್ಲಿ ಊಟದಕಡೆಗೆ ಮಜ್ಜಿಗೆ-ಅನ್ನವನ
ಪರಿಪಾಠವಿದೆಯಷ್ಟೇ? ಆ ಪದ್ಧತಿಯು ವೈದ್ಯಶಾಸ್ತ್ರ ದೃಷ್ಟಿಯಿಂದ
ಗೊಂಡಿದ್ದು ಉತ್ತಮವಾದದ್ದಿರುತ್ತದೆ ಪಾರ್ಥಿವ ಕಣಗಳನ್ನು
ಮಾಡುವ ಗುಣವು ಮಜ್ಜಿಗೆಯಲ್ಲಿರುವದರಿಂದ ರುಧಿರಾಭಿಸರಣವು
ಆಗುತ್ತದೆ; ಮತ್ತು ಅದರಿಂದ ಎಲವುಗಳ ಸಂದುಗಳಲ್ಲಿ ಅಥವಾ
ಗಳಲ್ಲಿ ಅಶುದ್ಧ (ಆಮ) ದ್ರವ್ಯವು ಸಂಚಯವಾಗದೆ, ತಂತುಗಳಿಗೆ
ಗಳಾದ ದ್ರವ್ಯಗಳೇ ದೊರೆತು, ಅವುಗಳೊಳಗಿನ ಅಶುದ್ಧ ದ್ರವ್ಯಗಳು
ಹೊರಬಿದ್ದು ಹೋಗುತ್ತವೆ. ರಕ್ತದೊಳಗಿನ ಜಡಭಾಗದೊಡನೆ

ಅದನ್ನು ನೀರು ಮಾಡುವ ಧರ್ಮವು ಮಜ್ಜಿಗೆಯಲ್ಲಿರುವದರಿಂದ ರುಧಿರಾಭಿಸರಣಕ್ಕೆ ಅಡ್ಡಿಯಾಗುವದಿಲ್ಲ. ರಕ್ತವಾಹಿನಿಗಳಲ್ಲಿ ಜಡದ್ರವ್ಯಗಳ ಸಂಚಯವಾಯಿತೆಂದರೆ ಅವು ಉಬ್ಬುತ್ತವೆ; ಹಾಗು ಅದರಿಂದ ರುಧಿರಾಭಿಸರಣಕ್ಕೆ ಅಡ್ಡಿಯುಂಟಾಗುತ್ತದೆ ಅದರಿಂದ ಸ್ನಾಯು ಮತ್ತು ಇತರ ಅವಯವಗಳಿಗೆ ರಕ್ತದ ಪೂರೈಕೆಯಾಗದೆ ಶರೀರವು ನಿಸ್ತೇಜವಾಗಹತ್ತುತ್ತದೆ. ದಿನಾಲು ಊಟದಲ್ಲಿ ಮಜ್ಜಿಗೆಯನ್ನು ಪಯೋಗಿಸಿದರೆ ರಕ್ತವಾಹಿನಿಗಳಿಗೆ ಸಹಾಯವಾಗಿ, ಜಡದ್ರವ್ಯಗಳ ಸಂಚಯವಾಗದೆ ಶರೀರವು ಪುಷ್ಟವಾಗುವದು. ಮಜ್ಜಿಗೆಯಿಂದ ಶರೀರದ ತಂತುಗಳ ಬೆಳವಣಿಗೆಯಾಗುತ್ತದೆ.

ಇದಲ್ಲದೆ ಶರೀರದೊಳಗಿನ ಹೊಲಸನ್ನು ಹೊರಚೆಲ್ಲುವ ಯಕೃತ, ತ್ವಚೆ, ಮೂತ್ರಪಿಂಡ ಮುಂತಾದ ಮುಖ್ಯ ಇಂದ್ರಿಯಗಳ ಕ್ರಿಯೆಗಳಿಗೆ ಮಜ್ಜಿಗೆಯಿಂದ ಹೆಚ್ಚು ಉತ್ತೇಜನ ದೊರೆಯುತ್ತದೆ. ಮಜ್ಜಿಗೆಯಿಂದ ಅನ್ನಾಶಯ, ಕರುಳು ಮುಂತಾದ ಪಚನೇಂದ್ರಿಯಗಳು ಬಲಿಷ್ಠವಾಗಿ, ಅನ್ನವನ್ನು ಚೆನ್ನಾಗಿ ಅರಗಿಸಲಿಕ್ಕೆ ಸಮರ್ಥಗಳಾಗುತ್ತವೆ; ಮತ್ತು ಅದರಿಂದ ಚಲೋ ಜೊಲ್ಲು, ವೀರ್ಯಯುಕ್ತ ಹಾಗು ರೋಗರಹಿತವಾದ ರಕ್ತವು ಸಿದ್ಧವಾಗುತ್ತದೆ. ಮಜ್ಜಿಗೆಯ ಸೇವನೆಯಿಂದ ರಕ್ತವಾಹಿನಿಗಳು ಉತ್ತಮ ಸ್ಥಿತಿಯಲ್ಲಿದ್ದು, ರಕ್ತಾಭಿಸರಣವು ಚನ್ನಾಗಿ ಆಗುತ್ತದೆ. ಅಂದರೆ ಮಜ್ಜಿಗೆಯು ಅಪ್ರತ್ಯಕ್ಷವಾಗಿ ರಕ್ತವನ್ನು ಶುದ್ಧಗೊಳಿಸುವ ಫಿಲ್ಟರದಂತಿರುತ್ತದೆ. ಮಜ್ಜಿಗೆಯಲ್ಲಿ ಔಷಧೀ ಗುಣಗಳು ಹೆಚ್ಚಾಗಿರುತ್ತವೆ. ಎಮ್ಮೆಯ ಮಜ್ಜಿಗೆಗಿಂತ ಆಕಳ ಮಜ್ಜಿಗೆಯು ಹೆಚ್ಚು ಗುಣಕಾರಿಯಾದದ್ದು (ಚಿಕಿತ್ಸಾ ಪ್ರಭಾಕರವೆಂಬ ಹೊತ್ತಿಗೆಯೊಳಗಿನ ಪದಾರ್ಥಗಳ ಗುಣದೋಷವೆಂಬ ಪ್ರಕರಣದಲ್ಲಿಯು ಮಜ್ಜಿಗೆಯ ಗುಣಗಳನ್ನು ನೋಡಬಹುದು.)

ಮೂಲವ್ಯಾಧಿ, ಸಂಗ್ರಹಿಣಿ, ಉದರ, ಆಮಾಂಶ, ಗುಲ್ಮ, ಪಾಂಡು, ಶಾವಣಿ, ವಾತ, ಜ್ವರ, ಪ್ರಮೇಹ, ವಾಯುಶೂಲಿ, ಅರುಚಿ ಮುಂತಾದ ರೋಗಗಳಿಂದ ಗ್ರಸ್ತರಾದವರಿಗೆ ಮಜ್ಜಿಗೆಯಿಂದ ಚನ್ನಾಗಿ ಗುಣ ಕಂಡುಬರುತ್ತದೆ. ಹೊರಕಡಿ, ಆಮಾಂಶ, ಅಪಚನ ಇತ್ಯಾದಿ ರೋಗಿಗಳಿಗೆ ಹಾಲು ಕೂಡ ದಕ್ಕುತ್ತಿರದಿದ್ದರೆ, ಅವರನ್ನು ಬರೇ ಮಜ್ಜಿಗೆಯ ಪಥ್ಯದಿಂದ ಇಟ್ಟರೆ, ಅವರಿಗೆ ಬೇಗನೆ ಗುಣಕಾಣದಿರದು.

ಎರಡು ವರ್ಷದೊಳಗಿನ ಮಕ್ಕಳ ಕರುಳುಗಳು ದುರ್ಬಲವಾಗಿ ಅಪಚನವಾಗಿದ್ದರೆ ಅಥವಾ ಕರುಳುಗಳ ದಾಹವಾಗಿದ್ದರೆ ಇಲ್ಲವೆ ಹೊರಕಡಿ ಹತ್ತಿದ್ದರೆ ಮಧುರವೂ-ತಿಳ್ಳಗೂ ಆದ ಆಕಳ ತಾಜಾ ಮಜ್ಜಿಗೆಯನ್ನು ಕೊಟ್ಟರೆ ಒಳ್ಳೇ ಹಿತಕರವಾಗುವದು.

ಮಜ್ಜಿಗೆ ಕುಡಿಯುವದರಿಂದ ಕುತ್ತಿಗೆಯೊಳಗಿನ ಗಂಡಮಾಲೆಯು ನಾಶವಾಗುವದೆಂಬ ಪ್ರಯೋಗವು ಯೋಗರತ್ನಾಕರದಲ್ಲಿದೆ; ಆದರೆ ಅದನ್ನು ಡಾಕ್ಟರ ಮ್ಯಾನ ಲ್ಯಾರಿಸನ್‌ರು ಈಗ ಅನುಭವ ತಕ್ಕೊಂಡು ಒಳ್ಳೇ ಆಶ್ಚರ್ಯದಿಂದ ಹೇಳುತ್ತಾರೆ. ಕರ್ನಲ್ ಎರ್ವ್ಸರ್ಸ್‌ರೂ ಇತ್ತೀಚೆಗೆ ಮಜ್ಜಿಗೆಯನ್ನು ಹೊಗಳಹತ್ತಿದ್ದಾರೆ. ಈಗಿನ ನಮ್ಮಲ್ಲಿಯ ಡಾಕ್ಟರರು ಸಹ ರೋಗಿಗೆ ಮಜ್ಜಿಗೆಯನ್ನು ತಕ್ಕೊಳ್ಳಲಿಕ್ಕೆ ಶಿಫಾರಸು (ಆಗ್ರಹ) ಮಾಡತೊಡಗಿದ್ದಾರೆ. ಜ್ವರದೊಳಗೆ ಶ್ರೋತಸುಗಳು ಹಗುರಾಗುವ ಸಲುವಾಗಿ ಮಜ್ಜಿಗೆ ಕುಡಿಯಲಿಕ್ಕೆ ಎಷ್ಟೋ ಡಾಕ್ಟರರು ಹೇಳಹತ್ತಿದ್ದಾರೆ. ಹೀಗೆ ಮಾಡಲಿಕ್ಕೆ ವಾಗ್ಭಟನು ಎಂದೋ ಹೇಳಿರುತ್ತಾನೆ. ಪುಣೆ ಪಟ್ಟಣವಾಸಿಗಳಾದ ಮೊಹೊಂದಳೆ ವೈದ್ಯರು ರೋಗಿಗಳಿಗೆ ಮಜ್ಜಿಗೆಯ ಗುಣಧರ್ಮವನ್ನು ಹೇಳಿ, ಮಜ್ಜಿಗೆಯನ್ನು ಸೇವಿಸಲಿಕ್ಕೆ ಹೇಳುತ್ತಿದ್ದರಾದ್ದರಿಂದ, ಅವರಿಗೆ "ತಾಕೆ ವೈದ್ಯ." ಎಂಬ ಉಪನಾಮವು ಬಿದ್ದಿತ್ತು.

ಜ್ವರಪೀಡಿತರಿಗಂತೂ ಯಾವ ದೋಷವೂ ಇಲ್ಲದ ಆಹಾರವೆಂದರೆ ತಾಜಾ ಮಜ್ಜಿಗೆಯೇ ಸರಿ. ಅದರಲ್ಲಿ ತುಸ ಶುಂಠಿಯನ್ನು ತೆಯ್ದು, ಸ್ವಲ್ಪ ಸೈಂಧಲವಣ ಹಾಕಿ ಕೊಟ್ಟರೆ ಹೆಚ್ಚು ಗುಣಕಾರಿಯಾಗುತ್ತದೆ. ಮಜ್ಜಿಗೆಯಲ್ಲಿ ಸಾಯಟ್ರಿಕ್, ಮ್ಯುರಿಎಟಿಕ್, ಲ್ಯಾಕ್ಟಿಕ್ ಆ್ಯಸಿಡ್ಡುಗಳಿರುವವಲ್ಲದೆ, ಬೆಣ್ಣೆ ಮತ್ತು ಹಾಲೊಳಗಿನ ಇತರ ಪದಾರ್ಥಗಳೂ ಇರುತ್ತವೆ. ಅದರಿಂದ ಮಜ್ಜಿಗೆಯಲ್ಲಿ ಪಾಚಕಗುಣವು ಹೆಚ್ಚಾಗಿರುತ್ತದೆ. ಹೊಟ್ಟೆಯೊಳಗಿನ ಪಾಚಕ ಪಿಂಡಗಳ ಅಶಕ್ತತೆಯ ಮೂಲಕ ಪಾಚಕ ಪಿತ್ಥವು ಸಾಕಷ್ಟು ಉತ್ಪನ್ನವಾಗದೆ ಎಷ್ಟೋಸಾರೆ ಅಜೀರ್ಣವಾಗುತ್ತದೆ. ಇಂಥ ಪ್ರಸಂಗದಲ್ಲಿ ಮಜ್ಜಿಗೆಯೊಳಗಿನ ಆಮ್ಲದ ಪರಿಣಾಮವು ಪಾಚಕ ಪಿಂಡದ ಮೇಲೆ ಆಗಿ, ಸಾಕಷ್ಟು ಪಾಚಕಪಿತ್ಥವುಂಟಾಗಹತ್ತುತ್ತದೆ; ಅಲ್ಲದೆ ಮಜ್ಜಿಗೆಯೊಳಗಿನ ಆಮ್ಲದ ಪರಿಣಾಮವು ಕರುಳುಗಳ ಮೇಲೆ ಚೆನ್ನಾಗಿ ಆಗುತ್ತದೆ ಸಣ್ಣಕರುಳಿನೊಳಗಿರುವ ಸೂಕ್ಷ್ಮಪಿಂಡಗಳಿಂದಲೇ ಶರೀರದ ಪಚನ ಹಾಗು ಶೋಷಣ ಕ್ರಿಯೆಗಳಾಗುವವು. ಆ ಶೋಷಣ ಕ್ರಿಯೆಯು ಎಷ್ಟು ಚೆನ್ನಾಗಿ ಜರಗುವದೋ, ಅಷ್ಟು ಚೆನ್ನಾಗಿ ರಸೋತ್ಪಾದನ ಮತ್ತು ಅದೇ ಮಾನದಿಂದ ರಕ್ತಸಿದ್ಧಿಯ ಕ್ರಿಯೆಗಳು ಆಗುತ್ತವೆ. ವಿಶೇಷವಾಗಿ ಜ್ವರದೊಳಗೆ ಈ ಕ್ರಿಯೆಯು ಹೆಚ್ಚು-ಕಡಿಮೆ ಪ್ರಮಾಣದಿಂದ ಕೆಟ್ಟಿರುತ್ತದೆ. ಅಂಥ ಕಾಲದಲ್ಲಿ ಆ ಕ್ರಿಯೆಯನ್ನು ಸುಧಾರಿಸಿ ಸರಿಪಡಿಸಲು ಮಜ್ಜಿಗೆಯಂಥ ಅನ್ನವೇ ತಕ್ಕದ್ದಾಗುವದು.

ಕರುಳೊಳಗಿನ ಸೂಕ್ಷ್ಮಪಿಂಡಗಳ ಮೇಲೆ ಮಜ್ಜಿಗೆಯೊಳಗಿನ ಲ್ಯಾಕ್ಟಿಕ್ ಆ್ಯಸಿಡ್ಡದಿಂದ ಉತ್ತೇಜಕ ಪರಿಣಾಮವಾಗುವದರಿಂದ ಅವು ಮಂದವಾಗಿ ಉಳಿಯುವದಿಲ್ಲ; ಮತ್ತು ಅದೇ ಆ್ಯಸಿಡ್ಡಿನ ಜಂತುಘ್ನತೆಯ ಗುಣದಿಂದ ಕರುಳೊ

ಳಗಿನ ಸೂಕ್ಷ್ಮಜಂತುಗಳ ನಾಶವಾಗುತ್ತದೆ. ಹುಳಿ ಮಜ್ಜಿಗೆಯಿಂದ ಕರುಳೊಳಗಿನ ವಿಷಯುಕ್ತ ಜಂತುಗಳ ನಾಶವಾಗುತ್ತದೆ.

ಮಜ್ಜಿಗೆಯಲ್ಲಿ ಮ್ಯುರಿಎಟಿಕ್ ಆ್ಯಸಿಡ್ಡಿರುವದರಿಂದ ಅದೂ ಅತ್ಯುಪಯುಕ್ತವಾದ ಆಮ್ಲವಾಗಿದೆ ಅದರ ಸಹಾಯದಿಂದ ಯಕೃತ, ಉದುಕ (ನೀರುಗಡ್ಡೆ) ಇವುಗಳ ಕ್ರಿಯೆಗಳು ಸರಿಯಾಗಿ ಸಾಗುತ್ತವೆ. ಯಕೃತದೊಳಗಿಂದ ಪಿತ್ತಾಶಯದೊಳಗಾಗುವ ಸ್ರಾವವು ಚೆನ್ನಾಗಿ ಆಗುತ್ತದೆ; ಮತ್ತು ಅದು ಉದುಕ (ನೀರುಗಡ್ಡೆ)ದೊಳಗೆ ಪಿತ್ತವಾಹಿಯ ದ್ವಾರದಿಂದ ಸ್ರವಿಸುತ್ತದೆ. ಯಕೃತ ಪಿತ್ತವು ಪಚನಕ್ರಿಯೆಗೆ ಅತ್ಯುಪಯುಕ್ತವಾದದ್ದು. ಅದರ ಮೇಲೂ ಮಜ್ಜಿಗೆಯಿಂದ ಸುಪರಿಣಾಮವಾಗುವದು.

ಮಜ್ಜಿಗೆಯು ಒಗರಾಗಿರುತ್ತದೆ; ಆದರೆ ತಾಜಾ ಮಜ್ಜಿಗೆಯು ಹುಳಿ ಮಧುರವೂ ಒಗರೂ ಆಗಿರುತ್ತದೆ. ಆ ಒಗರಿನ ಗುಣಧರ್ಮದ ಮೂಲಕವೇ ಮಜ್ಜಿಗೆಯ ಒಗರು ಹೆಚ್ಚಿದೆ. ಮಜ್ಜಿಗೆಯೊಳಗಿನ ಆಮ್ಲದ್ರವ್ಯಗಳು(ಹುಳಿಯು) ಹೆಚ್ಚಾದವೆಂದರೆ ವಿಸ್ಫೋಟಕವಾಗುತ್ತದಾದ್ದರಿಂದ ತಾಜಾ ಮಜ್ಜಿಗೆಯನ್ನೇ ಉಪಯೋಗಿಸತಕ್ಕದ್ದು. ಕೇವಲ ಆಹಾರವೆಂದೇ ಮಜ್ಜಿಗೆಯನ್ನು ಸೇವಿಸಬೇಕು. ಸಂಗ್ರಹಿಣಿ, ಮೂಲವ್ಯಾಧಿ ಮುಂತಾದ ರೋಗಗಳಲ್ಲಿ ಕೆನೆಮೊಸರಿನಲ್ಲಿ ಅದರ ಕಾಲುಪಾಲು ನೀರು ಬೆರಸಿ ಕಡೆದು, ಬೆಣ್ಣೆ ತೆಗೆಯದಂಥ ಮಜ್ಜಿಗೆಯನ್ನು ಕೊಡಬೇಕು; ಆದರೆ ಜ್ವರದಲ್ಲಿ ಮಾತ್ರ ಬೆಣ್ಣೆ ತೆಗೆದ ಮಜ್ಜಿಗೆಯನ್ನೇ ಕೊಡತಕ್ಕದ್ದು. ಯಾಕಂದರೆ ಬೆಣ್ಣೆಯು ಪಚನಕ್ಕೆ ಜಡವಾಗುವದು; ಜ್ವರದಲ್ಲಿ ಅಗ್ನಿಮಾಂದ್ಯವಾಗುವದರಿಂದ ಅದು ಜೀರ್ಣವಾಗುವದಿಲ್ಲ.

ಎಷ್ಟೋ ಡಾಕ್ಟರರಂತೂ ಅಂತರ್ದಾಹಕ್ಕೆ ಮಜ್ಜಿಗೆಯಲ್ಲಿ ಬರ್ಫ ಹಾಕಿ ತೆಗೆದುಕೊಳ್ಳಹಚ್ಚುವರು; ಆದರೆ ವಿಶೇಷ ಪ್ರಸಂಗಗಳಲ್ಲಿ ಮಾತ್ರ ಅದರ ಸದುಪಯೋಗವಾಗುತ್ತದೆ. ಇತರತ್ರದಲ್ಲಿ ಆಗುವದಿಲ್ಲ. ಬರೇ ತಾಜಾ ಮಜ್ಜಿಗೆಯು ಮಾತ್ರ ನಿರ್ದೋಷಕರವಾದ ಆಹಾರವಾಗಿರುತ್ತದೆ.

ಡಾಕ್ಟರ ಶಾಪ್ನಸಬರಿಯು ಹೇಳುವದೇನಂದರೆ:—"೪ ದುಡ್ಡಿನ ಮಜ್ಜಿಗೆಯ ಸೇವನದಿಂದ ಎಷ್ಟು ಶಕ್ತಿಬರುವದೋ, ಅಷ್ಟು ಶಕ್ತಿಯು ೪ ರೂಪಾಯಿಗಳ ಮಾಂಸದಿಂದಲೂ ಬರಲಾರದು." ಇರಲಿ. ಮಜ್ಜಿಗೆಯು ಶರೀರಸಂವರ್ಧಕವಾಗಿರುವದರಿಂದ, ದಿನಾಲು ಸೇವಿಸಲಿಕ್ಕೆ ಅತಿ ಅಗ್ಗವಾದಂಥ ಆ ಅಮೃತರಸವನ್ನೇ ಬಡವರಾದ ನಮಗೋಸುಗ ನಿರ್ಮಿಸಿದ ಆ ದಯಾಘನ ಪರಮೇಶ್ವರನನ್ನು ಎಷ್ಟು ಕೊಂಡಾಡಿದರೂ ಕಡಿಮೆಯೇ ಸರಿ.

———

## ೮ ಜ್ವರದೊಳಗೆ ಹಾಲನ್ನೇಕೆ ಸೇವಿಸಬಾರದು?

ಜ್ವರಗಳೆಲ್ಲ ಬಹುಶಃ ಅಜೀರ್ಣಾದಿ ಕಾರಣಗಳಿಂದಲೇ ಹುಟ್ಟುವದರಿಂದ, ಜ್ವರ ಬಂದಾಗ ಜಠರಾಗ್ನಿಯು ಅತಿ ದುರ್ಬಲವಾಗಿರುತ್ತದೆ ಹಾಲು ಪೌಷ್ಟಿಕ ಅನ್ನವು ಅದರಿಂದ ಅದು ಜ್ವರ ರೋಗಿಗೆ ಪಚನವಾಗುವದಿಲ್ಲ; ಯಾಕಂದರೆ ಆಗ ಅವನಲ್ಲಿ ಜಠರ ರಸವು ಅತ್ಯಲ್ಪ ಹುಟ್ಟುತ್ತದೆ. ಅದರಿಂದ ಅವನಿಗೆ ಹಾಲು ಪಚನವಾಗದೆ ಅದರ ಸಣ್ಣ-ದೊಡ್ಡ ಕರಣೆಗಳಾಗಹತ್ತುತ್ತವೆ; ಇಲ್ಲವೆ ಸೇವಿಸಿದ ಎಲ್ಲ ಹಾಲಿನ ಒಂದೇ ಮುದ್ದೆಯಾಗುತ್ತದೆ. ಅರ್ಥಾತ್ ಅದು ಬೇಗನೆ ಪಚನವಾಗುವದಿಲ್ಲ. ಅದರಿಂದ ಅದು ಸ್ಪಂಜದಂತಾಗುತ್ತದೆ. ಆ ಹಾಲಿನ ಮುದ್ದೆಯ ಒಳಭಾಗವಂತೂ ಕೇವಲ ಅಪಕ್ವವಾಗಿರುತ್ತದೆ. (ಹಾಲಿನ ಬಗ್ಗೆ ಎಚ್ಚರಪಡಬೇಕಾಗಿದ್ದ ನಿಯಮಗಳ ಪ್ರಕಾರ ಶುದ್ಧ ಹಾಲು ಎಲ್ಲ ರೋಗಿಗಳಿಗೆ ದುರ್ಲಭವಾಗಿದೆ. ಪಟ್ಟಣಗಳಲ್ಲಂತೂ ರೋಗಿಗಳಿಗೆ ತಕ್ಕದ್ದಾದ ಸಶಾಸ್ತ್ರ ಹಾಲು ಸಿಗುವದೇ ಇಲ್ಲ. ಚಲೋ ಹಾಲನ್ನೇ ಜ್ವರ ರೋಗಿಗೆ ಕೊಡಬಾರದೆಂದು ವೈದ್ಯಶಾಸ್ತ್ರವು ಸಾರುತ್ತಿರುವಾಗ, ಅಶುದ್ಧ ಹಾಲನ್ನು ಕೊಡುವದೆಂದರೆ ರೋಗಿಗೆ ಸಾಯಲಿಕ್ಕೆ ಅಪ್ಪಣೆ ಕೊಟ್ಟಂತೆಯೇ ಸರಿ!) ಅದು ಪಚನವಾಗದ್ದರಿಂದ ಅದರ ಜಿಗುಟು ಹಾಗು ದುರ್ಗಂಧಯುಕ್ತ ಹರಳುಗಳಾಗುತ್ತವೆ ಅವು ಜಠರದಲ್ಲಿ ಮತ್ತು ಕರುಳಿನಲ್ಲಿ ಉಳಿಯುವದರಿಂದ ಕ್ರಿಮಿಗಳ ಬೆಳವಣಿಗೆಯು ಬೇಗನೆ ಆಗಿ, ಜ್ವರ ಹೆಚ್ಚಾಗಲಿಕ್ಕೆ ಸಹಾಯವಾಗುತ್ತದೆ. ಆದುದರಿಂದ ಜ್ವರದಲ್ಲಿ ಹಾಲು ಕೊಡುವದು ಘಾತುಕವಾಗಿರುತ್ತದೆ. ಹಾವಿಗೆ ಹಾಲೆರದರೆ ಆ ಹಾಲೂ ಹೇಗೆ ವಿಷವೇ ಆಗುವದೋ, ಹಾಗೆ ಹಾಲು ಜ್ವರರೋಗಿಯ ಜಠರದೊಳಗಿನ ಆಮವನ್ನು ವೃದ್ಧಿಪಡಿಸಲಿಕ್ಕೆ ಕಾರಣವಾಗುತ್ತದೆ ಆದರೂ ರಕ್ತಕ್ಷಯಜ್ವರ, ಉರಃಕ್ಷತ ಜ್ವರ, ಕ್ಷಯಜ್ವರ, ಆಘಾತಜ್ವರ, ಭಯಜ್ವರ ಮುಂತಾದ ಅಜೀರ್ಣಾಂಶವಿಂದ ಹುಟ್ಟದಿದ್ದ ಹಾಗು ಆಗಂತುಕಜ್ವರಗಳಲ್ಲಿ ಹಾಲಿನ ಅವಶ್ಯಕತೆಯಿರುತ್ತದೆ. ಯಾಕಂದರೆ ಇಂಥ ಜ್ವರಗಳಲ್ಲಿ ರೋಗಿಯ ಪಚನಶಕ್ತಿಯು ಕಡಿಮೆಯಾಗಿರುವದಿಲ್ಲ; ಆದರೆ ಪ್ಲೇಗ, ಎನ್‌ಫ್ಲುಎಂಝಾ, ಕೀಟಕದಂಶಜನಿತ ಜ್ವರ, ದೂಷಿತಜಲ ಜನಿತ ಜ್ವರ ಇತ್ಯಾದಿ ರಕ್ತವಿಕೃತಜ್ವರಗಳಲ್ಲಿ ಎಷ್ಟೋ ಮಂದಿ ಡಾಕ್ಟರರೂ, ವೈದ್ಯರೂ, ಹಕೀಮರೂ ರೋಗಿಗೆ ಹಾಲು ಸೇವಿಸಲಿಕ್ಕೆ ಹೇಳುತ್ತಿರುತ್ತಾರೆ. ಆ ಜ್ವರಗಳು ಕೀಟಕವಿಷಜನ್ಯಗಳಾದುದರಿಂದ ಹಾಲು ಕೊಟ್ಟರೆ, ಅದು ಶರೀರದೊಳಗೆ ಭೇದಿಸಿದ ಆ ವಿಷದೂಷಿತ ರಕ್ತದಿಂದ ಬೇಗನೆ ಕೆಟ್ಟು, ವಿಷಜಂತುಗಳ ಅಭಿವೃದ್ಧಿಗೆ ಪೋಷಕವಾಗುತ್ತಿರುವದರಿಂದ ಅವುಗಳು ತೀವ್ರವಾಗಿ ಬೆಳೆಯುವವು; ಆದ್ದರಿಂದ ಇಂಥ ಜ್ವರಗಳಲ್ಲಿ ಹಾಲು ಕೊಡುವದು

ಸರಿಯಲ್ಲ. ಹಾಲಿನ ಯೋಗ್ಯತೆಯು ಬಹು ದೊಡ್ಡದೆಂಬ ಮಾತು ಸರ್ವಸಮ್ಮತವಾದುದು; ಆದರೆ ಎಲ್ಲ ಜ್ವರಗಳಲ್ಲಿಯೂ ಅದರ ಉಪಯೋಗವು ಏಕೋಪ್ರಕಾರವಾಗಿ ಆಗುವದಿಲ್ಲ. ಉಳಿದ ರೋಗಗಳಲ್ಲಿ ಅಂದರೆ ಕ್ಷಯ, ಪಾದಾಗ್ರಘಾತ, ಸಂಧಿವಾತ, ರಕ್ತಪಿತ್ತ ಮುಂತಾದವುಗಳಲ್ಲಿ ಹಾಲಿನ ಉಪಯೋಗವು ಚೆನ್ನಾಗಿ ಆಗುತ್ತದೆಂಬ ಮಾತು ನಿರ್ವಿವಾದವಾದದ್ದು.

## ೮ ವಾತಜ್ವರ.

ಲಕ್ಷಣಗಳು:—ಮೈ ನಡುಗುವದು, ಗಂಟಲು ಹಾಗು ತುಟಿಗಳು ಒಣಗುವದು, ಮಲಾವರೋಧ, ಶೀನು ಬರದಿರುವದು, ಹೊಟ್ಟೆ, ತಲೆ, ನಡ, ಕಣ್ಣು, ಮೈ ಹಾಗು ಪಕ್ಕೆಗಳಲ್ಲೆಲ್ಲ ನೋವುಂಟಾಗುವದು, ನಿದ್ರಾನಾಶವಾಗುವದು, ಕೆಲ ಹೊತ್ತು ತುಸ ಹಾಗು ಕೆಲ ಹೊತ್ತು ಹೆಚ್ಚು ಜ್ವರ ಬರುವದು, ಬಾಯಿಗೆ ರುಚಿಯಿಲ್ಲದಿರುವದು, ಅನ್ನಕ್ಕೆ ರುಚಿ ಮತ್ತು ಇಚ್ಛೆಯಿರದಿರುವದು, ಆಕಳಿಕೆ ಬರುವದು, ಹೊಟ್ಟೆಯುಬ್ಬುವದು, ಅನ್ನ ಪಚನವಾಗದಿರುವದು, ಭ್ರಮೆ, ಮೋಹ, ಮೈಮೇಲೆ ರೋಮಾಂಚಗಳೇಳುವದು, ಕಣ್ಣಿಗೆ ಮುಬ್ಬು ಬರುವದು, ತೊಡೆ ಒಡೆಯುವದು, ಕಿವಿಯಲ್ಲಿ ನಾದವಾಗುವದು ಮತ್ತು ಒಣಕೆಮ್ಮು ಇತ್ಯಾದಿ ಲಕ್ಷಣಗಳುಂಟಾಗುತ್ತವೆ.

ಔಷಧವು ಜೀರ್ಣಿಸಿದ ಹಾಗು ಜೀರ್ಣಿಸದಿದ್ದ ಲಕ್ಷಣಗಳು:—ವಾತದ ಅನುಲೋಮನವೆಂದರೆ ವಾತವು ಹೆಚ್ಚಾಗದಿರುವದು, ಮನಸ್ಸಿಗೆ ಸ್ವಾಸ್ಥ್ಯವೆನಿಸುವದು, ಹಸಿವೆ-ನೀರಡಿಕೆಗಳು ಕಾಲಕಾಲಕ್ಕೆ ಸರಿಯಾಗಿ ಆಗುವದು, ಮೈ ಹಗುರಾಗುವದು, ಇಂದ್ರಿಯಗಳು ಪ್ರಸನ್ನವಾಗುವದು, ಸ್ವಚ್ಛವಾಗಿಯೂ ನಿರಾತಂಕವಾಗಿಯೂ ತೇಗು ಬರುವದು ಮುಂತಾದವು ಔಷಧ ಜೀರ್ಣಿಸಿದ ಲಕ್ಷಣಗಳಾಗಿರುತ್ತವೆ; ಮತ್ತು ಅಶಕ್ತತೆ, ಕೈಕಾಲು ಹರಿಯುವದು, ಶರೀರ ದಾಹವಾಗುವದು, ಬವಳಿ ಬರುವದು, ಮೂರ್ಛೆ ಬರುವದು, ತಲೆ ನೋಯುವದು, ಸ್ವಾಸ್ಥ್ಯ ತೋರದಿರುವದು ಮತ್ತು ಶಕ್ತಿಕ್ಷೀಣವಾಗುವದು ಇವೆಲ್ಲ ಔಷಧವು ಜೀರ್ಣಿಸದಿದ್ದ ಲಕ್ಷಣಗಳಾಗಿರುವವು.

## ವಾತಜ್ವರಕ್ಕೆ ಉಪಾಯಗಳು.

೧ ಹಿಪ್ಪಲಿಬೇರು, ಕಲ್ಲಸಬ್ಬಸಿಗೆ, ಅಡಸಾಲದ ಎಲೆ, ಗಂಟುಭಾರಂಗಿ, ಶುಂಠಿ, ಅಮೃತಬಳ್ಳಿ ಇವುಗಳ ಕಾಢೆ-ನಿಕಾಢೆಯನ್ನು ತುಸ ಜೇನುತುಪ್ಪ ಕೂಡಿಸಿ ಕೊಡಬೇಕು; ಅಂದರೆ ವಾತಜ್ವರವು ತೀವ್ರ ನಿಲ್ಲುವದು.

**ಸೂಚನೆ:**—ಕಷಾಯವು ಆರಿದ ಬಳಿಕ ಅದರಲ್ಲಿ ಜೇನುತುಪ್ಪವನ್ನು ಕೂಡಿಸಬೇಕು; ಆದರೆ ಬೆಲ್ಲ, ಸಕ್ಕರೆ, ಕಲ್ಲಸಕ್ಕರೆ, ತುಪ್ಪ, ಎಣ್ಣೆ ಮುಂತಾದ

ವುಗಳನ್ನು ಹಾಕುವದಾದರೆ ಕಷಾಯವು ಬಿಸಿಯಿರುವಾಗಲೆ ಹಾಕಬೇಕು. ಇವುಗಳ ಪ್ರಮಾಣವು ಕಷಾಯಕ್ಕೆ ಉಪಯೋಗಿಸಿದ ಔಷಧಗಳ ಕಾಲುಪಾಲು ಅಂದರೆ ಕಷಾಯದೊಳಗಿನ ಎಲ್ಲ ಸಾಮಾನು ಸೇರಿ ೪ ತೊಲೆಯಾಗುತ್ತಿದ್ದರೆ ಜೇನತುಪ್ಪ ಇಲ್ಲವೆ ಬೆಲ್ಲ ಸಕ್ಕರೆ ಇತ್ಯಾದಿಗಳು ೧ ತೊಲಿ ಇರತಕ್ಕದ್ದು.

೨ ಮೂರೆಲೆಹೊನ್ನೆ, ಉರಿಹೊನ್ನೆ, ಕಲ್ಲಕಡಲೆ ಬೇರು, ಕರೇದ್ರಾಕ್ಷಿ, ಅಮೃತಬಳ್ಳಿ, ಕಂಬಂಟನಬಳ್ಳಿ ಇವುಗಳ ಕಷಾಯದಿಂದ ತೀವ್ರ ವಾತಜ್ವರದ ನಾಶವಾಗುತ್ತದೆ.

೩ ಅದ್ಭುತವಾತ ಭೈರವ:—ಶುದ್ಧ ಇಂಗಳೀಕ, ಮೆಣಸು, ಬಳೆಗಾರ, ಸಣ್ಣಹಿಪ್ಪಲಿ ಇವುಗಳನ್ನು ಸರಿಯಾಗಿ ತಕ್ಕೊಂಡು ಖಾರಗೆಣಸಿನ ರಸದಲ್ಲಿ ನಾಲ್ಕು ಪ್ರಹರದ ವರೆಗೆ ಅರೆದು ಅವರೇಕಾಳಿನಷ್ಟು ಗುಳಿಗೆಗಳನ್ನು ಮಾಡಿಡಬೇಕು; ಹಾಗು ಅಲ್ಲದ ಇಲ್ಲವೆ ತುಲಸೀರಸದಲ್ಲಿ ಪ್ರತಿ ಸಾರೆ ಒಂದೊಂದು ಗುಳಿಗೆಯಂತೆ ಕೊಡಬೇಕು.

೪ ವಾತಜ್ವರಕ್ಕೆ ಹಿಂಗುಳೇಶ್ವರ ಮಾತ್ರೆ:—ಶುದ್ಧ ಇಂಗಳೀಕ, ಸಣ್ಣ ಹಿಪ್ಪಲಿ ಸಮಭಾಗ ತಕ್ಕೊಂಡು ಅರೆದು ಅವರೇಕಾಳಿನಷ್ಟು ಗುಳಿಗೆಯನ್ನು ಮಾಡಿ ಜೇನುತುಪ್ಪದಲ್ಲಿ ಕೊಡತಕ್ಕದ್ದು.

೫ ವಾತಜ್ವರಕ್ಕೆ ಪಾಚನವು:—ಅಮೃತಬಳ್ಳಿ, ಹಿಪ್ಪಲೀಬೇರು, ಶುಂಠಿ ಇವುಗಳ ಕಾಡೆ-ನಿಕಾಢೆಯಿಂದ ಈ ಜ್ವರದ ಪಚನವಾಗುತ್ತದೆ. ಇಲ್ಲವೆ ಬೃಹತ್ರ್ಯಂಚ(ಕೋಶ ನೋಡಿರಿ) ಮೂಲಿಕೆಗಳ ಕಷಾಯದಿಂದಲೂ ಪಚನವಾಗುತ್ತದೆ.

೬ ಬಾಳದಬೇರು, ಶುಂಠಿ, ಉರಿಹೊನ್ನೆ, ನೆಲಬೇವು, ಆನೆಮಾಲದಬೇರು ಇಲ್ಲವೆ ತದಕನ ಬೇರು, ನೆಲಗುಳ್ಳಬೇರು, ಗುಳ್ಳದಬೇರು, ಅಮೃತಬಳ್ಳಿ, ನೆಗ್ಗಿಲ ಮುಳ್ಳು ಇವುಗಳ ಕಾಢೆ-ನಿಕಾಢೆ ಮಾಡಿ ೩ ಇಲ್ಲವೆ ೭ ದಿವಸ ಕೊಡಬೇಕು. ಅಂದರೆ ವಾತಜ್ವರಗಳು ಕೂಡಲೆ ನಿಲ್ಲುವವು.

೭ ಅಮೃತಬಳ್ಳಿ, ನೆಲಇಂಗಳ, ಜೇಕಿನಗಡ್ಡೆ ಇವುಗಳ ಕಾಢೆ-ನಿಕಾಢೆಯನ್ನು ೭ ದಿನ ಕೊಡಬೇಕು.

೮ ತೀವ್ರ ವಾತಜ್ವರಕ್ಕೆ:—ಮೂರೆಲೆಹೊನ್ನೆ, ಕಲ್ಲಕಡಲೆಯ ಬೇರು, ಕರೇ ದ್ರಾಕ್ಷಿ, ಅಮೃತಬಳ್ಳಿ, ಕಂಬಂಟನಬಳ್ಳಿ; ಅವಗೂದೆ ಇಲ್ಲವೆ ಕಾಗೆದೊಂಡೆ, ನುಗ್ಗೀತೊಗಟೆ ಇವುಗಳ ಕಾಢೆ-ನಿಕಾಢೆಯನ್ನು ೩ ಇಲ್ಲವೆ ೭ ದಿನ ಕೊಡಬೇಕು.

೯ ಸಣ್ಣಹಿಪ್ಪಲಿ, ಅಮೃತಬಳ್ಳಿ, ಶುಂಠಿ, ದೇವದಾರು, ನೆಲಗುಳ್ಳಬೇರು, ಗಂಟು ಭಾರಂಗಿ, ಹವೀಜ, ಹಿಪ್ಪಲೀಬೇರು, ತಾವರೆ ಗಡ್ಡೆ ಇವುಗಳ ಕಾಢೆ-

ಷೆಯನ್ನು ಕೊಟ್ಟರೆ ಉಬ್ಬಸ-ಕೆಮ್ಮುಗಳಿಂದ ಯುಕ್ತವಾದ ವಾತಜ್ವರದ ಶವಾಗುತ್ತದೆ.

೧೦ ಗಂಧಕಚೂರಾ, ಕೊಳಂಜನ, ಗಂಟುಭಾರಂಗಿ, ದುಷ್ಟಪುಟೆಟ್ಟು, ಇಂಗಳ, ಅಮೃತಬಳ್ಳಿ, ಶುಂಠಿ, ಅಗಳುಶುಂಠಿ, ನೆಲಬೇವು, ಕಟುಕರೋಣೆ ಗಳನ್ನು ಸರಿಯಾಗಿ ಕಕ್ಕೊಂಡು ಕಾಷೆ-ನಿಕಾಷೆ ಮಾಡಿಕೊಟ್ಟರೆ ಕೆಮ್ಮು ಗು ಇತರ ವಿಕಾರದಿಂದ ಯುಕ್ತವಾಗಿದ್ದ ವಾತಜ್ವರಗಳು ಗುಣಹೊಂದುತ್ತವೆ.

೧೧ ತ್ರಿಫಳಾ, (ಅಳಲೆಕಾಯಿ, ತಾರೀಕಾಯಿ, ನೆಲ್ಲಿಚೆಟ್ಟು,) ತ್ರಿಕಟು, ಂಠಿ, ಮೆಣಸು, ಹಿಪ್ಪಲಿ) ಬೆಲ್ಲ, ಸಕ್ಕರಿ ಇವನ್ನೆಲ್ಲ ೧-೧ಭಾಗ ಹಾಗು ಇವು ಲ್ಲಿ ಇವೆಲ್ಲವುಗಳ ಅರ್ಧಭಾಗ ತಿಗಡಿ ಕೂಡಿಸಿ ಚೂರ್ಣಮಾಡಿ ಒಂದೊಂದು ಲಿಯ ಗುಳಿಗೆ ಮಾಡಿಡಬೇಕು. ಅವುಗಳಲ್ಲಿಯ ಒಂದು ಗುಳಿಗೆಯನ್ನು ದು ಮೇಲೆ ಬಿಸಿ ನೀರು ಕುಡಿಯಬೇಕು. ಅಂದರೆ ಹೊಟ್ಟೆಶೂಲಿ, ಅರುಚಿ, ಮ್ಮು, ವಾತಜ್ವರ ಇವುಗಳ ನಾಶವಾಗುತ್ತದೆ.

೧೨ ಶುದ್ಧ ಪಾರಜ, ಗಂಧಕ, ಇಂಗಳಾರ ಇವುಗಳನ್ನು ಸರಿಯಾಗಿ ಕ್ಕೊಂಡು ಇವುಗಳಿಗೆ ಖಾರಗೆಣಸಿನ ಭಾವನೆಕೊಟ್ಟು, ಸಣ್ಣಹಿಪ್ಪಲಿಯ ರಸ ಇಲ್ಲವೆ ಕಷಾಯದಲ್ಲಿ ೭ ಭಾವನೆ ಕೊಡಬೇಕು. ಬಳಿಕ ಎಲ್ಲವುಗಳ ರ್ಣ ಮಾಡಿ ಮೆಣಸಿನಾರ ಕಷಾಯ, ಭಂಗಿಸೊಪ್ಪಿನ ಕಷಾಯ, ಕರೇ ತ್ತುರಿಯ ರಸ ಇವುಗಳಲ್ಲಿ ಪ್ರತ್ಯೇಕವಾಗಿ ೭-೭ ಭಾವನೆ ಕೊಟ್ಟು ಅವರೇ ಳಷ್ಟು ಗುಳಿಗೆ ಮಾಡಿ ಅವನ್ನು ಜೇನುತುಪ್ಪ, ಹಿಪ್ಪಲಿಪುಡಿ ಇವುಗಳಲ್ಲಿ ದೊಂದು ಗುಳಿಗೆಯಂತೆ ೭ ದಿವಸ ಎರಡು ಸಾರೆ ಕೊಡುತ್ತ ಹೋದರೆ ಥ ವಾತಜ್ವರವಾದರೂ ಖಂಡಿತವಾಗಿ ನಿಲ್ಲುತ್ತವೆ.

---

## ೧೦ ಪಿತ್ತಜ್ವರ.

ಲಕ್ಷಣ:—ದೇಹವು ಹಳವೀ ಒಣ್ಣಾದ್ದಾಗುವದು, ಪ್ಯೆಯೆಲ್ಲ ಉರಿಯು ಕ್ಕುವದು, ನೀರಡಿಕೆ, ಮೂರ್ಛೆ, ಅಲ್ಪನಿದ್ರೆ, ಬಾಯಿ ಕಹಿಯಾಗುವದು, ಕರಿಕೆ, ಬವಳಿಬರುವದು, ಬಡಬಡಿಸುವದು, ಮಲವು ತೆಳ್ಳಗಾಗುವದು, ವರು ಬರುವದು, ಅಮಲು ಬರುವದು, ತಂಪು ಪದಾರ್ಥಗಳ ಮೇಲೆ ಬಯಕೆ ಾಗುವದು, ಮಲಮೂತ್ರ ಹಾಗು ಕಣ್ಣುಗಳು ಅರಿಷಿಣವರ್ಣವಾಗುವದು ವೆಲ್ಲ ಪಿತ್ತಜ್ವರದ ಲಕ್ಷಣಗಳಾಗಿರುತ್ತವೆ ಪಿತ್ತಜ್ವರದಲ್ಲಿ ಮೊದಲು ವಾಂತಿ ಾಡಿಸುವದುತ್ತಮವು. ಇದರಿಂದ ದೋಷಗಳು ಕಡಿಮೆಯಾಗುವವು. ಪಿತ್ತ ಳುವ ಮುಟ್ಟಿಗೆ ಮಾತ್ರ ವಾಂತಿ ಮಾಡಿಸಬೇಕು.

## ಪಿತ್ಥಜ್ವರಕ್ಕೆ ಉಪಾಯಗಳು.

೧ ದೀಪದ್ರಾಕ್ಷಿ, ಕಹಿಪಡವಲ, ಬೇವು, ಕಟುಕರೋಹಿಣಿ, ಬಾಳಿಪಿರಡಾ, ನೆಲಗುಳ್ಳ ಬೇರು, ಬಾಳದಬೇರು, ಹವೀಜ, ಲೋಧ್ರ(ಬಾಲಾರಿ ಗಿಡ,) ಜೇಕಿನ ಗಡ್ಡೆ, ಶುಂಠಿ ಇವುಗಳ ಕಾಢೆ-ನಿಕಾಢೆಯಿಂದ ಎಂಥ ಪಿತ್ಥಜ್ವರವಾದರೂ ನಿಲ್ಲುವದು.

೨ ದೀಪದ್ರಾಕ್ಷಿ, ಅಳಲೆಕಾಯಿ, ಕಲ್ಲುಸಬ್ಬಸಿಗೆ, ಜೇಕಿನ ಗಡ್ಡೆ, ಕಟುಕರೋಹಿಣಿ, ಕಕ್ಕೇಕಾಯಿಯೊಳಗಿನ ತಿರುಳು ಇವುಗಳ ಕಾಢೆ-ನಿಕಾಢೆ ಕೊಟ್ಟರೆ ಬಡಬಡಿಕೆ, ಮೂರ್ಛೆ, ದಾಹ, ಬವಳಿ, ಶೋಷ, ನೀರಡಿಕೆಗಳಿಂದ ಯುಕ್ತವಾದ ಪಿತ್ಥಜ್ವರದ ನಾಶವಾಗುತ್ತದೆ

೩ ನೆಲಬಂಗಳ, ಕಲ್ಲಸಬ್ಬಸಿಗೆ, ಗೌಲ, ನೆಲಬೇವು, ಅಡಸಾಲ, ಕಟುಕರೋಹಿಣಿ ಇವುಗಳ ಕಷಾಯದಲ್ಲಿ ಸಕ್ಕರೆ ಹಾಕಿ ಕೊಟ್ಟರೆ ನೀರಡಿಕೆ, ರಕ್ತಪಿತ್ಥಜ್ವರ, ದಾಹ ಇವುಗಳ ನಾಶವಾಗುತ್ತದೆ.

೪ ಬರೇ ಕಲ್ಲುಸಬ್ಬಸಿಗೆಯ ಕಷಾಯದಿಂದ ಪಿತ್ಥಜ್ವರದ ನಾಶವಾಗುವದು. ಅದರಲ್ಲಿ ಚಂದನ, ಬಾಳದಬೇರು, ಶುಂಠಿ ಇವುಗಳನ್ನು ಹಾಕಿ ಮಾಡಿದ ಕಷಾಯದಿಂದಂತೂ ಆ ಜ್ವರವು ಹೇಳಹೆಸರಿಲ್ಲದಂತಾಗುತ್ತದೆ.

೫ ರಕ್ತಚಂದನ, ಹವೀಜ, ಅಮೃತಬಳ್ಳಿ, ಬೇವಿನ ತೊಗಟೆ, ಪದ್ಮಕಾಷ್ಠ ಇವುಗಳ ಕಾಢೆ-ನಿಕಾಢೆ ಕೊಟ್ಟರೆ ಪಿತ್ಥಜ್ವರ, ಕಫಜ್ವರ, ತೃಷಾ, ದಾಹ, ವಾಂತಿಯು ಇವುಗಳು ಕ್ಷಿಪ್ರದಲ್ಲಿ ನಾಶವಾಗುತ್ತವೆ.

೬ ಶುಂಠಿ, ಕಲ್ಲುಸಬ್ಬಸಿಗೆ, ಬಾಳದಬೇರು, ಜೇಕಿನ ಗಡ್ಡೆ, ರಕ್ತಚಂದನ ಇವುಗಳ ಕಷಾಯವನ್ನು ಆರಿಸಿ ಕೊಡಬೇಕು. ಅಂದರೆ ಓಕರಿಕೆ, ದಾಹ, ಪಿತ್ಥಜ್ವರಗಳ ನಾಶವಾಗುವದು

೭ ರಕ್ತಚಂದನ, ಹವೀಜ, ಬಿಳೀ ಗಣಜಲಿಬೇರು, ಬಾಳದಬೇರು, ಕಲ್ಲಸಬ್ಬಸಿಗೆ ಇವುಗಳ ಕಷಾಯದಲ್ಲಿ ಸಕ್ಕರೆ ಕೂಡಿಸಿ ಕೊಡಬೇಕು.

೮ ಶಿವನೀಬೇರು, ಕಾಗೆದೊಂಡೆ, ಕರೇದ್ರಾಕ್ಷಿ, ಚಂದನ, ಬಾಳದಬೇರು, ನೆತ್ತರಬಾಳ, ಜೇಕಿನಗಡ್ಡೆ. ಕಲ್ಲಸಬ್ಬಸಿಗಿ ಇವುಗಳನ್ನು ಸಮಪ್ರಮಾಣದಿಂದ ತಕ್ಕೊಂಡು ಕಷಾಯ ಮಾಡಿ ಆರಿಸಿ, ಸೋಸಿ, ಅದರಲ್ಲಿ ಜೇನುತುಪ್ಪ ಹಾಕಿ ಕೊಡಬೇಕು. ಇದರಿಂದ ಪಿತ್ಥಜ್ವರ, ದೃಷ್ಟಿಭ್ರಮ, ದಾಹ, ವಾಂತಿ ಇವುಗಳ ನಾಶವಾಗುತ್ತದೆ.

೯ ಹಳೇ ಹುಣಸೇಹಣ್ಣನ್ನು ರಾತ್ರಿ ನೀರೊಳಗೆ ನೆನೆಹಾಕಿ, ಬೆಳಗ್ಗೆ ಅದರೊಳಗಿನ ಅರ್ಧಸೇರು ನೀರು ಸೋಸಿಕೊಂಡು ಅದರಲ್ಲಿ ಒಂದೊಂದು ಬಿಳೀ

ತೂಕ ಶುಂಠಿ, ದಾಲಚಿನ್ನಿಗಳನ್ನು ಕೂಡಿಸಿ ಅಷ್ಟಮಾಂಶ ಕಷಾಯ ಮಾಡಿ ಇಳಿಸುವಾಗ ಸಕ್ಕರೆ ಹಾಕಿ ಸೋಸಿ ಕುಡಿಸಬೇಕು. ಇದರಿಂದ ಪಿತ್ತಜ್ವರವು ಶೀಘ್ರ ಕಡಿಮೆಯಾಗುತ್ತದೆ. ಇದರ ನಿಕಾಢ ಮಾಡಬಾರದು. ರಾತ್ರಿಯಲ್ಲಿ ಕಷಾಯ ಕೊಡುವ ಸಲುವಾಗಿ ಬೆಳಿಗ್ಗೆ ಹುಣಿಸೇಹಣ್ಣು ನೆನೆಹಾಕಿ ಮೇಲಿನ ಕ್ರಮದಂತೆ ಮಾಡಿಕೊಡಬೇಕು.

೧೦ ಪಂಚಭದ್ರ ಕಷಾಯ:—ಶುಂಠಿ, ಜೇಕಿನ ಗಡ್ಡೆ, ಕಲ್ಲಸಬ್ಬಸಿಗಿ, ಅಮೃತಬಳ್ಳಿ, ನೆಲಬೇವಿನ ಕಡ್ಡಿ ಇವುಗಳ ಕಷಾಯದಿಂದ ಪಿತ್ತಜ್ವರವು ನಾಶವಾಗುತ್ತದೆ.

೧೧ ನೆಲಗುಂಬಳ, ದಾಳಿಂಬರ, ಲೋಧ್ರ, ಬೆಳವಲಕಾಯಿ ಇವುಗಳನ್ನ ರೆದು ತೃಷೆ ಮತ್ತು ದಾಹಗಳಿಂದ ಯುಕ್ತನಾದವನ ತಲೆಗೆ ಲೇಪ ಮಾಡಬೇಕು.

೧೨ ಮಾದಾಳದ ತುರಿ, ಜೇನುತುಪ್ಪ, ಸೈಂಧಲವಣ ಇವನ್ನು ಕಲಸಿ ತಲೆಗೆ ಹಚ್ಚಿದರೆ, ನಾಲಿಗೆ, ನೆತ್ತಿ, ಗಂಟಲು, ಕ್ಲೋಮ (ಪಿಪಾಸಾಸ್ಥಾನ) ಈ ಸ್ಥಾನಗಳಲ್ಲಿಯ ದೋಷವು ಕಡಿಮೆಯಾಗುತ್ತದೆ.

೧೩ ಅತ್ತಿಯ ಬೇರು ಮತ್ತು ಅಮೃತಬಳ್ಳಿ ಇವುಗಳ ಕಷಾಯ ಇಲ್ಲವೆ ಕಹಿಪಡವಲದ ಕಷಾಯ ಅಥವಾ ಬಡೇಕೋಸದ ಕಷಾಯ ಇವುಗಳಲ್ಲಿ ಸಕ್ಕರೆ ಹಾಕಿ ಕೊಡಬೇಕು. ಇವುಗಳಿಂದ ಪಿತ್ತಜ್ವರದ ನಾಶವಾಗುತ್ತದೆ.

೧೪ ಪಿತ್ತಜ್ವರಗಳಿಗೆ ಪಾಚನವು:—ಕಟುಕರೋಣಿ, ಜೇಕಿನಗಡ್ಡೆ, ಕೋಡುಮುರುಕನ ಬೀಜ, ಅಗುಳುಶುಂಠಿ, ಕಿರಶಿವನಿ, ಬಾಳದಬೇರು ಇವುಗಳ ಕಷಾಯದಲ್ಲಿ ಸಕ್ಕರೆ ಕೂಡಿಸಿ ಕುಡಿದರೆ ಪಿತ್ತಜ್ವರವು ಕಡಿಮೆಯಾಗುತ್ತದೆ.

೧೫ ಪಿತ್ತಜ್ವರದಲ್ಲಿ ತಲೆನೋಯುತ್ತಿದ್ದರೆ, ತಲೆಕಾಯುತ್ತಿದ್ದರೆ ಇಲ್ಲವೆ ತೀವ್ರ ಜ್ವರಬರುತ್ತಿದ್ದರೆ ನೀಲೀ ಕಮಲಗಳನ್ನು ನೀರಲ್ಲಿ ಕುಟ್ಟಿ, ಆ ಕಷಾಯದಲ್ಲಿ ಕಲ್ಲಸಕ್ಕರೆ ಹಾಕಿ ಪಾಕ ಮಾಡಬೇಕು; ಮತ್ತು ಆ ಪಾಕ (ಸರಬತ್ತ)ವನ್ನು ಮೂರು ಮೂರು ತಾಸಿಗೆ ಕುಡಿಸಬೇಕು.

೧೬ ಶುದ್ಧಪಾರಜ, ಗಂಧಕ, ತಾಮ್ರಭಸ್ಮ, ನೇಪಾಳದ ಬೇರು ಇವನ್ನು ಸರಿಯಾಗಿ ತಿಕ್ಕೊಂಡು ಅರೆದು, ಆ ಚೂರ್ಣಕ್ಕೆ ಒಕ್ಕೇರಸದ ಮತ್ತು ಖಾರಗೆಣಸಿನ ರಸದ ೧-೧ ಭಾವನೆ ಕೊಟ್ಟು ಮತ್ತೆ ಅರೆದು ಗುಲಗಂಜಿಯಷ್ಟು ಮಾತ್ರೆಗಳನ್ನು ಮಾಡಬೇಕು. ಪ್ರತಿಸಾರೆ ೧ ಮಾತ್ರೆಯನ್ನು ಅಲ್ಲದ ರಸದಲ್ಲಿ ಕೊಡಬೇಕು. ಎರಡೇ ಪ್ರಹರದಲ್ಲಿ ಪಿತ್ತಜ್ವರ ಕಡಿಮೆಯಾಗುತ್ತದೆ. ರೋಗಿಯು ತಣ್ಣೀರಿನಿಂದ ಸ್ನಾನಮಾಡಬೇಕು. ಮಜ್ಜಿಗೆಯನ್ನ ಉಣಬೇಕು. ದಾಳಿಂಬರಹಣ್ಣು ತಿನ್ನಬೇಕು. ಈ ಮಾತ್ರೆಯು ಶೂಲಿ ಹಾಗು ಸಂಗ್ರಹಿಣಿಗೂ

ಬರುವದು. ಇದಕ್ಕೆ ಸಿಂಹರಸವೆನ್ನುತ್ತಾರೆ. ಈ ಔಷಧಕ್ಕೆ ಸಿಟ್ಟು, ಸಾಹಸ, ಸ್ತ್ರೀಸಂಗ, ವ್ಯಾಯಾಮಗಳು ವರ್ಜ್ಯ.

೧೭ ಕಹಿಪಡುವಲ ಮತ್ತು ಸದಳ ಇವುಗಳ ಕಷಾಯ ಮಾಡಿ, ಆರಿಸಿ, ಜೇನುತುಪ್ಪ ಕೂಡಿಸಿ ಕೊಡಬೇಕು. ಕಷಾಯ ಕುಡಿದೊಡನೆಯೇ ಅಂತ ರ್ದಾಹ, ನೀರಡಿಕೆ ಮತ್ತು ಪಿತ್ಥಜ್ವರಗಳ ನಾಶವಾಗುವದು. ಅಥವಾ ೪ ತೊಲಿ ಹವೀಜಗಳನ್ನು ರಾತ್ರಿ ನೀರಲ್ಲಿ ನೆನೆಹಾಕಿಟ್ಟು ಬೆಳಗ್ಗೆ ಅರೆದು ಸೋಸಿ ಅದರಲ್ಲಿ ಕಲ್ಲಸಕ್ಕರೆ ಹಾಕಿ ಕೊಡಬೇಕು. ಇದರಿಂದ ಅಂತರ್ದಾಹವು ಕಡಿಮೆಯಾಗುತ್ತದೆ.

---

## ೧೧ ರಕ್ತಪಿತ್ಥಜ್ವರ.

ಲಕ್ಷಣ:—ಉಳಿದ ಲಕ್ಷಣಗಳೆಲ್ಲ ಪಿತ್ಥಜ್ವರದಂತೆಯೇ ಇರುವವಲ್ಲದೆ, ಬಾಯಿಂದ ರಕ್ತ ಇಲ್ಲವೆ ರಕ್ತಮಿಶ್ರ ಕೆಂಪು ಉಗುಳು ಬೀಳುತ್ತದೆ.

### ರಕ್ತಪಿತ್ಥಜ್ವರಕ್ಕೆ ಉಪಾಯ.

೧ ಬಾಳಹಿಂಡಾದ ಚೂರ್ಣವನ್ನು ಎಣ್ಣೆ, ತುಪ್ಪ, ಇಲ್ಲವೆ ಜೇನುತುಪ್ಪ ದೊಡನೆ ನೆಕ್ಕಿಸಿದರೆ ದಾಹಜ್ವರ, ಕೆಮ್ಮು, ರಕ್ತಪಿತ್ಥ, ವಿಸರ್ಪ, ಶ್ವಾಸ, ವಾಂತಿ ಗಳ ಸಹಿತವಾಗಿ ಜ್ವರ ನಿಲ್ಲುತ್ತವೆ.

೨ ನೆಲಇಂಗಳ, ಅತಿಬಜೆ, ನೆಲಬೇವು, ಕಟುಕರೋಣಿ, ಅಡಸಾಲದ ಎಲೆ, ಕಲ್ಲು ಸಬ್ಬಸಿಗಿ, ಕರೇದ್ರಾಕ್ಷಿ ಇವುಗಳ ಕಷಾಯದಲ್ಲಿ ಸಕ್ಕರೆ ಹಾಕಿ ಕೊಟ್ಟರೆ ನೀರಡಿಕೆ, ದಾಹ, ವೈಕಡತ, ರಕ್ತಪಿತ್ಥಜ್ವರ ಇವುಗಳ ನಾಶವಾಗುತ್ತವೆ

೩ ನೆಲಇಂಗಳ, ಕಲ್ಲು ಸಬ್ಬಸಿಗಿ, ಗೌಲ, ನೆಲಬೇವು, ಅಡಸಾಲ, ಕಟುಕ ರೋಣಿ ಇವುಗಳ ಕಷಾಯದಲ್ಲಿ ಸಕ್ಕರಿ ಕೂಡಿಸಿ ತಕೊಂಡರೆ ತೃಷೆ, ರಕ್ತಪಿತ್ಥ ಜ್ವರ, ರಕ್ತ ಬೀಳುವದು, ದಾಹ ಇವೆಲ್ಲವುಗಳ ನಾಶವಾಗುತ್ತವೆ.

೪ ಅಮೃತಬಳ್ಳಿ, ಅಳಲೀಕಾಯಿಪುಡಿ, ಕಲ್ಲುಸಬ್ಬಸಿಗಿ ಇವುಗಳ ಕಷಾಯ ದಿಂದ ರಕ್ತಪಿತ್ಥಜ್ವರವು ಕಡಿಮೆಯಾಗುತ್ತದೆ.

೫ ಬಾಳದಬೇರು, ಜೇಕಿನಗಡ್ಡೆ, ಕಲ್ಲುಸಬ್ಬಸಿಗಿ, ಶುಂಠಿ, ರಕ್ತಚಂದನ, ಹವೀಜ, ಬೇವಿನ ಕಡ್ಡಿ, ಪದ್ಮಕಾಷ್ಠ ಇವುಗಳ ಕಷಾಯವನ್ನು ರಕ್ತ ಪಿತ್ಥಜ್ವ ರಕ್ಕೆ ಕೊಡಬೇಕು; ಇದರಿಂದ ಆ ಜ್ವರದ ಶಮನವಾಗುವದಲ್ಲದೆ ದಾಹ, ಶೋಷ, ಓಕರಿಕೆಗಳ ನಾಶವಾಗಿ ಜಠರಾಗ್ನಿಯು ಪ್ರದೀಪ್ತವಾಗುತ್ತದೆ.

೬ ಬೇವು, ಅತಿಬಜೆ, ಲೋಧ್ರ, ಜಾಲಾರಿಯ ಗಿಡ, ಜೇಕಿನಗಡ್ಡಿ, ಕೋಡುಮುರುಕನ ಬೀಜ, ಅಮೃತಬಳ್ಳಿ, ಬಾಳದಬೇರು, ಹವೀಜ, ಎಳೇಪತ್ರೀ ಕಾಯಿ ಇವುಗಳ ಕಷಾಯವನ್ನು ಮಾಡಿ ಆರಿಸಿ, ಅದರಲ್ಲಿ ಜೇನುತುಪ್ಪ ಹಾಕಿ

ಕೊಡಬೇಕು. ಇದರಿಂದ ಅತಿಸಾರ, ಶ್ವಾಸ, ಒಣಕೆಮ್ಮು, ರಕ್ತಪಿತ್ತಜ್ವರ ಮತ್ತು ಸಾದಾಜ್ವರ ಇವೆಲ್ಲ ನಾಶವಾಗುತ್ತವೆ.

೭ ಅಮೃತಬಳ್ಳಿಯನ್ನು ಜಜ್ಜಿ ರಾತ್ರಿ ನೀರಿನಲ್ಲಿ ನೆನೆಹಾಕಿ, ಬೆಳಿಗ್ಗೆ ಅದನ್ನು ಕಿವುಚಿ, ಆ ಕಲ್ಕವನ್ನು ಸೋಸಿ ಅದರಲ್ಲಿ ಕಲ್ಲುಸಕ್ಕರೆ ಹಾಕಿ ಕುಡಿಸಿದರೆ ಅದರಿಂದ ರಕ್ತಪಿತ್ತಜ್ವರವು ನಾಶವಾಗುತ್ತದೆ.

೮ ದೀಪದ್ರಾಕ್ಷಿ, ರಕ್ತಚಂದನ, ತಾವರೆ ಗಡ್ಡೆ, ಜೇಕಿನ ಗಡ್ಡೆ, ಕಟುಕ ರೋಣಿ, ಅಮೃತಬಳ್ಳಿ, ನೆಲ್ಲೀಚೆಟ್ಟು, ಬಾಳದಬೇರು, ಕರೇಬಾಳದಬೇರು, (ಲೋಧ್ರ)ಜಾಲಾರಿಯಗಿಡ, ಕೋಡಮುರಕನಬೀಜ, ಕಲ್ಲಸಬ್ಬಸಿಗಿ,(ಫಾಲಸಾ) ಉದುಪೆ, ಕಕ್ಕೀಕಾಯಿ, ನೆಲಜಂಗಳ, ಅಡಸಾಲ, ಜ್ಯೇಷ್ಠಮಧು, ಕಹಿಪಡವಲ, ನೆಲಬೇವು, ಹವೀಜ ಇವುಗಳ ಕಷಾಯ ತಕೊಂಡರೆ ಪಿತ್ತದಿಂದುಂಟಾದ ಜ್ವರ, ತೃಷೆ, ದಾಹ, ಬಡಬಡಿಕೆ, ರಕ್ತಪಿತ್ತ, ಆಮ್ಲಪಿತ್ತ, ಮೂರ್ಛೆ, ಓಕರಿಕೆ, ಶೂಲಿ, ಬಾಯಾರಿಕೆ, ಅರುಚಿ, ಶ್ವಾಸ, ಒಣಕೆಮ್ಮು, ಬಾಯಿಗೆ ನೀರು ಬರೋಣ ಮುಂ ತಾದವುಗಳ ನಾಶವಾಗುತ್ತದೆ.

---

## ೧೨ ಕಫಜ್ವರ.

ಲಕ್ಷಣ:— ಒಣ ಓಕರಿಕೆ, ಮೈ ಜಡ, ಬಾಯಿಯು ಜಿಗಟು-ಜಿಗಟು ಇಲ್ಲವೆ ಉಪ್ಪುಪ್ಪು ಆಗೋಣ, ನೆಗಡಿ, ಕೆಮ್ಮು, ಆಲಸ್ಯತನ, ಮೈ ತಣ್ಣಗಾ ಗೋಣ, ಮಲ-ಮೂತ್ರ ಮತ್ತು ನೇತ್ರಗಳು ಬೆಳ್ಳಗಾಗೋಣ, ಶ್ವಾಸ, ದನಿ ಒಡೆಯೋಣ, ಶಬ್ದ ಜಾಡ್ಯ, ಮೂಗು ಕೊಲಸಾಗೋಣ, ತಲೆ ನೋಯ್ಯೋಣ, ಮತ್ತು ಜಡವಾಗೋಣ, ಅತಿ ನಿದ್ದೆ, ರಸವಾಹಿನಿ ನಾಡಿಯು ಸ್ತಬ್ಧವಾಗೋಣ, ಮೈಮೇಲೆ ರೋಮಾಂಚನಗಳೇಳೋಣ, ಜಿವರು ಬರೋಣ, ಹೊಟ್ಟೆಯು ದೊಬ್ಬೋಣ, ಹೆಚ್ಚು ಮೂತ್ರವಾಗೋಣ. ಕಣ್ಣಿಗೆ ಮಬ್ಬು ಬರೋಣ, ಕಣ್ಣೊಳ ಗಿನ ನೀರು ಹರಿಯೋಣ, ಅಸ್ವಸ್ಥತೆ ಇವೇ ಮೊದಲಾದ ಲಕ್ಷಣಗಳಿಂದ ಕಫ ಜ್ವರವು ಯುಕ್ತವಾಗಿರುತ್ತದೆ.

ಕಫಜ್ವರಕ್ಕೆ ಉಪಾಯಗಳು.

೧ ಸಣ್ಣಹಿಪ್ಪಲಿ, ಹಿಪ್ಪಲಿ ಬೇರು, ಕಾಡುಮೆಣಸಿನ ಬೇರು, ಚಿತ್ರ ಮೂಲ, ಶುಂಠಿ, ಮೆಣಸು, ಯಾಲಕ್ಕಿ, ಅಜಿವಾನ, ಕೋಡುಮುರುಕನ ಬೀಜ, ಅಗಳುಶುಂಠಿ, ಮದರಂಗಿ ಬೀಜ, ಜೀರಿಗೆ, ಗಂಟುಭಾರಂಗಿ, ಬೇವಿನ ಹಣ್ಣು, ಇಂಗು, ಕಟುಕರೋಣಿ, ಜಾಗೇಮರ, ವಾಯುವಾಡಂಗ, ಅತಿಬಜೆ, ಹೆಗ್ಗುರು ಟಿಗೆ ಇವು ಎಲ್ಲ ಅಥವಾ ಸಿಕ್ಕಷ್ಟು ಔಷಧಗಳ ಕಾಢೆ-ನಿಕಾಢೆಯನ್ನು ಮಾಡಿ ಕೊಟ್ಟರೆ ಕಫಜ್ವರದ ಶಮನವಾಗುತ್ತದೆ.

೨ ಸಣ್ಣಹಿಪ್ಪಲಿ, ಹಿಪ್ಪಲೀ ಬೇರು, ಕಾಡು ಮೆಣಸಿನ ಬೇರು, ಚಿತ್ರ ಮೂಲ, ಶುಂಠಿ ಈ ಪಂಚಕೋಲಗಳ ಕಾಫೆ-ನಿರ್ಕಾಫೆಯಿಂದ ಕಫಜ್ವರಗಳ ನಾಶ ವಾಗುತ್ತದೆ.

೩ ಕಟುಕರೋಣಿ, ಹಿಪ್ಪಲೀಬೇರು, ಅಳಲೇಕಾಯಿ, ಕಕ್ಕೇಕಾಯಿ, ಜೇಕಿನಗಡ್ಡೆ ಇವುಗಳ ಕಷಾಯವು ಸರ್ವಜ್ವರ ನಾಶಕವಾಗಿರುತ್ತದೆ.

೪ ಕಹಿ ಪಡವಲ, ಅಳಲೇಕಾಯಿ, ತಾರೇಕಾಯಿ, ನೆಲ್ಲೀಚೆಟ್ಟು, ಕಟುಕ ರೋಣಿ, ಕಚೋರಾ, ಆಡಸಾಲ, ಅಮೃತಬಳ್ಳಿ ಇವುಗಳ ಕಷಾಯದಲ್ಲಿ ಜೇನು ತುಪ್ಪ ಹಾಕಿ ಕೊಟ್ಟರೆ ಕಫಜ್ವರದ ನಾಶವಾಗುತ್ತದೆ.

೫ ನೆಲಗುಳ್ಳಬೇರು, ಅಮೃತಬಳ್ಳಿ, ಸಣ್ಣಹಿಪ್ಪಲಿ, ಶುಂಠಿ ಇವುಗಳ ಕಷಾಯ ಮಾಡಿ ಕುಡಿದರೆ, ಜ್ವರ, ಉಬ್ಬಸ, ಕಫ, ಕೆಮ್ಮು, ಶೂಲಿ, ಅಗ್ನಿ ಮಾಂದ್ಯ, ಹೊಟ್ಟೆಯೊಳಗೆ ವಾತ ಹಿಡಿದಿದ್ದರೆ ಅವೆಲ್ಲ ನಾಶವಾಗುತ್ತವೆ.

೬ ನೆಲಬೇವು, ಬೇವು, ಅತಿಬಜೆ, ಕೊಡುಮುರುಕನ ಬೀಜ, ಬಾಳದ ಬೇರು ಇವುಗಳ ಕಷಾಯದಿಂದ ಬಿಕ್ಕು, ಉಬ್ಬಸ, ಕೆಮ್ಮುಗಳಿಂದ ಯುಕ್ತ ವಾದ ಕಫಜ್ವರದ ನಾಶವಾಗುವದು.

೭ ನೆಲಬೇವು, ಬೇವು, ಹಿಪ್ಪಲಿ, ಕಚೋರ, ಶುಂಠಿ, ಹಲ್ಲಮುಳುಕನ ಗಿಡ(ಶತಾವರಿ) ಅಮೃತಬಳ್ಳಿ, ನೆಲಗುಳ್ಳಬೇರು ಇವುಗಳ ಕಷಾಯದಿಂದ ಕಫ ಜ್ವರ ನಾಶವಾಗುತ್ತದೆ.

೮ ಕಟುಕರೋಣಿ, ಬೇವು, ಅತಿಬಜೆ, ಶುಂಠಿ, ಮೆಣಸು, ಸಣ್ಣಹಿಪ್ಪಲಿ, ಕೊಡುಮುರುಕನ ಬೀಜ, ಬಾಳದಬೇರು ಇವುಗಳ ಕಷಾಯದಿಂದ ಬಿಕ್ಕು, ಉಬ್ಬಸ, ಕೆಮ್ಮುಗಳಿಂದ ಕೂಡಿದ ಕಫಜ್ವರದ ನಾಶವಾಗುತ್ತದೆ.

೯ ನೆಲಗುಳ್ಳಬೇರು, ಆಡಸಾಲ, ದೇವದಾರು, ಶುಂಠಿ, ಅಮೃತಬಳ್ಳಿ ಇವುಗಳ ಕಷಾಯದಲ್ಲಿ ಹಿಪ್ಪಲಿಪುಡಿ ಹಾಕಿ ಕೊಟ್ಟರೆ ಕಫಜ್ವರ, ಕೆಮ್ಮುಗಳು ಕಡಿಮೆಯಾಗುವವು.

೧೦ ಕೋಷ್ಟಕೊಳಂಜನ, ಕೊಡಮುರುಕನ ಬೀಜ, ಮೆಣಸು, ಕಹಿ ಪಡವಲು, ಹೆಗ್ಗುರುಟಿಗೆ ಇವುಗಳ ಕಷಾಯದಲ್ಲಿ ಜೇನುತುಪ್ಪ ಹಾಕಿ ಕೊಟ್ಟರೆ ಕಫಜ್ವರ ನಿಲ್ಲುವವು.

೧೧ ಕಫಜ್ವರಕ್ಕೆ ಪಾಚನವು:—ಅಳಲೀಕಾಯಿ, ಮಾದಾಳದ ಬೇರು, ಶುಂಠಿ, ಹಿಪ್ಪಲೀ ಬೇರು ಇವುಗಳ ಕಷಾಯದಲ್ಲಿ ಜವಖಾರವನ್ನು ಹಾಕಿ ಜ್ವರ ಬಂದ ೧೨ ದಿನಗಳ ನಂತರ ಕೊಡಬೇಕು.

೧೨ ಶುಂಠಿ, ಅಡಸಾಲವೆಲೆ, ಪೇಕಿನಗಡ್ಡಿ, ಕಲ್ಲುಸಬ್ಬಸಿಗಿ ಇವುಗಳ ಕಷಾಯುವನ್ನು ೭ ದಿವಸ ಕೊಡತಕ್ಕದ್ದು.

೧೩ ದುಷ್ಟಪುಟೆಟ್ಟು, ಕಿರಿಶಿವಣೆ, ಹಿಪ್ಪಲಿ, ತಾವರೆಗೆಡ್ಡೆ ಇವುಗಳ ಚೂರ್ಣವನ್ನು ಜೇನುತುಪ್ಪದಲ್ಲಿ ಕೊಡತಕ್ಕದ್ದು.

೧೪ ಲಕ್ಕೀನೊಪ್ಪಿನ ಕಸಾಯುದಲ್ಲಿ ಮೆಣಸಿನ ಚೂರ್ಣ ಹಾಕಿ ಕೊಟ್ಟರೆ, ಕರ್ಣಮಾಂದ್ಯ, ತೊಪೆಕೋವು, ಕಫಜ್ವರಗಳ ನಾಶವಾಗುತ್ತದೆ.

೧೫ ಮೃತಸಂಜೀವಿನೀ ರಸಃ—ಶುದ್ಧಚಾಪಾಳಕಾಯಿ ೩ ಪಾಲು, ಬಳಿಗಾರ ೨ ಭಾಗ, ಇಂಗಳೀಕ ೪ ಭಾಗ, ಅಭ್ರಕಭಸ್ಮ ೧ ಭಾಗ, ಶುಂಠಿ, ಮೆಣಸು, ಹಿಪ್ಪಲಿ, ಚಿತ್ರಮೂಲ, ಸೈಂಧಲವಣ ಇವೆಲ್ಲ ೧-೧ ಭಾಗ ತಕ್ಕೊಂಡು ಇವೆಲ್ಲವುಗಳನ್ನರೆದು, ಒಳಿಕ ಅಲ್ಲದ ರಸದಲ್ಲಿ ಅರೆದು, ಅವರೆಕಾಳಷ್ಟು ಗುಳಿಗೆ ಮಾಡಬೇಕು. ಇಂಥದೊಂದು ಗುಳಿಗೆಯನ್ನು ಅಲ್ಲದ ರಸದೊಡನೆ ಕೊಟ್ಟರೆ ೨ ಪ್ರಹರಗಳಲ್ಲಿ ಕಫಜ್ವರಗಳು ಹೇಳಹೆಸರಿಲ್ಲದಾಗುತ್ತವೆ ಪಥ್ಯ:—ತುಪ್ಪ-ಅನ್ನ. ಈ ಔಷಧದಿಂದ ಮಹಾಘೋರ ಸನ್ನಿಪಾತ, ತ್ರಿದೋಷ, ವಿಷಮಜ್ವರ, ಆಮವಾತ, ವಾಯುಶೂಲಿ, ಗುಲ್ಮ, ಪ್ಲೀಹ, ಜಲೋದರ, ಶೀತಪೂರ್ವಕಜ್ವರ, ಸಂತತಸಂಜ್ಞಕ-ವಿಷಮಜ್ವರ ಮುಂತಾದ ರೋಗಗಳ ಮೇಲೆ ಚೆನ್ನಾಗಿ ಗುಣ ಬರುತ್ತದೆ.

---

## ೧೩ ವಾತಪಿತ್ತ ಜ್ವರ.

ಲಕ್ಷಣ:—ನೀರಡಿಕೆ, ಮೂರ್ಛೆ, ಭ್ರಮೆ, ದಾಹ, ನಿದ್ರಾನಾಶ, ತಲೆಶೂಲಿ, ಬಾಯಿ-ಗಂಟಲುಗಳಾರಿಕೆ, ಒಕರಿಕೆ, ರೋಮಾಂಚ, ಅರುಚಿ, ಅಕಸ್ಮಾತ್ತಾಗಿ ಕಗ್ಗತ್ತಲೆಯಲ್ಲಿ ಬಿದ್ದಂತಾಗೋಣ, ಸಂಧಿನೋವು, ಆಕಳಿಕೆ, ಬಡಬಡಿಕೆ, ಮೂತ್ರದ ಬಣ್ಣ ಕಪ್ಪು ಇಲ್ಲವೆ ಹೊಗೆಯಂತಾಗೋಣ, ಕಣ್ಣು ಉರಿ, ತಲೆ ಜಡವಾಗಿ ನೋಯುವದು, ಬಾಯಿ ಕಹಿ ಹುಳಿಹುಳಿಯಾಗುವದು ಇವೆಲ್ಲ ಲಕ್ಷಣಗಳು ಹೆಚ್ಚು-ಕಡಿಮೆ ಮಾನದಿಂದ ಆಗುತ್ತವೆ

ಪಾಚನಕ್ಕೆ:—ವಾತ, ಪಿತ್ತ, ಕಫ ಜ್ವರಗಳಿಗೆ ಹೇಳಿರುವ ಪಾಚನಗಳಲ್ಲಿ ಆವುಗಳಲ್ಲಿಯು ಎರಡು ದೋಷಗಳ ಪಾಚನವನ್ನು ಒಟ್ಟುಗೂಡಿಸಿ ಅಂದರೆ ವಾತ, ಪಿತ್ತಜ್ವರಗಳ ಪಾಚನವನ್ನು ಈ ವಾತಪಿತ್ತಜ್ವರಕ್ಕೆ ಕೊಡತಕ್ಕದ್ದು.

ವಾತಪಿತ್ತಜ್ವರಕ್ಕೆ ಉಪಾಯಗಳು.

೧ ನೇಬೇವು, ಕಟುಕರೋಣಿ, ನೆಲ್ಲೀಚೆಟ್ಟು, ಕಚೋರಾ, ಬೀಜದ್ರಾಕ್ಷಿ,

ವೇಗಾಪು, ಶುಂಠಿ, ಅಮೃತಬಳ್ಳಿ ಇವುಗಳ ಕಷಾಯದಲ್ಲಿ ಬೆಲ್ಲ ಹಾಕಿ ಆರಿದ ವೇಳೆ ಕೊಟ್ಟರೆ, ವಾತಪಿತ್ಥಜ್ವರದ ಶಮನವಾಗುವದು.

೨ ಅಮೃತಬಳ್ಳಿ, ಕಲ್ಲುಸಬ್ಬಸಿಗಿ, ಜೇಕಿನಗಡ್ಡಿ, ನೆಲಬೇವು, ಶುಂಠಿ ಇವುಗಳ ಕಷಾಯುವನ್ನು ವಾತಪಿತ್ಥಜ್ವರಕ್ಕೆ ಕೊಡಬೇಕು.

೩ ದೀಪದ್ರಾಕ್ಷಿ, ನೆಲಬೇವು, ಅಮೃತಬಳ್ಳಿ, ಅಡಸಾಲ, ಕಚೋರಾ ಇವುಗಳ ಕಷಾಯದಿಂದ ವಾತಪಿತ್ಥಜ್ವರವು ಕಡಿಮೆಯಾಗುತ್ತದೆ.

೪ ಜೇಕಿನಗಡ್ಡಿ, ಹವೀಜ, ನೆಲಬೇವು, ಅಮೃತಬಳ್ಳಿ, ಬೇವು, ಕಟುಕರೋಣಿ, ಕಹಿಪಡುವಲ ಇವುಗಳ ಕಾಢೆ-ನಿಕಾಢೆ ಕೊಡಬೇಕು.

೫ ನೆಲಗುಳ್ಳಬೇರು, ಗಂಟುಭಾರಂಗಿ, ಅಡಸಾಲ, ನಂಜಾರೆ ಇಲ್ಲವೆ ರಾಸನೆ, ಕಲ್ಲುಸಬ್ಬಸಿಗಿ, ಬೋರಲ ಅಂಟು, ಕಕ್ಕೀಕಾಯಿ ತಿರುಳು, ತ್ರಿಫಳ ಇವುಗಳ ಕಷಾಯ ಕೊಡುವದು.

೬ ನೆಲಗುಳ್ಳಬೇರು, ಅಮೃತಬಳ್ಳಿ, ರಾಸನೆ, ನಿರಾಮೆ ಒಳ್ಳಿ, ಅಳಲೇಕಾಯಿ, ಚನ್ನಂಗಿ ಬೇಳೆ ಇವುಗಳ ಕಷಾಯದಿಂದ ವಾತಪಿತ್ಥಜ್ವರದ ನಾಶವಾಗುವದು.

೭ ಸೆಜ್ಜೆ ಅರಳ ಹಿಟ್ಟನ್ನು ೩ ತೊಲೆ ತಕ್ಕೊಂಡು, ಅದರಲ್ಲಿ ಅರ್ಧ ತೊಲಿ ಹಳೇಬೆಲ್ಲ ಹಾಕಿ, ೨ ಸೇರು ನೀರಲ್ಲಿ ಕುದಿಸಿ, ಅರ್ಧಸೇರು ಕಷಾಯ ಉಳಿಸಿ, ಅದನ್ನು ಮಲಗುವಾಗ ಸಾಕಷ್ಟು ಕುಡಿದರೆ, ಬೆವರೊಡೆದು ವಾತಪಿತ್ಥಜ್ವರವು ಕಡಿಮೆಯಾಗುವದು.

೮ ದೀಪದ್ರಾಕ್ಷಿ, ಕಲ್ಲುಸಬ್ಬಸಿಗಿ, ಕಕ್ಕೀಕಾಯಿ ತಿರುಳು, ಕಟುಕರೋಣಿ, ಜೇಕಿನಗಡ್ಡಿ, ಅಳಲೀಕಾಯಿ ಇವುಗಳ ಕಾಢೆ-ನಿಕಾಢೆ ಕೊಡಬೇಕು. ವಾತಪಿತ್ಥಜ್ವರ, ಮೂರ್ಛೆ, ಬಾವು, ದಾಹ, ಒಡಬಡಿಕೆ, ಭ್ರಮೆ ಇವುಗಳ ನಾಶವಾಗುವದಕ್ಕೆ ಇದೊಳ್ಳೇ ಔಷಧವಾಗಿದೆ.

೯ ನೀಲೀಕಮಲ, ಕಲ್ಲಕಡಲೆ, ದ್ರಾಕ್ಷಿ, ಇಪ್ಪಿತೊಗಟೆ, ಜ್ಯೇಷ್ಠಮಧು, ಬಾಳದಬೇರು, ಪದ್ಮಕಾಷ್ಠ, ಶಿವನೀಬೇರು, ಫಾಂಟಿ ಈ ಔಷಧಿಗಳನ್ನು ಕುಟ್ಟಿ ರಾತ್ರಿ ನೀರಲ್ಲಿ ನೆನೆ ಹಾಕಿ ಬೆಳಗ್ಗೆ ಸೋಸಿ ಕುಡಿದರೆ ವಾತಪಿತ್ಥಜ್ವರ, ಒಡಬಡಿಕೆ, ಭ್ರಮು, ಓಕರಿಕೆ, ಮೂರ್ಛೆ, ನೀರಡಿಕೆಗಳ ನಾಶವಾಗುತ್ತದೆ.

೧೦ ಕಕ್ಕೀಕಾಯಿ ತಿರುಳು, ಜೇಕಿನಗಡ್ಡೆ, ಜ್ಯೇಷ್ಠಮಧು, ಇಪ್ಪೀಹೂವು, ದಾಳಹಿರಡಾ, ಅರಿಷಿಣ, ಮರದರಿಷಿಣ, ಕಹಿಪಡುವಲ, ಬೇವಿನ ತೊಗಟೆ, ಅಮೃತಬಳ್ಳಿ, ಕಟುಕರೋಣಿ, ಇವುಗಳ ಕಷಾಯ ಕೊಟ್ಟರೆ ವಾತಪಿತ್ಥಜ್ವರದ ನಾಶವಾಗುತ್ತದೆ.

೧೧ ಇಪ್ಪೀಬೇರು, ಕರಿಬಂಟನಬಳ್ಳಿ, ದೀಪದ್ರಾಕ್ಷಿ, ಜ್ಯೇಷ್ಠಮಧು,

ತಾವರೆಗಡ್ಡೆ, ರಕ್ತಚಂದನ, ಶಿವನೀಬೇರು, ಲೋಧ್ರ, ತ್ರಿಫಳ, ಕೋಷ್ಠ, ಮರಾಳಮೊಗ್ಗೆ, ಫಾಲಸೆ, ಕಮಲದ ಕಾಶು ಇವುಗಳ ಕಷಾಯದಲ್ಲಿ ಸಕ್ಕರೆ, ಜೇನತುಪ್ಪ, ಅರಳು ಹಾಕಿ ಕೊಡಬೇಕು. ಇದರಿಂದ ವಾತಪಿತ್ತಜ್ವರ, ದಾಹ, ತೃಷೆ, ಮೂರ್ಛೆ, ಅರುಚಿ, ಭ್ರಮ ಮತ್ತು ರಕ್ತಪಿತ್ತಗಳ ನಾಶವಾಗುತ್ತದೆ.

೧೨ ನವಜ್ವರರೇಭಸಿಂಹ:—ಶುದ್ಧ ಪಾರದ, ಲೋಹಭಸ್ಮ, ಗಂಧಕ, ತಾಮ್ರಭಸ್ಮ, ಸೀಸದ ಭಸ್ಮ, ತ್ರಿಕಟು, (ಶುಂಠಿ, ಮೆಣಸು, ಹಿಪ್ಪಲಿ,) ಇವುಗಳ ಸಮ ಭಾಗ ಚೂರ್ಣ ಮತ್ತು ಅದರರ್ಧದಷ್ಟು ನೇಪಾಳದ ಬೇರು ತಕ್ಕೊಂಡು ಅಲ್ಲದ ರಸದಲ್ಲಿ ೩ ದಿನಗಳ ವರೆಗೆ ಅರೆದು ಅವರೇಕಾಳಷ್ಟು ಗುಳಿಗೆ ಕಟ್ಟಬೇಕು. ಅಲ್ಲದ ರಸ, ಕಲ್ಲುಸಕ್ಕರೆ ಇವುಗಳೊಡನೆ ಒಂದೊಂದು ಗುಳಿಗೆ ತಕ್ಕೊಂಡರೆ ವಾತಪಿತ್ತಜ್ವರ, ವಾತವಿಕಾರ, ಸಂಗ್ರಹಿಣಿಗಳು ವಿನಾಶವಾಗುವವು.

೧೩ ಪಿತ್ತಜ್ವರದಲ್ಲಿ ಮೈದೊಗಲು ಉರಿಯುತ್ತಿದ್ದರೆ ಬೇವಿನ ಎಲೆಗಳನ್ನು ನೀರಿನಲ್ಲಿ ಅರೆದು ಮೈಗೆ ಚನ್ನಾಗಿ ಸವರಬೇಕು. ಇದರಿಂದ ಕ್ಷಿಪ್ರದಲ್ಲಿಯೇ ಆ ದಾಹವು ಕಡಿಮೆಯಾಗುವದು.

---

## ೧೪ ವಾತ ಕಫಜ್ವರ.

ಲಕ್ಷಣ:—ಸಂದಿಗಳಲ್ಲಿ ಹೊಡತ, ಅತಿನಿದ್ರೆ, ದೇಹಬಿಗಿ, ತಲೆಭಾರ, ನೆಗಡಿ, ಉಬ್ಬಸ, ಕೆಮ್ಮು, ಅಲ್ಪಸ್ವಲ್ಪ ಬೆವರು, ಮೈಯುರಿ, ಸಾಧಾರಣ ಜ್ವರ, ಭ್ರಮ, ಮಬ್ಬು, ಮೈ ನಡುಗು, ಕಲಕುಮೂತ್ರ, ಆಕಳಿಕೆ, ಕಣ್ಣೊಳಗಿಂದ ನೀರುದುರುವದು, ಮೂಗಿನೊಳಗಿಂದ ಒಂದೇಸವನೆ ನೀರು ಬೀಳುವದು, ಬಾಯಿಯು ಅಂಟಂಟು ಹಾಗು ಉಪ್ಪುಪ್ಪು ಆಗುವದು ಇವೆಲ್ಲ ವಾತ ಕಫಜ್ವರದ ಲಕ್ಷಣಗಳಾಗಿವೆ.

ವಾತ ಕಫ ಜ್ವರಕ್ಕೆ ಉಪಾಯಗಳು:—

೧ ಬೇವು, ಶುಂಠಿ, ದೇವದಾರು, ಅಮೃತಬಳ್ಳಿ, ಕಿರಿವನೆ, ಕಟಕರೋಹಿಣಿ, ಬಜೆ ಇವುಗಳ ಕಷಾಯದಿಂದ ಸಂಧಿನೋವು, ತಲೆನೋವು, ಒಣ ಕೆಮ್ಮು, ಅರುಚಿ, ವಾತಕಫಜ್ವರಗಳ ನಾಶವಾಗುತ್ತದೆ.

೨ ನೆಲಗುಳ್ಳಬೇರು, ಶುಂಠಿ, ತಾವರೆಗಡ್ಡೆ, ಅಮೃತಬಳ್ಳಿ ಇವುಗಳ ಕಷಾಯವು ವಾತಕಫಜ್ವರ, ಉಬ್ಬಸ, ಒಣಕೆಮ್ಮು, ಅರುಚಿ, ಪಕ್ಕೆಶೂಲಿ, ತ್ರಿದೋಷಜನಿತ ಜ್ವರ ಮುಂತಾದವುಗಳನ್ನು ನಾಶಗೊಳಿಸುತ್ತದೆ.

೩ ಉತ್ತರಾಣಿಯ ಬೂದಿಯನ್ನು ಜೇನುತುಪ್ಪದೊಡನೆ ನೆಕ್ಕಿದರೆ ಗಂಟಲು ಮತ್ತು ಎದೆಯೊಳಗಿನ ಕಫವು ನೀರಾಗುತ್ತದೆ.

೪ ನೆಲಗುಳ್ಳಬೇರು, ಶುಂಠಿ, ಔಡಲಬೇರು, ಅಮೃತಬಳ್ಳಿ ಇವುಗಳ ಕಷಾಯದಿಂದ ವಾತಕಫಜ್ವರ, ತ್ರಿದೋಷಜ್ವರ, ಉಬ್ಬಸ, ಬಣಕೆಮ್ಮು, ಬೆನ್ನು ಶೂಲಿ ಮುಂತಾದವುಗಳು ಗುಣವಾಗುತ್ತವೆ

೫ ಕಕ್ಕೇ(ಕಾಯಿ) ತಿಳಲು, ಹಿಪ್ಪಲೀಬೇರು, ಜೇಕಿನಗಡ್ಡೆ, ಕಟುಕರೋಣಿ, ಅಳಲೇಕಾಯಿ ಇವುಗಳ ಕಾಢೆ ಮಾಡಿ ಕೊಟ್ಟರೆ, ಕಫವಾತಜ್ವರ, ಆಮಶೂಲಿಗಳ ನಾಶವಾಗಿ, ದೀಪನ ಪಚನವಾಗುತ್ತದೆ

೬ ಜೇಕಿನಗಡ್ಡೆ, ಅಮೃತಬಳ್ಳಿ, ಶುಂಠಿ, ಅಡಸಾಲ, ಕಲ್ಲುಸಬ್ಬಸಿಗಿ, ಅಳಲೇಕಾಯಿ, ನೆಲಗುಳ್ಳಬೇರು, ಗಲಿಂಗಳ ಇವುಗಳ ಕಷಾಯವು ವಾತಕಫಜ್ವರಕ್ಕೆ ಪ್ರಶಸ್ತವಾಗಿರುತ್ತದೆ.

೭ ಜೇಕಿನಗಡ್ಡೆ, ಶುಂಠಿ, ಕಲ್ಲುಸಬ್ಬಸಿಗಿ, ಅಮೃತಬಳ್ಳಿ ಇವುಗಳ ಕಷಾಯವು ಕಫವಾತ, ಅರುಚಿ, ಓಕರಿಕೆ, ದಾಹ, ಶೋಷ ಇತ್ಯಾದಿಗಳ ನಾಶಕ್ಕೆ ಸಹಾಯಕವಾಗುವದು.

೮ ನೆಲಬೇವು, ಅಜ್ವಾನ, ಕಟುಕರೋಣಿ, ಬಜೆ, ಕಿರಿಶಿವಣಿ ಇವುಗಳ ಚೂರ್ಣವನ್ನು ಮೈಗೆಹಚ್ಚಿದರೆ ಸಂತತವಾಗಿ ಬರುತ್ತಿರುವ ಬೆವರು ಕಡಿಮೆಯಾಗುತ್ತದೆ.

೯ ನೆಲಬೇವು, ಶುಂಠಿ, ಅಮೃತಬಳ್ಳಿ, ನೆಲಗುಳ್ಳ ಬೇರು, ಹಿಪ್ಪಲಿ, ಹಿಪ್ಪಲಿ ಬೇರು, ಬಳ್ಳೊಳ್ಳಿ ಕರೇಲಕ್ಕಿ ಇವುಗಳ ಕಷಾಯದಿಂದ ವಾತಕಫಜ್ವರದ ನಾಶವಾಗುತ್ತದೆ.

೧೦ ಹಿಪ್ಪಲಿ, ಹಿಪ್ಪಲಿ ಬೇರು, ಅಡವೀ ಮೆಣಸಿನ ಬೇರು, ಚಿತ್ರಮೂಲ, ಶುಂಠಿ, ಬಜೆ, ಅತಿಬಜೆ, ಜೀರಗಿ, ಪಾದರೀಬೇರು, ಕೋಡಮುರುಕನ ತೊಗಟಿ, ಮದರಂಗೀ ಬೀಜ, ನೆಲಬೇವು, ಹೆಗ್ಗುರಟಿಗೆ, ಸಾಸ್ವಿ, ಮೆಣಸು, ಕಿರಿಶಿವಣಿ, ಔಡಲಬೇರು, ಗಂಟುಭಾರಂಗಿ, ವಾಯುವಡಂಗ, ದುಷ್ಟಪುಚೆಟ್ಟು, ಎಕ್ಕೀಬೇರು, ಗಕ್ಕ, ರಾಸನೆ, ನೆಲಇಂಗಳ, ಅಜ್ವಾನ, ಅಜಮೋದ, ಶಿವಣೀಬೇರು, ಇಂಗು ಈ ಔಷಧಗಳನ್ನು ಸಮಭಾಗ ತಕ್ಕೊಂಡು, ಕಷಾಯ ಮಾಡಿ ಕುಡಿದರೆ ವಾತಕಫಜ್ವರ, ವಾಯು, ಶೀತ, ಬೆವರು, ಮೈನಡುಗು, ಮಬ್ಬು, ಮೈಮೇಲ ರೋಮಾಂಚಗಳೇಳುವದು, ಅರುಚಿ, ಮಹಾವಾತ, ಅಪತಂತ್ರಕವಾತ, ಎಲ್ಲ ಅವಯವಗಳ ಸೂನ್ಯತೆ, ಮತ್ತು ಸಂಪೂರ್ಣ ಜ್ವರ ಇವಗಳ ನಾಶಮಾಡುತ್ತದೆ. ಈ ಕಷಾಯವು ಸರ್ವಪ್ರಕಾರದ ಜ್ವರಗಳಿಗೂ ಪ್ರಶಸ್ತವಾಗಿದೆ.

೧೧ ನೆಲಗುಳ್ಳ ಬೇರು, ಅಜ್ವಾನ, ಅಮೃತಬಳ್ಳಿ, ಇವುಗಳ ಕಷಾಯವನ್ನು ಹಿಪ್ಪಲಿ ಚೂರ್ಣದೊಡನೆ ಕೊಡಬೇಕು; ಅಂದರೆ ವಾತಕಫಜ್ವರ, ಉಬ್ಬಸ, ಶೂಲಿ, ನೆಗಡಿ, ಕೆಮ್ಮುಗಳ ನಾಶವಾಗುತ್ತದೆ.

೧೨ ಕಹಿಪಡುವಲ, ಶುಂಠಿ, ಜವೆಗೋದಿ, ಹಿಪ್ಪಲಿ ಇವುಗಳ ಕಷಾಯವು ನೀರಡಿಕೆ, ವಾತಕಫ ಜ್ವರ, ಶೂಲಿ, ಉಬ್ಬಸ, ಒಣಕೆಮ್ಮು, ಅರುಚಿ, ಬದ್ಧಕೋಷ್ಠ ಇವುಗಳಿಗೆ ದೀಪನ ಪಾಚನವಾಗಿದ್ದು ಹಿತಾವಹವಾಗಿರುತ್ತದೆ.

೧೩ ಜ್ವರೇಭಸಿಂಹರಸ:—ಶುದ್ಧಪಾರಜ, ಮೆಣಸು, ಸೀಸದ ಭಸ್ಮ, ಅಭ್ರಕ ಭಸ್ಮ, ತಾಮ್ರ ಭಸ್ಮ, ಜಾಪಾಳಕಾಯಿ ಇವನ್ನೆಲ್ಲ ಸಮಭಾಗ ತಕ್ಕೊಂಡು ಮೂರು ಭಾಗ ಗಂಧಕ ಕೂಡಿಸಿ, ಆ ಮಿಶ್ರಣವನ್ನು ಭಂಗಿ, ಸೂರ್ಯಬಳ್ಳಿ, ಕಾಡ ಕವಡೀಕಾಯಿ ಇವುಗಳ ರಸದಲ್ಲಿ ೩ ದಿನ ಅರೆದು, ಅಲ್ಲದ ರಸದ ೩ ಭಾವನೆ ಕೊಟ್ಟು ೨ ಗುಲಗಂಜಿಪ್ರಮಾಣದ ಗುಳಿಗೆಗಳನ್ನು ಕಟ್ಟಬೇಕು. ಅಂಥದೊಂದು ಗುಳಿಗೆಯನ್ನು ವೀಳ್ಯದೆಲೆಯ ರಸದೊಡನೆ ತಿಂದರೆ ತೀವ್ರ ಕಫವಾತಜ್ವರವು ನಾಶವಾಗುತ್ತದೆ.

---

## ೧೫ ಕಫಪಿತ್ತಜ್ವರ.

ಲಕ್ಷಣ:—ಚಳಿ ಒರೆಯೋಣ, ಬಾಯಿ ಕಹಿಯಾಗಿ ಜಿಗಟಾಗುವದು, ಮಬ್ಬು, ಮೋಹ, ಕೆಮ್ಮು, ಅರುಚಿ, ನೀರಡಿಕೆ, ಕಫ ಮತ್ತು ಪಿತ್ತ ಬೀಳುವದು, ದಾಹ, ಮೂತ್ರದ ಬಣ್ಣವು ಕೆಲಹೊತ್ತು ಕೆಂಪು ಕೆಲಹೊತ್ತು ಬಿಳುಪು ಆಗುವದು, ನಿದ್ರಾನಾಶ, ಕಂಠಾವರೋಧ, ಅಂಗಾಲು ಉರಿವು, ಅಗ್ನಿಮಾಂದ್ಯ, ಬಾಯಿಗೆ ದುರ್ವಾಸನೆ ಬರುವದು ಮುಂತಾದ ಲಕ್ಷಣಗಳಾಗುತ್ತವೆ.

### ಕಫಪಿತ್ತ ಜ್ವರಕ್ಕೆ ಉಪಾಯಗಳು.

೧ ಕಫಪಿತ್ತಜ್ವರಕ್ಕೆ ಪಾಚನ:— ಜೇಕಿನಗಡ್ಡೆ, ಕಲ್ಲುಸಬ್ಬಸಿಗಿ ಇವುಗಳ ಕಷಾಯವನ್ನು ಜ್ವರಬಂದ ೪ನೇ ಇಲ್ಲವೆ ೫ನೇ ದಿವಸ ಪಾಚನಕ್ಕಾಗಿ ಕೊಡಬೇಕು.

೨ ಹಾಗಲಕಾಯಿ ರಸದಲ್ಲಿ ಮೆಣಸಿನಕಾಳಿನ ಪುಡಿ ಹಾಕಿ, ಕೊಟ್ಟರೆ ಕಫ ಬಿದ್ದು ಜ್ವರದ ಕಾವು ಕಡಿಮೆಯಾಗುತ್ತದೆ.

೩ ಕಹಿಪಡಲ, ರಕ್ತಚಂದನ, ಹೆಗ್ಗರುಟಿಗೆ, ಕಟುಕರೋಹಿಣಿ, ಅಗಳ ಶುಂಠಿ, ಅಮೃತಬಳ್ಳಿ ಇವುಗಳ ಕಷಾಯವು ಪಿತ್ತಕಫಜ್ವರ, ಓಕರಿಕೆ, ದಾಹ, ಮೈ ಕಡಿತ ಇವುಗಳ ನಾಶಮಾಡುತ್ತದೆ.

೪ ನೆಲಗುಳ್ಳದಬೇರು, ಅಮೃತಬಳ್ಳಿ, ಗಂಟುಭಾರಂಗಿ, ಶುಂಠಿ, ಕೋಡ ಮುರುಕನಬೀಜ, ನೆಲಇಂಗಳ, ನೆಲಬೇವು, ಚಂದನ, ಜೇಕಿನಗಡ್ಡೆ, ಕಹಿಪಡುವಲ, ಕಟುಕರೋಹಿಣಿ ಇವುಗಳ ಕಷಾಯದಿಂದ ಪಿತ್ತಶ್ಲೇಷ್ಮಜ್ವರ, ದಾಹ, ತೃಷೆ, ಅರುಚಿ, ಬಿಕ್ಕು, ಕೆಮ್ಮು, ಎದೆಶೂಲಿ, ಪಕ್ಕೆಶೂಲಿಗಳ ನಾಶವಾಗುತ್ತದೆ.

೫ ಅಮೃತಬಳ್ಳಿ, ಬೇವು, ಕಟುಕರೋಹಿಣಿ, ಜೇಕಿನಗಡ್ಡೆ, ಕೊಡುಮುರ ಕನಬೀಜ, ಶುಂಠಿ, ಕಹಿಪಡುವಲ, ಚಂದನ ಇವುಗಳ ಕಷಾಯವನ್ನು ಹಿಪ್ಪಲಿ ಪುಡಿಯಲ್ಲಿ ಹಾಕಿಕೊಟ್ಟರೆ, ಪಿತ್ಥಕಫಜ್ವರ, ಓಕರಿಕೆ, ಅರುಚಿ, ಕಫ, ದಾಹ, ತೃಷೆ ಇವುಗಳು ಕಡಿಮೆಯಾಗುತ್ತವೆ.

೬ ನೆಲಗುಳ್ಳಬೇರು, ಅಮೃತಬಳ್ಳಿ, ಶುಂಠಿ, ತಾವರೆಗಡ್ಡೆ, ನೆಲಬೇವು ಇವುಗಳ ಕಷಾಯದಿಂದ ಎಲ್ಲ ಪ್ರಕಾರದ ಜ್ವರಗಳೂ ನಾಶವಾಗುತ್ತವೆ.

೭ ಅಡಸಾಲದ ಎಲೆ, ಹೂ ಕೂಡಿಸಿ ರಸ ತೆಗೆದು ಅದರಲ್ಲಿ ಜೇನತುಪ್ಪ, ಸಕ್ಕರಿ ಹಾಕಿ ಕೊಡಬೇಕು. ಅದರಿಂದ ಕಫ, ಪಿತ್ಥ, ಜ್ವರ, ರಕ್ತಪಿತ್ಥ, ಕಾಮಣಿ ಮುಂತಾದವುಗಳ ನಾಶವಾಗುತ್ತದೆ.

೮ ರಕ್ತಚಂದನ, ಪದ್ಮಕಾಷ್ಠ, ಹವೀಜ, ಅಮೃತಬಳ್ಳಿ, ಬೇವಿನಕಡ್ಡಿ ಇವುಗಳ ಕಷಾಯದಿಂದ ಕಫಪಿತ್ಥಜ್ವರದ ನಾಶವಾಗಿ, ಓಕರಿಕೆ, ದಾಹ, ಶೋಷ ಗಳು ಕಡಿಮೆಯಾಗುತ್ತವೆ.

೯ ಹವೀಜ, ಬಾಳದಬೇರು, ಜೇಕಿನಗಡ್ಡೆ, ಅರಿಷಿಣ, ಬಾಳಹಿರಡಾ, ಜೀರಿಗೆ ಇವುಗಳ ಕಷಾಯದಿಂದ ಕಫಪಿತ್ಥಜ್ವರವು ಕಡಿಮೆಯಾಗುತ್ತದೆ.

೧೦ ಸೂರ್ಯಶೇಖರರಸ:—ಶುದ್ಧಪಾರಜ, ಗಂಧಕ, ಬಳಿಗಾರ ಇವನ್ನು ೧-೧ ಭಾಗ, ಶುದ್ಧ ಜಾಪಾಳಕಾಯಿ ೨ ಭಾಗ, ಸೈಂಧಲವಣ, ಮೆಣಸು, ಹುಣಸೀಹುಳಿ, ಸಕ್ಕರಿ ಇವು ೧-೧ ಭಾಗ ಇವನ್ನೆಲ್ಲ ಲಿಂಬೀಹಣ್ಣಿನ ರಸದಲ್ಲಿ ಅರೆದು, ೨ ಗುಲಗಂಜೀ ಪ್ರಮಾಣದ ಗುಳಿಗೇ ಕಟ್ಟಿಡಬೇಕು. ಅಂಥದೊಂದು ಗುಳಿಗೆಯನ್ನು ಬಿಸಿ ನೀರಲ್ಲಿ ತಕೊಂಡರೆ ವಾತ ಶ್ಲೇಷ್ಮಜ್ವರದ ನಾಶವಾಗುತ್ತದೆ.

೧೧ ಕಹಿಪಡುವಲ, ಖಾರಗೆಣಸು ಇವುಗಳ ಕಷಾಯದಿಂದ ಪಿತ್ಥಶ್ಲೇಷ್ಮ ಜ್ವರ, ಓಕರಿಕೆ, ದಾಹ, ಮೈಕಡಿತ ಮುಂತಾದವುಗಳ ನಾಶವಾಗುವದು.

೧೨ ಕಹಿಪಡುವಲ, ಬೇವು, ತ್ರಿಫಳ, ಕಲ್ಲಕಡಲೆಬೇರು ಇವುಗಳ ಕಷಾಯವು ಪಿತ್ಥಕಫಜ್ವರಕ್ಕೆ ಮಾರಕವಾಗಿರುತ್ತದೆ.

೧೩ ಖುರಾಸಾಣಿಅಜ್ವಾನ, ಅಜ್ವಾನ, ಬಜೆ, ಇಂಗು, ಬಾಳದಬೇರು, ಹವೀಜ, ಅರಿಷಿಣ, ಜೇಕಿನಗಡ್ಡೆ, ಜ್ಯೇಷ್ಠಮಧು, ಗಂಟುಭಾರಂಗಿ, ಕಲ್ಲು ಸಬ್ಬಸಿಗಿ ಇವುಗಳನ್ನು ಸಮಭಾಗ ತಕೊಂಡು ಅಷ್ಟಮಾಂಶ ಕಷಾಯಮಾಡಿ ಜೇನತುಪ್ಪ ಹಾಕಿ ಕುಡಿದರೆ ಕಫಪಿತ್ಥಜ್ವರದ ನಾಶವಾಗುತ್ತದೆ.

೧೪ ಚಂದ್ರಶೇಖರ ರಸ:—ಶುದ್ಧಪಾರಜ, ಗಂಧಕ, ಮೆಣಸು, ಬಳಿಗಾರ ಇವನ್ನು ಸಮಭಾಗ ತಕೊಂಡು ಇವೆಲ್ಲವುಗಳಷ್ಟು ಮನಸೀಲವನ್ನು ಕೂಡಿಸಿ ಅರೆದು ಅದಕ್ಕೆ ೩ ದಿನಗಳ ವರೆಗೆ ಮೀನದ ಪಿತ್ಥದ ಭಾವನೆ ಕೊಡಬೇಕು.

ಬಳಿಕ ೩ ಗುಂಜಿಯು ಗುಳಿಗೆಗಳನ್ನು ಕಟ್ಟಿ, ಒಂದೊಂದು ಗುಳಿಗೆಯುನ್ನು ಅಲ್ಲದ ರಸದೊಡನೆ ಕೊಡಬೇಕು. ಮೇಲೆ ತಣ್ಣೀರು ಕುಡಿಸಬೇಕು. ಪಥ್ಯ:—ಮಜ್ಜಿಗೀಅನ್ನ, ಬದನೀಕಾಯಿ ಭಜ್ಜಿ ಉಣಬೇಕು; ಅಂದರೆ ೩ ಮೂರು ದಿನ ಗಳಲ್ಲಿ ಕಫಪಿತ್ಥಜ್ವರದ ನಾಶವಾಗುತ್ತದೆ.

೧೫ ರಸರತ್ನರಂಗ ಗ್ರಂಥದೊಳಗೆ ಹೇಳಿದ ಪಿತ್ಥಶ್ಲೇಷ್ಮಜ್ವರಾಂಕುಶ:—ಶುದ್ಧಪಾರಜ, ಗಂಧಕ, ಬಳಿಗಾರ, ಮೆಣಸು ಇವನ್ನು ಸಮ ಭಾಗ ತಕೊಂಡು ಕೂಡಿಸಿ ಅರೆದು, ಅದಕ್ಕೆ ೭ ದಿನಗಳ ವರೆಗೆ ಏೂನದ ಪಿತ್ಥದ ಭಾವನೆ ಕೊಡ ಬೇಕು; ಹಾಗು ಒಣಗಿದ ಮೇಲೆ ಡಬ್ಬಿ ತುಂಬಿಟ್ಟು ೨ ಅವರೇ ಕಾಳಷ್ಟು ಔಷಧವನ್ನು ಖಾರಗೆಣಸಿನ ರಸದಲ್ಲಿ ಕಲ್ಲುಸಕ್ಕರಿ ಕೂಡಿಸಿ ಕೊಟ್ಟರೆ, ಒಂದೇ ಪ್ರಹರದಲ್ಲಿ ಕಫಶ್ಲೇಷ್ಮಜ್ವರವು ನಿಲ್ಲುತ್ತದೆ. ಇದಕ್ಕೆ ಪಥ್ಯ:—ಮಜ್ಜಿಗೀ ಅನ್ನ, ಬದನೀಕಾಯಿ ಭಜ್ಜಿ.

---

## ೧೬ ಸನ್ನಿಪಾತಜ್ವರ.

ಕಾರಣ:—ಬಹಳ ಹುಳಿ, ಸ್ನಿಗ್ಧೋಷ್ಣ, ತೀವ್ರೋಷ್ಣ, ಮಧುರ, ಮದ್ಯ ಸೇವನ, ಬಿಸಿಲು ಇಲ್ಲದೆ ಬೆಂಕಿ ಕಾಸುವದು, ಒಗರು ಪದಾರ್ಥ ತಿನ್ನುವದು, ಕಾಮ-ಕ್ರೋಧ, ಅತಿರುಕ್ಷ, ಅತಿಜಡ, ಅಕಂತ ಭೋಜನ, ಮಾಂಸಭಕ್ಷಣ, ಶೀತಪದಾರ್ಥ ಸೇವನ, ಶೋಕ, ಭ್ರಮ, ಚಿಂತೆ, ಪಿಶಾಚಿ ಬಾಧೆ ಮತ್ತು ಮಿತಿ ಮೀರಿದ ಸ್ತ್ರೀಸಂಗ ಈ ಮೊದಲಾದ ಕಾರಣಗಳಿಂದ ಚೈತ್ರ, ವೈಶಾಖ, ಶ್ರಾವಣ, ಭಾದ್ರಪದ, ಆಶ್ವೀಜ, ಕಾರ್ತಿಕ ಮಾಸಗಳಲ್ಲಿ ಬಹುಶಃ ಸನ್ನಿಪಾತದ ಪ್ರಕೋಪ ವಾಗುತ್ತದೆ.

ಸನ್ನಿಪಾತವುಂಟಾಗಲಿಕ್ಕೆ ಕರ್ಮ-ವಿಪಾಕಗಳು.

ವಿಶ್ವಾಸಘಾತ ಮಾಡಿದರೆ, ಬಿಂಸುಡಿಗಳನ್ನಾಡಿದರೆ, ಹೆರವರ ಪ್ರಾಣ ತಕೊಂಡರೆ, ನಿರಪರಾಧಿಯುನ್ನು ಸೆರೆಮನೆಯಲ್ಲಿಟ್ಟರೆ, ದ್ವೇಷ ಮಾಡಿದರೆ, ಸುಮ್ಮ ಸುಮ್ಮನೆ ಸಿಟ್ಟು ಮಾಡಿದರೆ, ಶಾಸ್ತ್ರ-ವೇದ-ದ್ವಿಜ ಇವರುಗಳ ಮೇಲೆ ದೋಷಾ ರೋಪಣ ಮಾಡಿದರೆ, ಹೋಮ, ಯಾಗ, ಕುಂಡ, ಜಲಾಶಯ, ವಿವಾಹ, ಬಾವಿ ಮುತ್ತು ಅಡವಿಗಳನ್ನು ನಾಶ ಮಾಡಿದರೆ ಮುತ್ತು ಅನೇಕ ಕಾರಣಗಳಿಂದ ೧೩ ಬಗೆಯು ಸನ್ನಿಪಾತವಾಗುತ್ತದೆ. ಸನ್ನಿಪಾತಜ್ವರದ ಪರಿಹಾರವಾಗ ಬೇಕಾದರೆ, ಅನೇಕ ಪ್ರಕಾರದ ಧರ್ಮಕೃತ್ಯಗಳನ್ನೂ, ಪರೋಪಕಾರದ ಕೆಲಸ ಗಳನ್ನೂ, ತನ್ನ ಮನಸ್ಸಿಗೆ ಸಮಾಧಾನವುಂಟಾಗುವಂಥ ಉತ್ತಮ ಕೆಲಸವನ್ನೂ, ದೇವಭಕ್ತಿಯುನ್ನೂ, ಕೆರೆ, ಭಾವಿ, ಔಷಧಾಲಯುಗಳನ್ನೂ, ಮಾರ್ಗದಲ್ಲಿ ಗಿಡ

ಹೆಚ್ಚುವದೇ ಮೊದಲಾದ ಸತ್ಕೃತ್ಯಗಳನ್ನೂ ಮಾಡಿ, ಮನಃಶ್ಶಾಂತಿ ಮಾಡಿಕೊಳ್ಳ ಬೇಕು. ಸನ್ನಿಪಾತವು ಕೇವಲ ಮೃತ್ಯುಸ್ವರೂಪವೇ ಆಗಿರುತ್ತದೆ. ಸನ್ನಿಪಾತವನ್ನು ಯಾವ ಭೈಷಜನು ಗೆಲ್ಲುವನೋ, ಅವನು ಮೃತ್ಯುಂಜಯನು. ಆದುದರಿಂದ ಸನ್ನಿಪಾತರೋಗಿಯನ್ನು ಯಾವನು ನೆಟ್ಟಗೆ ಮಾಡುವನೋ, ಅವನಿಗೆ ರೋಗಿಯು ತನ್ನ ಸರ್ವಸ್ವವನ್ನು ದಾನ ಮಾಡಿದರೂ ಅವನ ಉಪಕಾರ ತೀರಲಾರದು. ಸನ್ನಿಪಾತಜ್ವರವೆಂದರೆ, ತ್ರಿದೋಷಯುಕ್ತ ಜ್ವರವು. ವಾತಾದಿ ತ್ರಿದೋಷಗಳು ಕೆಲವೊಂದು ಕಾರಣದಿಂದ ಪ್ರಕೋಪವಾಗಿ ಅದರಿಂದ ಉಂಟಾಗುವ ಜ್ವರವೇ ಸನ್ನಿಪಾತ ಜ್ವರವು,

ಸನ್ನಿಪಾತಜ್ವರದ ಲಕ್ಷಣಗಳು:—ಕ್ಷಣದಲ್ಲಿ ದಾಹ, ಕ್ಷಣದಲ್ಲಿ ಶೀತ, ಎಲುವು, ಸಂಧಿಗಳು, ತಲೆ ಇವುಗಳಿಗೆ ಶೂಲಿ, ಕಣ್ಣಿಗೆ ನೀರು ಬರುವದು, ಕೆಕ್ಕರಿಸುವದು ಅಥವಾ ಕೆಂಪಡರುವದು, ಕಿವಿಯಲ್ಲಿ ಶೂಲಿ ಹಾಗು ನಾದವಾಗುವದು, ಗಂಟಲದಲ್ಲಿ ಚಿಕ್ಕಪುಟ್ಟ ಮುಳ್ಳುಗಳಿದ್ದ ಎರಡು ಪ್ರಕಾರದ ಧ್ವನಿ ಹೊರಡುವದು, ಕಣ್ಣಿಗೆ ಮುಬ್ಬು ಬರುವದು, ಮೂರ್ಛೆ, ಬಡಬಡಿಕೆ, ಉಬ್ಬಸ, ಅರುಚಿ, ಕೆಮ್ಮು, ಭ್ರಮ, ನಾಲಿಗೆಯು ಸುಟ್ಟ ಹಾಗೆ ಕಪ್ಪಾಗಿ ಒಣಗುವದು. ಮೈ ನಡುಗು, ರಕ್ತ-ಕಫ ಪಿತ್ತಗಳಿಂದ ಕೂಡಿದ ಉಗುಳು ಆಗಾಗ್ಗೆ ಬರುವದು, ತಲೆ ನಡ ಗಹತ್ತುವದು, ನೀರಡಿಕೆ, ನಿದ್ರಾನಾಶ, ಎದೆನೋವು, ಬೆವರು, ಮಲ ಮೂತ್ರಗಳು ಬಹಳ ಹೊತ್ತಿಗೆ ಆಗುವದು ಮತ್ತು ಅತ್ಯಲ್ಪವಾಗುವದು, ಸುಮ್ಮನೆ ಮಲಗಿದಾಗ ಶ್ವಾಸೋಚ್ಛ್ವಾಸದ ಗಟ್ಟಿ ದನಿಯಾಗುವದು, ಕಪ್ಪು-ಕೆಂಪು ಬಣ್ಣದ ದುಂಡನ್ನ ಗಂಟುಗಳು ಮೈಮೇಲೇಳುವದು, ಮಾತಾಡಲಿಕ್ಕೆ ಬಾರದೆ ಇರುವದು, ಮುಖ, ಮೂಗು ಮತ್ತು ಕಿವಿ, ಇವುಗಳ ಪಾಕವಾಗುವದು, ಹೊಟ್ಟೆಯು ಜಡವಾಗುವದು ಮತ್ತು ವಾತಾದಿ ಕುಪಿತ ದೋಷಗಳು ಕಾಲ ಕಾಲಕ್ಕೆ ಪಾಕವಾಗೋಣ ಇವೆಲ್ಲ ಲಕ್ಷಣಗಳು ಹೆಚ್ಚು ಕಡಿಮೆ ಮಾನದಿಂದ ಸನ್ನಿಪಾತ ಜ್ವರದಲ್ಲಿ ಉಂಟಾಗುತ್ತವೆ.

ಸಾಧ್ಯಾಸಾಧ್ಯ ಲಕ್ಷಣ:—ವಾತ, ಪಿತ್ತ ಮತ್ತು ಕಫಗಳ ವೃದ್ಧಿಯಾದರೆ, ಜಠರಾಗ್ನಿಯು ಸಂಪೂರ್ಣವಾಗಿ ನಂದಿದರೆ ಮತ್ತು ಸನ್ನಿಪಾತದ ಎಲ್ಲ ಲಕ್ಷಣಗಳೂ ಉಂಟಾಗಿದ್ದರೆ ಆ ರೋಗಿಯು ಅಸಾಧ್ಯವೆಂದೇ ತಿಳಿಯತಕ್ಕದ್ದು. ಮೇಲೆ ಹೇಳಿದ್ದರಲ್ಲಿ ಕಡಿಮೆಯಿದ್ದರೆ ಸಾಧ್ಯವೆನ್ನಬೇಕು.

ಸನ್ನಿಪಾತದಲ್ಲಿ ಧಾತುಪಾಕಲಕ್ಷಣ:—ನಿದ್ರಾನಾಶ, ಎದೆ ನೆಟ್ಟಿದಂತಾಗೋಣ, ಮಲಮೂತ್ರಗಳಾಗದಿರೋಣ, ಶರೀರದ ಜಾಡ್ಯ, ಅನ್ನದ್ವೇಷ, ಅಸ್ವಸ್ಥತೆ ಮತ್ತು ಶಕ್ತಿಪಾತ ಇವೆಲ್ಲ ಲಕ್ಷಣ ಆಗುತ್ತವೆ.

ಸನ್ನಿಪಾತದಲ್ಲಿ ಮಲಪಾಕದ ಲಕ್ಷಣಗಳು:-ದೋಷಗಳ ಸ್ವಭಾವವು ಬದಲಾಗೋಣ, ಜ್ವರಕಡಿಮೆಯಾಗೋಣ, ದೇಹವು ಹಗುರಾಗೋಣ, ಇಂದ್ರಿಯಗಳು ನಿರ್ಮಲವಾಗೋಣ ಇತ್ಯಾದಿ. ಧಾತುಪಾಕ-ಮಲಪಾಕಗಳಾಗುವದು ರೋಗಿಯ ಕೇವಲ ದೈವಬಲವನ್ನವಲಂಬಿಸಿದೆ. ಇದಕ್ಕೆ ಬೇರೆ ಯಾವ ಆಗಂತುಕ ಕಾರಣಗಳೂ ಇರುವದಿಲ್ಲ.

ದೋಷಜನಿತ ಸನ್ನಿಪಾತ ಜ್ವರಗಳ ಕಾಲಮರ್ಯಾದೆಯು:—೭-೯-೧೧ ದಿನ. ಈ ಮೂರು ಕಾಲುಗಳು ವಾತ, ಪಿತ್ತ, ಕಫಗಳಿಗಾಗಿವೆ ಆದುದರಿಂದ ಆಯಾದಿನಗಳಲ್ಲಿ ಧಾತುಪಾಕವಾಯಿತೆಂದರೆ ರೋಗಿಯು ಸಾಯುತ್ತಾನೆ; ಮತ್ತು ಅದೇ ಕಾಲಾವಧಿಯಲ್ಲಿ ಮಲಪಾಕವಾಯಿತೆಂದರೆ ಅವನು ಖಂಡಿತವಾಗಿ ಬದುಕುತ್ತಾನೆಂದು ನಿರ್ಧಾರವಾಗಿ ಹೇಳಬಹುದು.

ಸನ್ನಿಪಾತದ ಕಾಲಮರ್ಯಾದೆಯು:—೭-೯-೧೧-೧೪-೧೮-೨೨ ಈ ದಿವಸಗಳಲ್ಲಿ ರೋಗವು ಹೆಚ್ಚಿದರೆ ಆ ರೋಗಿಯು ಆ ಕಾಲಾವಧಿಯಲ್ಲಿ ಸಾಯುತ್ತಾನೆ; ಮತ್ತು ಆ ಕಾಲಾವಧಿಯನ್ನು ದಾಟಿ ಉಳಿದರೆ ಅವನು ನಿಶ್ಚಯವಾಗಿ ಬದುಕುತ್ತಾನೆ.

ಸನ್ನಿಪಾತದ ಬಗ್ಗೆ ಲಕ್ಷ್ಯದಲ್ಲಿಡತಕ್ಕ ಮಹತ್ವದ ಸೂಚನೆಗಳು:—

(೧) ಸನ್ನಿಪಾತದ ರೋಗಿಗೆ ಭತ್ತದ ಅರಳ ಹಿಟ್ಟಿನಲ್ಲಿ ಸೈಂಧಲವಣ ಹಾಕಿಕೊಡಬೇಕು. ಅದು ನಿರ್ವಿಘ್ನದಿಂದ ಜೀರ್ಣಿಸಿದರೆ ಅವನು ಖಂಡಿತವಾಗಿ ಬದುಕುವನು. ಆ ಅರಳ ಹಿಟ್ಟು ಹೆಚ್ಚು ಶೀತಕರವಾಗಿರುವದರಿಂದ ಸೈಂಧಲವಣದ ಹೊರತು ಅದೊಂದನ್ನೇ ಕೊಡಕೂಡದು. (೨) ಸನ್ನಿಪಾತಜ್ವರದವನು ಮೊದಲು ಲಂಘನ ಮಾಡಬೇಕು. (೩) ಮೊದಲು ಬರೇ ನೀರಿನ ಅಷ್ಟಮಾಂಶ ಕಷಾಯ ಮಾಡಿ ಮಂದೋಷ್ಣ ಕೊಡಬೇಕು. (೪) ಕಾಲಕಾಲಕ್ಕೆ ಔಷಧ ಕೊಡಬೇಕು. (೫) ತಣ್ಣೀರನ್ನು ಅವನಿಗೆ ಕೊಡಲೇ ಬಾರದು. (೬) ಜೇನತುಪ್ಪ ಕೊಟ್ಟನಂತರ ಅದರ ಮೇಲೆ ಶೀತೋಪಚಾರ ಮಾಡಬೇಕು; ಆದರೆ ಸನ್ನಿಪಾತಕ್ಕೆ ಶೀತೋಪಚಾರಗಳು ಕೇವಲ ವಿರುದ್ಧ; ಮತ್ತು ಜೇನತುಪ್ಪಕ್ಕೆ ಉಷ್ಣೋಪಚಾರಗಳು ವಿರುದ್ಧ. ಇಷ್ಟೇ ಅಲ್ಲ, ಕೇವಲ ವಿಷರವಮಾನವಾಗಿವೆ. ಆದುದರಿಂದ ಸಂಪೂರ್ಣ ಸನ್ನಿಪಾತದಲ್ಲಿ ಜೇನತುಪ್ಪವನ್ನೆಂದೂ ಕೊಡಕೂಡದೆಂಬುದನ್ನು ಮರೆಯಲಾಗದು. (೭) ಸನ್ನಿಪಾತಕ್ಕೆ ಆಮ ಮತ್ತು ಕಫನಾಶಕ ಔಷಧಗಳನ್ನು ಮೊದಲಿಗೆ ಕೊಡಬೇಕು. ಕಫವು ಕ್ಷೀಣವಾಯಿತೆಂದರೆ ಪಿತ್ತಶಮನೋಪಾಯಗಳನ್ನು ಮಾಡತಕ್ಕದ್ದು. (೮) ಎಲ್ಲಿಯ ವರೆಗೆ ಲಂಘನವು ಸಹನವಾಗುವದೋ, ಅಲ್ಲಿಯ ವರೆಗೆ ರೋಗಿಯ ಶರೀರದೊಳಗೆ ದೋಷಗಳಿರು

ಕ್ತವೆಂದು ತಿಳಿಯತಕ್ಕದ್ದು; ದೋಷಗಳು ಹೋದಮೇಲೆ ರೋಗಿಗೆ ಲಂಘನವು ಸಹನವಾಗುವದಿಲ್ಲ ಕಫ-ಪಿತ್ತ ಇವು ದ್ರವ ಧಾತುಗಳಾಗಿರುವದರಿಂದ ಅವು ದೋಷವು ಹೊರಟು ಹೋದಮೇಲೆ ಸಹ ಎಷ್ಟೋ ದಿನಗಳ ಲಂಘನವು ಅವನಿಗೆ ತ್ರಾಸದಾಯಕವಾಗುವದಿಲ್ಲ; ಆದರೆ ವಾತದೋಷವು ಕಡಿಮೆಯಾಯಿತೆಂದರೆ ಅವನಿಗೆ ಒಂದಿಷ್ಟು ಲಂಘನವು ಕೂಡ ಸಹಿಸುವದಿಲ್ಲ.

ಒಂದು ಔಷಧದಿಂದ ಗುಣ ಬರದಿದ್ದರೆ, ಬೇರೆ ಔಷಧವನ್ನು ಕೊಡತಕ್ಕದ್ದು; ಆದರೆ ಮೊದಲಿಗೆ ಕೊಟ್ಟ ಔಷಧದ ವೇಗವು ಕಡಿಮೆಯಾಗದ ಹೊರತು ಬೇರೆ ಔಷಧವನ್ನು ಕೊಡಕೂಡದು. ಕೊಟ್ಟರೂ ಹಿತಕರವಾಗಿ ಪರಿಣಮಿಸಲಿಕ್ಕಿಲ್ಲ. ಸನ್ನಿಪಾತಜ್ವರದ ರೋಗಿಗೆ ಮಾಂಸವನ್ನು ಸರ್ವಥಾ ಕೊಡಲಾಗದು. ಯಾರಾದರೂ ಕೊಟ್ಟರೆ ಇಲ್ಲವೆ ಕೊಡ ಹೇಳಿದರೆ ಅವನು ರೋಗಿಗೆ ಆಗದ ಘಾತುಕನಿರುತ್ತಾನೆಂದು ತಿಳಿಯತಕ್ಕದ್ದು.

ಸನ್ನಿಪಾತದಲ್ಲಿ ಕಫ, ವಾತ, ಪಿತ್ತ ಈ ಪ್ರತಿಯೊಂದು ದೋಷದ ಉಲ್ಬಣದಿಂದ ೩; ಎರಡೆರಡು ದೋಷಗಳ ಉಲ್ಬಣದಿಂದ ೩; ಮತ್ತು ಮೂರೂ ದೋಷಗಳ ಉಲ್ಬಣದಿಂದ ೧; ಹೀಗೆ ಒಟ್ಟು ೭. ಮತ್ತು ಪ್ರಬುದ್ಧ, ಮಧ್ಯ, ಹೀನ ಹೀಗೆ ವಾತ, ಪಿತ್ತ, ಕಫಗಳ ದೋಷಗಳ ಪರ್ಯಾಯದಿಂದ ೬. ಈ ಪ್ರಕಾರ ಒಟ್ಟಿಗೆ ೧೩ ಪ್ರಕಾರದ ಸನ್ನಿಪಾತದ ಜ್ವರಗಳಿರುತ್ತವೆ.

ಸನ್ನಿಪಾತರೋಗಿಯ ಎಲ್ಲ ಭಾವನೆಗಳನ್ನೂ, ಚಿಹ್ನೆಗಳನ್ನೂ ಬಲು ಎಚ್ಚರಿಕೆಯಿಂದ ಪರೀಕ್ಷಿಸಿ ಬರೆದಿಡಬೇಕು; ಮತ್ತು ಮುಂದೆ ಹೇಳಿರುವ ಉಪಾಯಗಳಲ್ಲಿ ಯಾವ ಉಪಾಯಗಳು ಬಗೆ ಬೀಳುವವೋ, ಅವನ್ನು ಮಾಡಿದರೆ ಯಶಸ್ಸು ದೊರೆಯುವದು ಖಂಡಿತವು.

---

## ೧೭ ಸನ್ನಿಪಾತ ಜ್ವರದ ಬಗ್ಗೆ ಇತರ ಮತಗಳು.

೧ ದೋಷಗಳ ವೃದ್ಧಿಯಾಗಿದ್ದು ಅಗ್ನಿಯು ಅತಿ ಮಂದವಾಗಿ ಇತರ ಲಕ್ಷಣಗಳು ಸಂಪೂರ್ಣವಾಗಿ ಆಗಿದ್ದರೆ ಅಂಥ ಸನ್ನಿಪಾತ ಜ್ವರವು ಅಸಾಧ್ಯವೆಂದೇ ತಿಳಿಯತಕ್ಕದ್ದು. ಇದಕ್ಕೆ ಭಿನ್ನಪ್ರಕಾರವಿದ್ದರೆ ಕಷ್ಟಸಾಧ್ಯವೆನ್ನಬಹುದು.

೨ ಸನ್ನಿಪಾತ ಜ್ವರದಲ್ಲಿ ಕರ್ಣ ಮೂಲದೊಳಗೆ ದೊಡ್ಡ ಗಂಟಾಗುತ್ತದೆ. ಅಂಥ ಸ್ಥಿತಿಯಲ್ಲಿ ರೋಗಿಯು ಒಮ್ಮೆಯೇ ಒದುಕುತ್ತಾನೆ. (ಕರ್ಣಮೂಲಕ್ಕೆ ಯೋಗ್ಯವಾದ ಔಷಧಗಳು ಮುಂದೆ ಕೊಡಲ್ಪಟ್ಟಿವೆ.)

೩ ಪಿತ್ತವು ಹೆಚ್ಚಿದ್ದರೆ ೧೦ ದಿನಗಳಿಗೆ, ಕಫವು ಹೆಚ್ಚಾಗಿದ್ದರೆ ೧೨ ದಿನಗಳಿಗೆ, ವಾತವು ಅಧಿಕವಾಗಿದ್ದರೆ ೭ ದಿನಗಳಿಗೆ ಧಾತುಪಾಕವಾದರೆ ರೋಗಿಯನ್ನು ಕೊಲ್ಲುತ್ತದೆ: ಮಲಪಾಕವಾದರೆ ಉಳಿಸುತ್ತದೆ.

೪ ೭-೧೦-೧೩ ದಿವಸಗಳಲ್ಲಿ ಸನ್ನಿಪಾತಜ್ವರವು ಹೆಚ್ಚಾಗಿ ಒಮ್ಮೊಮ್ಮೆ ಶಾಂತವಾಗುತ್ತದೆ; ಅಥವಾ ಕೊಲ್ಲುತ್ತದೆ.

೫ ದಾಹ, ಭ್ರಮ, ಬೆವರು, ನೀರಡಿಕೆ, ನಡುಗು, ಮಲ ನೀರಾಗೋಣ, ಸ್ಮೃತಿದಪ್ಪೋಣ, ನೆರಳುವದು, ಮೈ ಹೊಲಸು ನಾರುವದು ಈ ಲಕ್ಷಣಗಳು ಉಂಟಾದರೆ ಜ್ವರವು ಆರುತ್ತದೆಂದು ತಿಳಿಯಬೇಕು.

೬ ಸನ್ನಿಪಾತಜ್ವರದಲ್ಲಿ ಮೊದಲಿಗೆ ಆಮ ಮತ್ತು ಕಫಗಳನ್ನು ಕಡಿಮೆ ಮಾಡುವ ಔಷಧಗಳನ್ನು ಕೊಡಬೇಕು. ಅವು ಕಡಿಮೆಯಾದ ಬಳಿಕ ಕಫ ವಾತಗಳನ್ನು ಕಡಿಮೆ ಮಾಡುವ ಔಷಧ ಕೊಡಬೇಕು.

೭ ಮೊದಲು ಲಂಘನ, ಉಸುಗಿನ ಉಗೆ, ನಸ್ಯ, ವಾಂತಿಯಾಗುವ ಔಷಧ, ಅವಲೇಹ, ಅಂಜನ ಇತ್ಯಾದಿ ಉಪಾಯಗಳನ್ನು ಮಾಡಬೇಕು.

೮ ೩-೫-೧೦ ದಿನಗಳಿಗೆ ಆರೋಗ್ಯವುಂಟಾಗುವ ತನಕ ಲಂಘನ ಮಾಡಬೇಕು. ಇದು ಸನ್ನಿಪಾತಜ್ವರಕ್ಕೆ ಹಿತಕರವಾಗುವದು.

೯ ಲಂಘನವೆಂದರೆ ಏನೂ ತಿನ್ನದಿರುವದೆಂದಿದ್ದರೂ ಅದು ಇಲ್ಲಿ ತಕ್ಕದ್ದಲ್ಲ. ಯಾಕೆಂದರೆ ಒಂದೇ ದಿನದ ಲಂಘನದಿಂದ ಪ್ರಾಣವು ವ್ಯಾಕುಲವಾಗುತ್ತಿರಲು, ೯ ದಿವಸಗಳ ಸತತವಾದ ಲಂಘನವು ಸಹನವಾಗುವ ಬಗೆ ಹೇಗೆ? ಆದುದರಿಂದ ಪ್ರಾರಂಭದಲ್ಲಿ ಒಂದು ದಿವಸವನ್ನು ಬರೇ ನೀರಿನ ಅಷ್ಟಮಾಂಶ ಕಷಾಯದಿಂದಲೇ ಕಳೆಯಬೇಕು, ಮರುದಿನದಿಂದ ಔಷಧೀಯುಕ್ತ ಗಂಜಿ, ಕಾಟಿ, ಯವಾಗು ಮುಂತಾದವುಗಳಲ್ಲಿ ಅನುಕೂಲವಾದುದನ್ನು ಕೊಡತಕ್ಕದ್ದು; ಆದರೆ ಅನ್ನವನ್ನು ಸರ್ವಥಾ ಕೊಡಕೂಡದು; ಅಂದರೆ ಲಂಘನ ಮಾಡಿದಂತೆಯೇ ಆಗುವದು; ಮತ್ತು ಇದರಿಂದ ದೋಷಗಳೂ ಕಡಿಮೆಯಾಗುತ್ತವೆ.

೧೦ ಪ್ರತಿಯೊಂದು ಪ್ರಕಾರದ ಜ್ವರದಲ್ಲಿಯೂ ಸನ್ನಿಪಾತದಲ್ಲಿಯೂ ಪ್ರಾರಂಭದಲ್ಲಿ ಲಂಘನ ಮಾಡಬೇಕೆಂದೇ ತಿಳಿಸಿದ್ದರೂ ಕ್ಷಯ, ವಾಯು, ಭಯ, ಕಾಮ, ಕ್ರೋಧ, ಶೋಕ, ಶಾಪ, ಶ್ರಮಜನ್ಯಜ್ವರಗಳಿಗೆ ಲಂಘನವು ತ್ಯಾಜ್ಯವಾಗಿರುತ್ತದೆ. ಇದರಂತೆ ಬಾಲ, ವೃದ್ಧ, ಗರ್ಭಿಣಿ ರೋಗಿಗಳಿಗೂ ಲಂಘನವು ತಕ್ಕದ್ದಲ್ಲ.

## ೧೮ ಸನ್ನಿಪಾತಜ್ವರಕ್ಕೆ ಉಪಾಯಗಳು.

೧ ದೇವದಾರು, ಶುಂಠಿ, ನೆಲಗುಳ್ಳಬೇರು, ಗುಳ್ಳದಬೇರು, ಹವೀಜ ಇವುಗಳನ್ನು ಸಮಭಾಗ ತಕ್ಕೊಂಡು ಕಷಾಯ ಮಾಡಿ ಕೊಟ್ಟರೆ ಅದರಿಂದ ಎಲ್ಲ ಬಗೆಯ ಜ್ವರವೂ ಕಡಿಮೆಯಾಗುತ್ತವೆ

೨ ಕಿರಿಶಿವಣಿ, ಜೇಕಿನಗಡ್ಡೆ, ಒಜೆ, ಅಗಳಶುಂಠಿ, ತಾವರೆಗಡ್ಡೆ, ಜೀರಿಗಿ, ಕಲ್ಲುಸಬ್ಬಸಿಗಿ, ದೇವದಾರು, ಅಳಲೇಕಾಯಿ, ದುಷ್ಟಪುಜೆಟ್ಟು, ಹಿಪ್ಪಲಿ, ನೆಲಬೇವು ಶುಂಠಿ, ಗಂಟುಭಾರಂಗಿ, ಕೋಡುಮುರುಕನಬೀಜ, ಕಟುಕರೋಣಿ, ಕಚೂರ, ಕಾಚೀಹುಲ್ಲಿನಬೇರು, ಹವೀಜ ಇವನ್ನೆಲ್ಲ ಸಮಭಾಗ ತಕ್ಕೊಂಡು, ಅಷ್ಟಮಾಂಶ ಕಷಾಯವಿಳಿಸಿ, ಅದರಲ್ಲಿ ಇಂಗು ಮತ್ತು ಖಾರಗೆಣಸಿನರಸ ಹಾಕಿ ಕೊಡಬೇಕು. ಇದರಿಂದ ಕರ್ಣಮೂಲ, ಕುತ್ತಿಗೆ ಮತ್ತು ಗಂಟಲುಬಾವು, ಸೂಸುಗೆಮ್ಮು, ಉಬ್ಬಸ, ಕಫ ಮತ್ತು ವಾತಜ್ವರ, ಬಿಕ್ಕು, ಹನುಗ್ರಹ, ಗಲಗಂಡ, ಗಂಡ ಮಾಲೆ, ಕಫದಿಂದುಂಟಾದ ಸ್ವರಭೇಧ, ತಲೆಭಾರ, ಕಿವುಡು, ಕಫ ಮತ್ತು ಮೇದಸ್ಸು ಇವುಗಳ ವೃದ್ಧಿ, ಹತ್ತುಬಗೆಯ ಜ್ವರಗಳು, ಸಂಜ್ಞಾನಾಶ, ಸನ್ನಿಪಾತ, ಅಭಿನ್ಯಾಸ ಇವುಗಳ ನಾಶವಾಗುತ್ತದೆ. ಈ ಕಾಷ್ಠೆಯು ಮೃತ್ಯುತುಲ್ಯ ಜ್ವರದ ನಾಶ ಮಾಡುತ್ತದೆಂಬದಕ್ಕೆ ಸಂದೇಹವಿಲ್ಲ.

೩ ನೆಲಬೇವು, ದೇವದಾರು, ದಶಮೂಲಿ, ಶುಂಠಿ, ಜೇಕಿನಗಡ್ಡಿ, ಕಟುಕ ರೋಣಿ, ಕೋಡುಮುರುಕನ ಬೀಜ, ಹವೀಜ, ದೊಡ್ಡಹಿಪ್ಪಲಿ ಇವುಗಳ ಕಷಾಯ ಕೊಡಬೇಕು. ಇದರಿಂದ ಮಬ್ಬು, ಬಡಬಡಿಕೆ, ಕೆಮ್ಮು, ಅರುಚಿ, ದಾಹ, ಮೋಹ, ದಮ್ಮು ಇವುಗಳಿಂದ ಯುಕ್ತವಾದ ಜ್ವರದ ನಾಶವಾಗುತ್ತದೆ. ಇದಾದರೂ ಮೃತ್ಯುತುಲ್ಯ ಜ್ವರದ ನಾಶಕವಾಗಿದೆಯೆಂಬುದಕ್ಕೆ ಸಂಶಯವಿಲ್ಲ.

೪ ರಾಸನೆ, ಅಳ್ಳೀಕಾಯಿ, ಗುಳ್ಳದಬೇರು, ನೆಲಗುಳ್ಳಬೇರು, ಲಕ್ಕೀಬೇರು, ಅಗಳಶುಂಠಿ, ಬಜೆ ಇವುಗಳ ಕಾಢೆ ಮಾಡಿ ಅದರಲ್ಲಿ ಒಂದು ಮಾಸಿ ಗುಗ್ಗುಳ ಹಾಕಿ ಕೊಡಬೇಕು. ಇದರಿಂದ ಸನ್ನಿಪಾತ, ಬೆವರು, ಶೈತ್ಯ, ಬಡಬಡಿಕೆ, ಶೂಲಿ, ದಮ್ಮು, ಕಫ, ಬಾಣಂತಿಬೇನೆ ಮುಂತಾದವುಗಳ ನಾಶವಾಗುತ್ತದೆ,

೫ ಯಾವ ಉಪಾಯದಿಂದಲೂ ಸನ್ನಿಪಾತಜ್ವರವು ಕಡಿಮೆಯಾಗದಿದ್ದರೆ ಮನುಷ್ಯನ ಇಲ್ಲವೆ ಆಕಳ ಉಚ್ಚಿಯಲ್ಲಿ ಒಳ್ಳೊಳ್ಳೆ ಹಾಗು ಬಂಗಾರ ಹಾಕಿ ಕಷಾಯ ಮಾಡಿ, ವಯೋಮಾನದಂತೆ ಸರಾಸರಿ ೩ ತೊಲಿ ಕಷಾಯವಿಳಿಸಿ ಕೊಡ ಬೇಕು. ಇದೊಳ್ಳೇ ತೀವ್ರ ಔಷಧವಾಗಿದ್ದರೂ ಖಂಡಿತವಾಗಿ ಗುಣ ತೋರು ವದು.

೬ ಬೋರೆ, ಬೆಳವಲ, ಅತ್ತಿ, ಬೇವು, ನೆಲ್ಲಿ, ಆರಿ, ನೇರಲ ಇವುಗಳ ಎಲೆ

ಪ್ರತ್ಯೇಕ ೨ ತೊಲಿ ತಕ್ಕೊಂಡು ಅದರಲ್ಲಿ ೪೦ ತೊಲಿ ನೀರು ಹಾಕಿ, ಅಷ್ಟಮಾಂಶ ಅಂದರೆ ೫ ತೊಲಿ ಕಷಾಯವಿಳಿಸಬೇಕು. ಬಳಿಕ ಸೋಸಿ, ಆರಿಸಿ, ಜೇನುತುಪ್ಪ ಹಾಕಿ ಕುಡಿಸಬೇಕು. ರಾತ್ರಿ ನಿಕಾಷೆ ಕೊಡಬೇಕು. ದಿವಸ ೩.

೭ ಸನ್ನಿಪಾತದಲ್ಲಿ ನಾಲಿಗೆಯು ಮುಳ್ಳು ಮುಳ್ಳಾದರೆ:—ನೆಲವರಿಯು ಸಣ್ಣ ಪುಡಿ ಮಾಡಿ, ಅರಿವೆಯಲ್ಲಿ ಸೋಸಿ, ಅದನ್ನು ಜೇನುತುಪ್ಪದೊಡನೆ ಸ್ವಲ್ಪ ಸ್ವಲ್ಪಾಗಿ ನಾಲಿಗೆಗೆ ತಿಕ್ಕಬೇಕು. ಮುಳ್ಳು ಹಾಗು ಆರುವಿಕೆಗಳು ಕಡಿಮೆಯಾಗಿ ನಾಲಿಗೆಯು ಮೃದುವಾಗುತ್ತದೆ.

೮ ಸನ್ನಿಪಾತ ಜ್ವರಕ್ಕೆ ನೆಕ್ಕಿಸುವ ಔಷಧ:-ಬಂಗಾರ, ಬೆಳ್ಳಿ, ರುದ್ರಾಕ್ಷ ಹವಳ, ಮುತ್ತು, ಹವೀಜ, ಕಮಲಬೀಜ, ಪುತ್ರಜೀವ, ರೇತಿಯ ಬೂದಿ, ಉತ್ತತ್ತಿಯ ಬೀಜ, ಜ್ಯೇಷ್ಠಮಧು ಇವೆಲ್ಲ ಅಥವಾ ಸಿಕ್ಕಷ್ಟು ಜಿನಸುಗಳನ್ನು ಜೇನತುಪ್ಪದಲ್ಲಿ ತೆಯ್ದು ಆಗಾಗ್ಗೆ ೨-೩ ತಾಸಿಗೊಂದಾವರ್ತಿಯಂತೆ ನೆಕ್ಕಿಸಬೇಕು.

೯ ಸನ್ನಿಪಾತದಲ್ಲಿ ನಾಲಿಗೆಯು ಕಪ್ಪಾದರೆ:—ಶೀಗೀಕಾಯಿ, ಜ್ಯೇಷ್ಠಮಧು ಇವುಗಳನ್ನು ಜಾಲೀ ಎಲೆಯೊಡನೆ ಅರೆದು ನಾಲಿಗೆಗೆ ತಿಕ್ಕಬೇಕು. ನಾಲಿಗೆಯು ಕಪ್ಪುವರ್ಣವಡಗಿ, ಮೆತ್ತಗಾಗುವದು.

೧೦ ಸನ್ನಿಪಾತದಲ್ಲಿ ವಾಯುವಾಗಿ ಹಲ್ಲು ಗಿಟಕಿರಿದರೆ:—ನಾರೀಹುಲ್ಲಿನ ತೆನಿತಂದು ಒಣಗಿಸಿ, ೨ ತೊಲಿ ಆ ತೆನಿ ತಕ್ಕೊಂಡು ಅದರಲ್ಲಿ(೪೦ ತೊಲಿ) ೧ ಸೇರು ನೀರು ಹಾಕಬೇಕು. ಅದರಲ್ಲಿ ೨-೩ ತೊಲಿಯು ಗಟ್ಟಿ ಬಂಗಾರ ಇಲ್ಲವೆ ಬಂಗಾರದ ಒಡಿವೆ(ಅಂದರೆ ಪಾಟಲಿ, ಕಡೆ, ಅಷ್ಟಪೈಲು ಇತ್ಯಾದಿ)ಹಾಕಿ ಅಷ್ಟಮಾಂಶ ಕಷಾಯವಿಳಿಸಿ (೫ ತೊಲಿ) ಕೊಟ್ಟರೆ ಒಂದೇ ಪ್ರಹರದಲ್ಲಿ ಸ್ಮೃತಿ ಬರುವದು. ಕಾರಣ ಬಿದ್ದರೆ ೨-೩ ಸಾರೆ ಸಹ ಕೊಡಬಹುದು.

೧೧ ವಾಯುವಾದರೆ:—ಎಕ್ಕೀ ಬೇರಿಗೆ ಹತ್ತಿದ ಮಣ್ಣನ್ನು ತಕ್ಕೊಂಡು ಅದನ್ನು ಎಕ್ಕೀಹಾಲಿನಲ್ಲಿ ತೊಯ್ಯಿಸಿ, ಅರೆದು, ಅದನ್ನು ಒಣಗಿಸಿ ಚೂರ್ಣ ಮಾಡಿಡಬೇಕು. ಪ್ರಸಂಗ ಬಿದ್ದಾಗ ಅದನ್ನು ಕಾಗದದ ಕೊಳವೆಯೊಳಗಿಂದ ಮೂಗಿನಲ್ಲಿ ಊದಬೇಕು. ಅದರಿಂದ ರೋಗಿಯು ವಾಯುವಿಕಾರವು ಕಡಿಮೆಯಾಗಿ ಸಾವಧವಾಗುವನು. ಬಳಿಕ ಬಳ್ಳೊಳ್ಳಿಯ ಪಕಳಿ ೧ ತೊಲಿ, ಮೆಣಸು ೧ ತೊಲಿ ಇವುಗಳ ಅಷ್ಟಮಾಂಶ ಕಷಾಯ ಮಾಡಿ ಅದರೊಳಗಿನ ೧ ತೊಲಿ ಕಷಾಯವನ್ನು ಆರಿಸಿ ಜೇನತುಪ್ಪದೊಡನೆ ಕೊಡಬೇಕು. ಮತ್ತು ಉಳಿದ ಕಷಾಯದಲ್ಲಿಯು ೧ ತೊಲಿಯನ್ನು ಸಂಜೆಗೆ ಕೊಡಬೇಕು; ದಿವಸ ೩

೧೨ ವಾಯುವಾಗಿ ಹಲ್ಲು ಗಿಟಕಿರಿದರೆ:—೧೦ ಥಾಲಿ ನೀರು ಹಾಕಿ ೧ ಥಾಲಿ ಉಳಿಯುವವರೆಗೆ ಅಟ್ಟಿಸಿ, ಅದರಲ್ಲಿ ಮುತ್ತಿನ ಸಿಂಪಿನ ೪ ಗುಂಜಿ ಭಸ್ಮ

ವನ್ನು ಹಾಕಿ ಆ ನೀರನ್ನು ಸ್ವಲ್ಪ ಸ್ವಲ್ಪಾಗಿ ಕುಡಿಸಬೇಕು. ಒಂದೇ ಗಳಿಗೆಯಲ್ಲಿ ಗುಣ ತೋರುವದು.

೧೩ ತ್ರಿದೋಷಕ್ಕೆ:—ಶುದ್ಧ ಇಂಗಳೀಕ ೧, ಶುದ್ಧ ರಸಕರ್ಪೂರ ೧, ರಸಸಿಂದೂರ ೧, ಉತ್ತಮ ಜೇನತುಪ್ಪ ೩, ಶುದ್ಧ ಗಂಧಕ ೩ ಈ ಪ್ರಮಾಣದಿಂದ ತಕ್ಕೊಂಡು, ಮೊದಲು ಜೇನತುಪ್ಪವನ್ನು ಕಾದ ಬಾಣ್ಲಿಯಲ್ಲಿ ಹಾಕಿ ಅದರಲ್ಲಿ ಗಂಧಕವನ್ನರೆದು ಏಕಜೀವ ಮಾಡಬೇಕು. ಬಳಿಕ ಅದರಲ್ಲಿ ಮೇಲೆ ಹೇಳಿರುವ ಉಳಿದ ಮೂರು ಜೀನಸುಗಳ ಪುಡಿಯನ್ನು ಹಾಕಿ ಚುಚುಗದಿಂದ ಕೈಯಾಡಿಸಬೇಕು. ಜೇನತುಪ್ಪ, ಗಂಧಕಗಳು ಸುಡುವವರೆಗೆ ಬಾಣ್ಲಿಯನ್ನು ಒಲೆಯ ಮೇಲಿಟ್ಟು ನಂತರ ಕೆಳಗಿಳಿಸಿ ಅದರ ಮೇಲೆ ಅರಳೀ ಬೇರಿನ ಹಸೀ ಹೆರಕಲವನ್ನು ಒತ್ತಿಡಬೇಕು. ೨ ಗಳಿಗೆಯಾದ ಬಳಿಕ ತೆಗೆದು ಖಲಬತ್ತಿನಲ್ಲಿ ಹಾಕಿ ಅರೆದು ಅದನ್ನು ಸೀಸೆಯಲ್ಲಿ ತುಂಬಿಡಬೇಕು. ವಾಯು ಮತ್ತು ತ್ರಿದೋಷ ಜ್ವರಗಳಿಗೆ ಅನುಪಾನದೊಡನೆ ಕೊಟ್ಟರೆ ಉತ್ತಮ ಗುಣಕೊಡುತ್ತದೆ.

೧೪ ಮಾರ್ತಂಡ ಭೈರವ:—ಶುದ್ಧ ಪಾರಜ ೧ ಭಾಗ, ಶುದ್ಧ ನೇಪಾಳದ ಬೇರು ೧ ಭಾಗ ಇವನ್ನು ಚಿತ್ರಮೂಲರಸದಲ್ಲಿ ೩ ದಿವಸ ಅರೆದು ಅದನ್ನು ಅರಿವೆಯಲ್ಲಿ ಕಟ್ಟಿ ಆ ಅರಿವೆಯ ಸುತ್ತಲೂ ಕೆಸರು ಮೆತ್ತಿ ಅದನ್ನು ವಾಲುಕಾಯಂತ್ರದಲ್ಲಿಟ್ಟು ಕಾವು ಕೊಡಬೇಕು. ೪ ಗಳಿಗೆಯ ನಂತರ ಒಂದು ಕಡ್ಡಿಯನ್ನು ತಕ್ಕೊಂಡು ಆ ಯಂತ್ರದೊಳಗಿನ ಉಸುಗಿನಲ್ಲಿ ಹುಗಿಯಬೇಕು. ಆ ಕಡ್ಡಿಗೆ ಕೂಡಲೆ ಬೆಂಕಿ ಹತ್ತಿದರೆ ಔಷಧವು ಸಿದ್ಧವಾಯಿತೆಂದು ತಿಳಿಯತಕ್ಕದ್ದು. ಬಳಿಕ ಆ ಮುಸಿಯು ತಣ್ಣಗಾದ ಮೇಲೆ ಇಳಿಸಬೇಕು; ಹಾಗು ಅನುಪಾನದೊಡನೆ ಕೊಡಬೇಕು. [ಜೇನುತುಪ್ಪ-ಹಿಪ್ಪಲಿಯೊಡನೆ ಕೊಟ್ಟರೆ ಸನ್ನಿಪಾತ, ವಾಯು, ಎಲ್ಲ ಬಗೆಯ ಬಾವುಗಳು, ಪಾಂಡುರೋಗ, ಅರ್ಶರೋಗ, ವಾತರೋಗ, ಹಲೀಮಕ, ವಾತರಕ್ತ, ಜಲೋದರ ಮೊದಲಾದ ಸರ್ವ ಉದರ ರೋಗಗಳು, ಸರ್ವ ಶೂಲಿಗಳು, ಹೊಟ್ಟೆ ಶೂಲಿಗಳು, ತಲೆಶೂಲಿಗಳು ಇವೆಲ್ಲ ರೋಗಗಳು ಹೋಗುತ್ತವೆ. ರೋಗದ ಮಾನದಿಂದ ಪಥ್ಯಮಾಡಿಸಬೇಕು.

೧೫ ಸನ್ನಿಪಾತ ಜ್ವರಕ್ಕೆ ಮೃತ್ಯುಂಜಯ ರಸ:—ಶುದ್ಧ ಇಂಗಳೀಕ ೫ ತೊಲಿ ಮತ್ತು ಸುಲಿದ ಬಳ್ಳೊಳ್ಳಿ ೫ ತೊಲಿ ಕೂಡಿಸಿ ಕುಟ್ಟಿ, ರವದಿಯಲ್ಲಿ ತುಂಬಿ, ಒಲೆಯ ಮೇಲೆ ಮಣ್ಣಹಂಚಿನೊಳಗಿಟ್ಟು ಬಳ್ಳೊಳ್ಳಿಯು ಸುಟ್ಟ ಮೇಲೆ ಇಂಗಳೀಕ ತಕ್ಕೊಂಡು ಅರೆದು ಮತ್ತೆ ಬಳ್ಳೊಳ್ಳಿಯ ರವದಿಯಲ್ಲಿ ತುಂಬಿ ಮತ್ತೆ ಮಣ್ಣಹಂಚಿನೊಳಗೆ ಹಾಕಿ ಬಳ್ಳೊಳ್ಳಿಯು ಸುಡುವ ವರೆಗೆ ಹುರಿಯಬೇಕು. ಈ ಪ್ರಕಾರ ೪೦ ತೊಲಿ ಬಳ್ಳೊಳ್ಳಿಯು ಸುಟ್ಟು ಇಂಗಳೀಕದ ಪಾಕವಾಯಿ

ತೆಂದರೆ ಅದನ್ನು ಸೀಸೆಯಲ್ಲಿ ತುಂಬಿಡಬೇಕು. ಅದನ್ನು ಒಂದು ಗುಂಜಿಯಷ್ಟು ಅಲ್ಲದರಸ, ಬಿಳೊಳ್ಳಿಯ ರಸ, ಜೇನುತುಪ್ಪಗಳಲ್ಲಿ ಹಾಕಿ ಕೊಡಬೇಕು. ಹಲ್ಲು ಗಿಟಕಿರಿದಿದ್ದರೂ ಸನ್ನಿಪಾತವು ಶಮನವಾಗುವದು.

೧೬ ಮೂರೇಣಿನ ಕಳ್ಳಿಯ ಬಡ್ಡಿಯನ್ನು ಸುಟ್ಟು ಭಸ್ಮ ಮಾಡಿ ಅದನ್ನು ಮೂರು ಬೆರಳಿನ ಚಿಮುಟಿಗೆಯಷ್ಟು ಬಿಸಿನೀರಿನೊಡನೆ ಕೊಡುವದು. ಸನ್ನಿಪಾತ ಮತ್ತು ನಾಳಗೂದಗಳು ಅದರಿಂದ ಗುಣವಾಗುತ್ತವೆ.

೧೭ 'ಘೋರಸನ್ನಿಪಾತಕ್ಕೆ ಆನಂದಭೈರವ ಮಾತ್ರೆ:— ಇಂಗಳೀಕ, ತಾಮ್ರಭಸ್ಮ, ಒಳೆಗಾರ, ಗಂಧಕ, ಚಿತ್ರಮೂಲ, ನೇಪಾಳದ ಬೇರು, ಕರೇಮದ್ದಿನ ಬೀಜ ಇವನ್ನು ಸಮಪ್ರಮಾಣದಿಂದ ತಕ್ಕೊಂಡು ಕಾಡಿಗ್ಗರಗಿನ ರಸದಲ್ಲಿ ೭ ಭಾವನೆ ಕೊಡಬೇಕು; ಮತ್ತು ೭ ದಿವಸ ಅರೆಯಬೇಕು. ಬಳಿಕ ಗುಲಗಂಜಿಯಷ್ಟು ಮಾತ್ರೆ ಮಾಡಬೇಕು. ಎಕ್ಕೀಬೇರಿನ ಕಾಢೆಯಲ್ಲಿ ಶುಂಠಿ, ಮೆಣಸು, ಹಿಪ್ಪಲಿಗಳ ಚಿಮುಟಿಗೆಯಷ್ಟು ಚೂರ್ಣ ಹಾಕಿ, ಅದರಲ್ಲಿ ಅಂಥದೊಂದು ಮಾತ್ರೆಯನ್ನು ಅರೆದು ಕೊಟ್ಟರೆ, ಘೋರಸನ್ನಿಪಾತ ಜ್ವರವು ಕಡಿಮೆಯಾಗಿ ಮಬ್ಬು ಇಳಿಯುತ್ತದೆ.

೧೮ ನಾಗಾರ್ಜುನ ಗುಟಿಕಾ:--ನೇಪಾಳದಬೇರು, ಸೀಸದಭಸ್ಮ, ಪಾರಜ, ಗಂಧಕ, ಸುಂಠಿ, ಮೆಣಸು, ಹಿಪ್ಪಲಿ, ಕಲ್ಲುಸಕ್ಕರಿ ಇವನ್ನೆಲ್ಲ ಸಮಭಾಗ ತಕ್ಕೊಂಡು ಅಲ್ಲದ ರಸದಲ್ಲಿ ಅರೆದು, ಗುಲಗಂಜಿಗಳಷ್ಟು ಗುಳಿಗೆ ಮಾಡಬೇಕು. ಅಲ್ಲದ ರಸದಲ್ಲಿ ಆ ಒಂದು ಗುಳಿಗೆಯನ್ನು ತೆಯ್ದು ಜೇನುತುಪ್ಪದೊಡನೆ ಕೊಟ್ಟರೆ ಸನ್ನಿಪಾತ, ತ್ರಿದೋಷ, ವಾಯುವಿಕಾರ-ಸಂಧಿಗತವಾಯುಗಳ ನಾಶವಾಗುವದು. ಪಥ್ಯ:—ಮೊಸರು ಅನ್ನ, ಮಜ್ಜಿಗೆ ಅನ್ನ.

೧೯ ವ್ಯಾಧಿಶೀಖಾಂಬರ ರಸ:--ಪಾರಜ, ಗಂಧಕ, ಒಳೆಗಾರ, ತ್ರಿಕಟು, ಜಾಪಾಳಕಾಯಿ ಇವನ್ನು ಸಮಪ್ರಮಾಣ ತಕ್ಕೊಂಡು ಪುಡಿ ಮಾಡಿ ತ್ರಿಫಳದ ಕಷಾಯದಲ್ಲಿ ಅರೆಯಬೇಕು. ೩ ದಿವಸ ಅರೆದು ಅವರೇಕಾಳಷ್ಟು ಮಾತ್ರೆ ಕಟ್ಟಿಡಬೇಕು. ಅಂಥದೊಂದು ಮಾತ್ರೆಯನ್ನು ಸಕ್ಕರೆಯೊಡನೆ ಕೊಟ್ಟರೆ, ಎಲ್ಲ ಬಗೆಯ ಜ್ವರಗಳಿಗೂ ಆತಂಕವಾಗುವದು. ಇದೇ ಮಾತ್ರೆಯನ್ನು ನೀರಿನಲ್ಲಿ ತೆಯ್ದು, ರೋಗಿಗೆ ಅಂಜನ ಮಾಡಿದರೆ ಕೇವಲ ಮರಣೋನ್ಮುಖನಾಗಿದ್ದರೂ ೨ ಗಳಿಗೆಯ ವರೆಗಾದರೂ ಬದುಕುತ್ತಾನೆ.

೨೦ ಸನ್ನಿಪಾತಜ್ವರ ಮತ್ತು ನವಜ್ವರ:—ಕರೇ ಚಿತ್ರಮೂಲ ೧ ತೊಲಿ, ಶುಂಠಿ, ಮೆಣಸು, ಹಿಪ್ಪಲಿ ೧-೧ ತೊಲಿ ಇವನ್ನೆಲ್ಲ ಎಕ್ಕಿಯ ಹೂವಿನೊಳಗಿನ ಮಕರಂದದ ರಸದಲ್ಲಿ ಮತ್ತು ನುಗ್ಗೀರಸದಲ್ಲಿ ಅರೆದು ಕಡಲೇಕಾಳಷ್ಟು ಗುಳಿಗೆ

ಮಾಡಿಡಬೇಕು. ದಿನಾಲು ಎರಡೂ ಹೊತ್ತು ೧-೧ ಗುಳಿಗೆಯಂತೆ ಅಲ್ಲದರಸ ದಲ್ಲಿ ತೆಯ್ದು ಜೇನತುಪ್ಪ ಇಲ್ಲವೆ ಸಕ್ಕರೆ ಕೂಡಿಸಿ ಕೊಟ್ಟರೆ ಗುಣವಾಗುವದು. ಪಥ್ಯ: ಹುಳ್ಳೀಕಾಟ ಮತ್ತು ಬಿಸಿನೀರು.

೨೧ ಚಂಡಮಾರ್ತಂಡರಸ:--ತ್ರಿದೋಷವಾತ, ಸನ್ನಿಪಾತಗಳಿಗೆ ಲೋಹ ಭಸ್ಮ, ಗಂಧಕ, ಇಂಗಳೀಕ ಇವು ಶುದ್ಧವಾದವುಗಳನ್ನು ಸಮಭಾಗ ತಕ್ಕೊಂಡು ಕಬ್ಬಿಣದ ಸವುಟಿನಲ್ಲಿ ಹಾಕಿ ಅದನ್ನು ದೀಪದ ಮೇಲೆ ಹಿಡಿಯಬೇಕು. ಗಂಧ ಕವು ಕರಗಿತೆಂದರೆ ತೆಗೆದು ಗುಲಗಂಜಿಯಷ್ಟು ಮಾತ್ರೆ ಮಾಡಿಡಬೇಕು. ಅಂಥ ದೊಂದು ಮಾತ್ರೆಯನ್ನು ಅಲ್ಲದ ರಸ, ಜೇನುತುಪ್ಪ, ಬಳ್ಳೊಳ್ಳಿ ರಸ ಇವುಗಳೊ ಡನೆ ಕೊಡಬೇಕು; ಇಲ್ಲವೆ ಅಲ್ಲ ಇಲ್ಲವೆ ಶುಂಠಿ, ಕೊಳಂಜನ, ಅಜ್ವಾನ, ಹಿಪ್ಪಲೀ ಬಳ್ಳಿಯ ಗಂಟು, ನುಗ್ಗೀತೊಟೆ ಇವುಗಳನ್ನು ನೀರು ಹಾಕಿ ಅರೆದು ರಸ ತೆಗೆದು ಬಿಸಿಮಾಡಿ ಕೊಡತಕ್ಕದ್ದು.

೨೨ ದೇವದಾರು, ಅರಿಷಿಣ, ಅಂಬೇಹಳದಿ, ಬೇವಿನತಡ್ಡಿ, ತ್ರಿಫಳ, ಜೇಕಿನಗಡ್ಡಿ, ಕಟುಕರೋಣಿ, ಕಹಿಪಡುವಲ ಇವುಗಳ ಅಷ್ಟಮಾಂಶ ಕಷಾಯ ಮಾಡಿ ಕೊಟ್ಟರೆ, ಎಂಥ ಘೋರ ಸನ್ನಿಪಾತವಿದ್ದರೂ ನಾಶವಾಗುತ್ತದೆ.

೨೩ ತ್ರಿಕಟು, ತ್ರಿಫಳ, ಕೋಡುಮುರುಕ, ಕತ್ತಿಕರಬು, ಕಲ್ಲುಸಬ್ಬ ಸಿಗಿ, ಬೇವು, ಅಮೃತಬಳ್ಳಿ, ನೆಲಬೇವು, ಕಹಿಪಡುವಲ, ಕಟುಕರೋಣಿ, ಹವೀಜ, ಜೇಕಿನಗಡ್ಡೆ, ಅಡಸಾಲ ಇವನ್ನೆಲ್ಲ ಪ್ರತಿಯೊಂದು ಕಾಲುತೊಲಿ ತಕ್ಕೊಂಡು ಅಷ್ಟಮಾಂಶ ಕಷಾಯ ಮಾಡಿ ಆರಿದ ಮೇಲೆ ಜೇನುತುಪ್ಪ ಹಾಕಿ ಕೊಡಬೇಕು. ೭ ದಿವಸ, ಎರಡು ವೇಳೆ. ಇದರಿಂದ ಸನ್ನಿಪಾತವೂ ಗುಣವಾಗುವದು.

೨೪ ಸನ್ನಿಪಾತ ವಾಯುವಿಗೆ ಅಂಜನ:—ಮೆಣಸು, ಬಿಳೀಸಾಸುವೆ, ವಾಯುವಡಂಗ, ಬಜೆ, ಕೋಷ್ಟ, ತುಳಸಿ ಇವನ್ನೆಲ್ಲ ಹೋತಿನ ಉಚ್ಚಿಯೊಳಗೆ ಅರೆದು ಗುಳಿಗೆ ಮಾಡಿಡಬೇಕು. ಪ್ರಸಂಗದಲ್ಲಿ ನೀರಲ್ಲಿ ತೆಯ್ದು ಅಂಜನ ಮಾಡಿ ದರೆ ಸನ್ನಿಪಾತವಾಯುವು ಇಳಿಯುತ್ತದೆ.

೨೫ ಎರಡನೇ ಅಂಜನ:—ಪಾರಜ, ಸುಣ್ಣ, ಒಡಿಗನ ಮನೆಯೊಳಗಿನ ಇಲ್ಲಾಣ ಇವನ್ನೆಲ್ಲ ಪ್ರತ್ಯೇಕ ಅರ್ಧತೊಲಿ, ಶುದ್ಧ ಜಾಪಾಳಕಾಯಿ ೩ತೊಲಿ, ಮೆಣಸು ೨ ತೊಲಿ, ಸುಲಿದ ಔಡಲ ತಿಳಲು ೩ ತೊಲಿ ಇವುಗಳನ್ನೆಲ್ಲ ಕುಟ್ಟಿ ಚೂರ್ಣಮಾಡಿ ಅವುಗಳಲ್ಲಿ ಪಾರಜ ಮತ್ತು ಸುಣ್ಣ ಕೂಡಿಸಿ ಅರೆದು ಅಳಿಕ ಅದ ನ್ನೆಲ್ಲ ಲಿಂಬೀಹುಳಿಯಲ್ಲಿ ಅರೆದು ಜೋಳದಕಾಳಷ್ಟು ಗುಳಿಗೆ ಮಾಡಿಡಬೇಕು. ಪ್ರಸಂಗದಲ್ಲಿ ಅಂಥದೊಂದು ಗುಳಿಗೆಯನ್ನು ಲಿಂಬೀಹುಳಿಯಲ್ಲಿ ತೆಯ್ದು ಅಂಜನ ಮಾಡಬೇಕು. ಇದರಿಂದ ಸನ್ನಿಪಾತ ವಾಯು, ಉನ್ಮತ್ತವಾಯು, ಸರ್ವ

ವಿಷಗಳು ಇಳಿಯುತ್ತವೆ. ಬಾಳಂತಿಯ ಮಂದವಾಯುವೂ ಇಳಿಯುತ್ತದೆ. ಅಲ್ಲದೆ ಇರುಳುಗಣ್ಣು, ಕಣ್ಣುಶೂಲಿ, ಭೂತಬಾಧೆ, ಶೀತಜ್ವರ ಇವುಗಳೆಲ್ಲ ಖಂಡಿತ ವಾಗಿ ಗುಣವಾಗುತ್ತವೆ.

೨೬ ತಂದ್ರಾ ಇಲ್ಲವೆ ಮೂರ್ಛೆ ಬಂದರೆ:—ಕಸ್ತೂರಿ ಮತ್ತು ಮೆಣಸು ಇವುಗಳನ್ನು ಕುದುರೆಯ ಜೊಲ್ಲಿನಲ್ಲಿ ತೆಯ್ದು ಅಂಜನಮಾಡಿದರೆ ಗುಣವಾಗುವದು.

೨೭ ವಾಯುವಾಗಿ ಸ್ಮೃತಿದಪ್ಪಿದರೆ:—ಬಿಳೇ ಉಳ್ಳೇಗಡ್ಡಿಯನ್ನು ಸುಟ್ಟು ನಟ್ಟನಡುವೆ ಹೆಚ್ಚಿ, ಬಿಸಿ ಇರುವಾಗಲೆ ಎರಡೂ ಮೆಲಕುಗಳ ಮೇಲೆ ಅವನ್ನಿಟ್ಟು ಮೇಲೆ ಅರಿವೆಯಿಂದ ಚೆನ್ನಾಗಿ ಬಿಗಿಯಬೇಕು. ಇದೊಂದು ತರದ ಬರೆಯೇ ಆಗಿದೆ. ಇದರಿಂದ ರೋಗಿಯು ಹುಷಾರಾಗುವನು.

೨೮ ಉತ್ತಮ ಹೇಮಗರ್ಭ, ವಾತವಿಧ್ವಂಸ, ಪ್ರತಾಪಲಂಕೇಶ್ವರ, ಮಹಾಮೃತ್ಯುಂಜಯ, ಪಂಚಸೂತ ಇವುಗಳೊಳಗಿನ ಯಾವುದೊಂದು ಮಾತ್ರೆ ಯನ್ನು ಅಲ್ಲದ ರಸ ಮತ್ತು ಜೇನತುಪ್ಪಗಳಲ್ಲಿ ತೆಯ್ದು ನೆಕ್ಕಿಸಬೇಕು.

೨೯ ಸನ್ನಿಪಾತಜ್ವರಕ್ಕೆ ಉತ್ತಮ ಕಷಾಯ:—ಕಟುಕರೋಣಿ, ನೆಲ ಬೇವು, ಕಲ್ಲುಸಬ್ಬಸಿಗಿ, ಅಮೃತಬಳ್ಳಿ, ಕಚೂರ, ರಾಸನೆ, ಹಿಪ್ಪಲಿ, ತಾವರೆಗಡ್ಡೆ, ಮದರಂಗಿ, ನೆಲಗುಳ್ಳಬೇರು, ದೇವದಾರು, ಶುಂಠಿ, ಅಳಲೀಕಾಯಿ, ನೆಲಜಂಗಳ ಒಂದೆಲಗ(ಬ್ರಾಹ್ಮಿ) ಇವುಗಳ ಅಷ್ಟಮಾಂಶ ಕಷಾಯಮಾಡಿ ಸೋಸಿ ಕೊಡಬೇಕು. ಇದರಿಂದ ತ್ರಿದೋಷ, ಹಗಲುನಿದ್ದೆ, ರಾತ್ರಿ ನಿದ್ರಾನಾಶ, ತೃಷೆ, ಕೆಮ್ಮು, ಶೋಕ, ದಾಹ, ದಮ್ಮುಗಳ ನಾಶವಾಗುತ್ತದೆ. ಇದೇ ಕಾಢೆಯಲ್ಲಿ ಜೇನತುಪ್ಪ ಮತ್ತು ಹಿಪ್ಪಲಿಪುಡಿ ಹಾಕಿಕೊಟ್ಟರೆ ಜೀರ್ಣಜ್ವರ ಮತ್ತು ವಿಷಮಜ್ವರಗಳೂ ಹೋಗುತ್ತವೆ.

೩೦ ಅಡಸಾಲದ ಹಣ್ಣಾದ ಎಲೆಗಳಿಗೆ ಉಗೆ ಕೊಟ್ಟು ರಸ ತೆಗೆದು, ಅದ ರಲ್ಲಿ ಖಾರಗೆಣಸಿನ ಮತ್ತು ತುಳಸೀರಸ ಹಾಕಿ, ಜ್ಯೇಷ್ಠಮಧುವನ್ನು ತೇಯ್ದು ಜೇನತುಪ್ಪ ಕೂಡಿಸಿ ಕೊಡಬೇಕು.

೩೧ ದಶಮೂಲ, ತ್ರಿಫಳಾ, ತ್ರಿಕಟು, ನೆಲಬೇವು ಅಮೃತಬಳ್ಳಿ, ದೇವ ದಾರು, ಬಾಳಹಿರಡಾ, ಹಿಪ್ಪಲಿ, ಅರಿಷಿಣ, ಮರಅರಿಷಿಣ, ಔಡಲಬೀಜ, ರಾಸನೆ, ಎಕ್ಕಿಬೇರು, ವಾಯುವಡಂಗ, ಕಟುಕರೋಣಿ ಇವನೆಲ್ಲ ಪ್ರತ್ಯೇಕ ಚವಲೀ ತೂಕ ಹಾಕಿ ೪೦ ತೊಲಿ ನೀರಿನೊಡನೆ ಅಷ್ಟಮಾಂಶ ಕಷಾಯ ಮಾಡಿ ಕೊಡಬೇಕು. ರಾತ್ರಿ ಅದನ್ನೇ ನಿಕಾಢೆ ಮಾಡಿ ಕೊಡಬೇಕು. ಇದರಿಂದ ಘೋರ ಸನ್ನಿಪಾತ ಜ್ವರವೂ ಶಮನವಾಗುವದು.

೩೨ ಸನ್ನಿಪಾತದಲ್ಲಿ ಬರುವ ಮೂರ್ಛೆಗೆ:—ಮರಅರಿಷಿಣ, ಜೇಕಿನಗಡ್ಡೆ, ಕಟುಕರೋಣಿ, ತ್ರಿಫಳ, ನೆಲಗುಳ್ಳಬೇರು, ಕಹಿಪಡವಲ, ಅರಿಷಿಣ, ಬೇವು ಇವು ಗಳ ಕಷಾಯ ಕೊಡಬೇಕು.

೩೩ ಅಂಜನ:—ಬಿಳೇ ಸಾಸಿವೆ, ಗೋಮೂತ್ರ, ಹಿಪ್ಪಲಿ, ಮೆಣಸು, ಸೈಂಧಲವಣ, ಒಳ್ಳೆಳ್ಳಿ, ಮನಸೀಲ, ಬಜೆ ಇವನ್ನೆಲ್ಲ ಸಮಭಾಗ ತಕ್ಕೊಂಡು ೧ ದಿವಸ ಅರೆದು ಗುಳಿಗೆ ಮಾಡಿಡಬೇಕು. ಇದರ ಅಂಜನ ಮಾಡುವದರಿಂದ ಎಚ್ಚರದಪ್ಪಿದಂಥ ರೋಗಿಗೆ ಕೂಡ ಹುಷಾರಿಯಾಗುವದು.

೩೪ ನಸ್ಯಾ:—ಇಪ್ಪಿಯ ಅಂಟು, ಸೈಂಧಲವಣ, ಬಜೆ, ಮೆಣಸು, ಹಿಪ್ಪಲಿ ಇವನ್ನೆಲ್ಲ ಸಮಪ್ರಮಾಣ ತಕ್ಕೊಂಡು ನೀರಲ್ಲಿ ಅರೆದು, ಮೂಗಿನೊಳಗೆ ಒಂದೆರಡು ಹನಿ ಬಿಡಬೇಕು. ಸ್ಮೃತಿದಪ್ಪಿದವನು ಎಚ್ಚರಾಗುತ್ತಾನೆ.

೩೫ ಕಿರಿಶಿವಣೆ, ಜೆಳ್ಳಬೇರು, ದುಷ್ಟಪುಚೆಟ್ಟು, ಹಿಪ್ಪಲಿ, ಜೇನುತುಪ್ಪ ಇವುಗಳ ಲೇಹ್ಯಮಾಡಿ ನೆಕ್ಕಿಸಬೇಕು. ಇದರಿಂದ ಶ್ವಾಸ, ಕೆಮ್ಮು, ಜ್ವರ, ಕಫ ಇವುಗಳ ನಾಶವಾಗುತ್ತದೆ.

೩೬ ಗಂಟುಭಾರಂಗಿ, ನೆಲಬೇವು, ಬೇವು, ಜೇಕಿನಗಡ್ಡೆ, ಕಟುಕರೋಣಿ ಬಜೆ, ಶುಂಠಿ, ಮೆಣಸು, ಹಿಪ್ಪಲಿ, ಅಡಸಾಲ, ಕಾಡಕವಡಿ, ರಾಸನೆ, ನೆಲಇಂಗಳ, ಕಹಿಪಡವಲ, ದೇವದಾರು, ಅರಿಷಿಣ, ಬಿಳೇಪಾದರಿ, ತುಮರಿ, ಒಂದೆಲಗ, ಮರಅರಿಷಿಣ, ಅಮೃತಬಳ್ಳಿ, ತಿಗಡಿ, ಅತಿಬಜೆ, ಕೊಳಂಜನ, ಮದರಂಗಿ, ತೊಟ್ಟಿಲಕಾಯಿ, ಗುಕ್ಕ, ಕೋಡಮುರಕನಬೀಜ, ಅಳಲೀಕಾಯಿ, ತಾರೀ ಕಾಯಿ, ನೆಲ್ಲೀಚೆಟ್ಟು, ಕಚೋರ ಇವನ್ನೆಲ್ಲ ಸಮಭಾಗ ತಕ್ಕೊಂಡು ಕಾಢೆ ಮಾಡ ಬೇಕು. ಇದಕ್ಕೆ (ಬತ್ತೀಸಿ) ೩೨ ರ ಕಷಾಯವೆನ್ನುವರು. ಈ ಕಷಾಯ ದಿಂದ ೧೩ ಬಗೆಯ ಸನ್ನಿಪಾತಗಳೂ, ಶೂಲಿ, ಕೆಮ್ಮು, ಬಿಕ್ಕು, ಶ್ವಾಸ, ಗುದ ರೋಗ, ಆಧ್ಮಾನ, ಉಪಸ್ತಂಭ, ಅಂತ್ರವೃದ್ಧಿ, ಗಲರೋಗ, ಅರುಚಿ, ಎಲ್ಲ ಸಂಧಿ ಗ್ರಹ ಇವುಗಳ ನಾಶವಾಗುತ್ತದೆ.

೩೭ ನೆಲಬೇವು, ಒಳ್ಳೆಳ್ಳಿ, ಮಂಗರವಳ್ಳಿ, ಗಂಟುಭಾರಂಗಿ, ಅತಿಬಜೆ ಇವನ್ನೆಲ್ಲ ಸಮಭಾಗ ತಕ್ಕೊಂಡು ಗೋಮೂತ್ರದಲ್ಲಿ ಕಷಾಯ ಮಾಡಿ ಕೊಡ ಬೇಕು. ಇದು ಅತಿ ತೀಕ್ಷ್ಣವಾಗಿರುತ್ತದೆ.

೩೮ ಜ್ವರದಲ್ಲಿ ನಾಲಿಗೆಗೆ ಮುಳ್ಳು ಬಂದರೆ ಇಲ್ಲವೆ ನಾಲಿಗೆ ಒಡೆದರೆ:— ದ್ರಾಕ್ಷಿಯನ್ನು ಜೇನುತುಪ್ಪದಲ್ಲಿ ಅರೆದು ತುಪ್ಪ ಮಿಶ್ರ ಮಾಡಿ ನಾಲಿಗೆಗೆ ತಿಕ್ಕ ಬೇಕು; ಗುಣವಾಗುತ್ತದೆ.

೩೯ ಗಂಟಲು ಬಾವು ಬಂದರೆ:—ಶುಂಠಿ, ದೇವದಾರು, ಚಿತ್ರಮೂಲ, ರಾಸನೆ ಇವುಗಳ ಲೇಪದಿಂದ ಬಾವು ಇಳಿಯುತ್ತದೆ.

೪೦ ಕಫ ಹೆಚ್ಚಾದರೆ:—ಮಾರಗೆಣಸಿನ ರಸ, ಸೈಂಧಲವಣ, ಶುಂಠಿ, ಮೆಣಸು, ಹಿಪ್ಪಲಿ ಇವುಗಳನ್ನರೆದು ಕಲ್ಲುಸಕ್ಕರೆಯ ಪಾಕದಲ್ಲಿ ಗುಳಿಗೆ ಮಾಡಿಟ್ಟುಕ

ಬೇಕು. ಪ್ರಸಂಗದಲ್ಲಿ ಇದನ್ನು ಬಾಯಲ್ಲಿ ಹಿಡಿದು, ಬಂದ ಉಗುಳನ್ನು ಉಗುಳುತ್ತಿರಬೇಕು. ಇದರಿಂದ ಪಕ್ಕಡಿ, ಎದೆ, ಕುತ್ತಿಗೆ, ಗಂಟಲು, ತಲೆಗಳಲ್ಲಿ ಸಂಗ್ರಹವಾಗಿದ್ದ ಕಫವೆಲ್ಲ ಹೊರಟು ಹೋಗಿ, ಶರೀರವು ಹಗುರಾಗುವದು.

೪೧ ದಶಮೂಲದ ಕಷಾಯದಲ್ಲಿ ಭತ್ತದ ಅರಳು ಹಾಕಿ ಆರಿದ ಮೇಲೆ ಕೊಡಬೇಕು. ಇದರಿಂದ ಪಾಚನ ದೀಪನ ಮತ್ತು ಉಷ್ಣತೆಗಳು ಹೆಚ್ಚಿ ಸನ್ನಿಪಾತದ ಕಸುವು ಕಡಿಮೆಯಾಗುತ್ತದೆ.

೪೨ ನೆಲಿಂಗಳ, ನೆಗ್ಗಿ, ನೆಲಗುಳ್ಳ ಇವುಗಳ ಕಷಾಯದಿಂದ ಸಿದ್ಧ ಮಾಡಲ್ಪಟ್ಟ ಆಹಾರವನ್ನು ಕೊಡತಕ್ಕದ್ದು. ಇದರಿಂದ ದೋಷಗಳ ಶಮನವಾಗಿ ಅಗ್ನಿ, ಬಲಗಳ ವೃದ್ಧಿಯಾಗುತ್ತದೆ. ತ್ರಿದೋಷಯುಕ್ತ ರೋಗಿಗಂತೂ ಈ ಉಪಾಯವು ಬಲು ಹಿತಕರವಾಗಿದೆ.

೪೩ ಅರ್ಧನಾರೀ ನಟೇಶ್ವರ:—ಪಾರದ, ಗಂಧಕ, ನೇಪಾಳದ ಬೀಜ, ಬಳೆಗಾರ ಇವು ಶುದ್ಧವಾದವುಗಳನ್ನು ಸಮಭಾಗ ತಕ್ಕೊಂಡು ಅರೆದು, ವಸ್ತ್ರಗಾಳಿ ಮಾಡಿ, ಅದನ್ನು ಒಂದು ವಿಷಯುಕ್ತ ಸತ್ತ ಹಾವಿನ ಬಾಯಲ್ಲಿ ಹಾಕಿ, ಒಂದು ಗಡಿಗೆಯಲ್ಲಿ ಮೊದಲು ಉಪ್ಪು ಹಾಕಿ, ಅದರ ಮೇಲೆ ಆ ಸರ್ಪವನ್ನಿಟ್ಟು ಅದರ ಮೇಲೆ ಉಪ್ಪು ತುಂಬಿ ಗಡಿಗೆಯ ಮೇಲೆ ಮುಚ್ಚಳವನ್ನಿಟ್ಟು, ಆ ಗಡಿಗೆಯನ್ನು ನಾಲ್ಕು ಪ್ರಹರಗಳ ವರೆಗೆ ತೀಕ್ಷ್ಣವಾದ ಉರಿಯ ಮೇಲಿಡಬೇಕು. ಬಳಿಕ ಅದು ತನ್ನಷ್ಟಕ್ಕೆ ತಾನೇ ಆರಿ ತಣ್ಣಗಾಯಿತೆಂದರೆ ಆ ಔಷಧವನ್ನು ತಕ್ಕೊಂಡು ಅರೆದಿಡಬೇಕು. ಸನ್ನಿಪಾತದ ರೋಗಿಗೆ ಕಾಲು ಇಲ್ಲವೆ ಅರ್ಧ ಗುಂಜಿಯಷ್ಟು ಔಷಧವನ್ನು ಒಂದು ಮೂಗಿನ ಹೊರಳೆಯಲ್ಲಿ ಹಾಕಿದರೆ ಆ ಭಾಗದ ಜ್ವರವು ಕೂಡಲೆ ಇಳಿಯುವದು. ಎರಡೂ ಹೊರಳೆಗಳಲ್ಲಿ ಹಾಕಿದರೆ, ಅರ್ಧಗಳಿಗೆಯಲ್ಲೇ ಎಲ್ಲ ಜ್ವರವೂ ಇಳಿಯುವದು; ಆದರೆ ಈ ಔಷಧವನ್ನುಪಯೋಗಿಸಿಕೊಂಡ ರೋಗಿಯು ಮುಂದೆ ಎಂಟು ದಿನಗಳ ವರೆಗೆ ಸ್ವಸ್ಥವಾಗಿ ಬಿದ್ದುಕೊಂಡಿರತಕ್ಕದ್ದು; ಮತ್ತು ಪಥ್ಯದ ಕಡೆಗೆ ಹೆಚ್ಚು ಲಕ್ಷ್ಯಗೊಡತಕ್ಕದ್ದು.

---

## ೧೯ ಸನ್ನಿಪಾತಜ್ವರದೊಳಗೆ ವಾಯುವಾದರೆ ಉಪಾಯಗಳು.

೧ ನುಗ್ಗೀತೊಗಟೆಯ ರಸ, ಕಾಡಿಗ್ಗರಗಿನ ರಸ, ಲಕ್ಕೀ ರಸ, ತುಳಸೀ ರಸ, ಅಲ್ಲದ ರಸ ಇವನ್ನು ಪ್ರತ್ಯೇಕ ಅರ್ಧ ತೊಲೆ ತಕ್ಕೊಂಡು ಅದರಲ್ಲಿ ವಾತವಿಧ್ವಂಸ ಮಾತ್ರೆಯನ್ನು ಅರ್ಧ ಗುಂಜಿಯಷ್ಟು ತೆಯ್ದು ಜೇನುತುಪ್ಪ ಹಾಕಿ ಕೊಡಬೇಕು.

೨ ಸನ್ನಿಪಾತ ಜ್ವರಕ್ಕೆ ಮಾತ್ರೆಗಳು:—ಕಸ್ತೂರಿ, ಕೇಶರ, ಲವಂಗ, ಜಾಜೀಕಾಯಿ, ಹಿಪ್ಪಲಿ ಇವನ್ನು ಸಮಭಾಗ ತಕ್ಕೊಂಡು ಖಾರಗೆಣಸಿನ ರಸದಲ್ಲಿ ೧೦ ಪ್ರಹರಗಳ ವರೆಗೆ ಅರೆಯಬೇಕು. ನಂತರ ೨ ಗುಂಜಿಯಷ್ಟು ಮಾತ್ರೆ ಮಾಡಿಟ್ಟು, ಶಕ್ತಿಮಾನ, ವಯೋಮಾನಗಳಂತೆ ಅರ್ಧ ಇಲ್ಲವೆ ಇಡೀ ಮಾತ್ರೆಯನ್ನು ಅಲ್ಲದ ರಸದಲ್ಲಿ ತೆಯ್ದು ಜೇನುತುಪ್ಪ ಮಿಶ್ರಮಾಡಿ ಕೊಡಬೇಕು. ಬಹುಶಃ ಒಂದೇ ಗುಳಿಗೆಯಿಂದಲೇ ಜ್ವರವಿಳಿಯುತ್ತದೆ; ಮತ್ತು ವಾಯು ಕಡಿಮೆಯಾಗುತ್ತದೆ. ಸನ್ನಿಪಾತಕ್ಕೆ ಇದು ಶ್ರೇಷ್ಠವಾದ ಮಾತ್ರೆಯಾಗಿದೆ.

೩ ಅಮೃತ ಸಂಜೀವಿನಿ ಸರ್ವಾಂಜನ:—(ನಾನಾ ಪ್ರಕಾರದ ವಾಯುಗಳಿಗೆ) ಜಾಪಾಳ ೧೦ ಭಾಗ, ಮೆಣಸು ೧ ಭಾಗ, ಹಿಪ್ಪಲಿ ೧ ಭಾಗ, ಪಾರಜ ೧ ಭಾಗ ಇವುಗಳನ್ನು ಕುಟ್ಟಿ ನೀರಲ ಹಾಗು ಲಿಂಬೀರಸಗಳಲ್ಲಿ ಬೇರೆ ಬೇರೆ ೭ ದಿವಸಗಳಲ್ಲಿ ಅರೆಯಬೇಕು. ಬಳಿಕ ಗುಳಿಗೆ ಕಟ್ಟಿಟ್ಟು, ಪ್ರಸಂಗದಲ್ಲಿ ಜೇನುತುಪ್ಪ ಮತ್ತು ಖಾರಗೆಣಸಿನ ರಸ ಇಲ್ಲವೆ ತುಳಸೀ ರಸ, ಇಲ್ಲವೆ ಬಿಸಿ ನೀರಲ್ಲಿ ತೆಯ್ದು ಅಂಜನ ಮಾಡತಕ್ಕದ್ದು.

೪ ಬಂಗಾರದ ವರ್ಕಿನ ೧೦ ಪಾನುಗಳು, ಚಿಗರೆಯ ಕಚ್ಚಾ ಕೋಡು ಅರ್ಧತೊಲಿ, ಔಡಲಬೇರು ೨ ತೊಲಿ, ಶುಂಠಿ ೧ ತೊಲಿ, ನೀರು ೧೨೦ ತೊಲಿ ಇವುಗಳ ಅಷ್ಟಮಾಂಶ ಕಷಾಯ ಮಾಡಿ ಸೋಸಿ ಒಂದು ಸೀಸೆ ತುಂಬಿಡಬೇಕು. ಸೋಸುವದಕ್ಕೆ ತಂತಿಯ ಜರಡಿಯನ್ನು ಪಯೋಗಿಸಬಹುದು. ಸ್ಮೃತಿತಪ್ಪಿದ, ಬಡಬಡಿಸುವ, ವಾಯುವಿನಿಂದ ಗುದುಮುರಿಗೆ ಹಾಕುವ ಸನ್ನಿಪಾತದ ರೋಗಿಗಳಿಗೆ ಅರ್ಧಪ್ರಹರದ ಅಂತರದಿಂದ ೩ ಸಾರೆ ಕುಡಿಸಿದರೆ ಅವೆಲ್ಲ ದುಶ್ಚಿಹ್ನಗಳು ಲೋಪವಾಗುತ್ತವೆ. ೩ ಸಾರೆ ಕೊಟ್ಟರೂ ಗುಣದೋರದಿದ್ದರೆ ಒಂದು ಪ್ರಹರದ ನಂತರ ಪುನಃ ಆ ಕಷಾಯ ಕೊಡಬೇಕು. ಈ ಪ್ರಯೋಗವು ಅನುಭವಸಿದ್ಧವಿದೆ. ಬಂಗಾರದ ವರ್ಕಿನ ಬದಲು ಕೆಲವರು ಬಂಗಾರದ ಪಾಟ್ಲಿ ಇಲ್ಲವೆ ಪುತ್ಥಳಿಗಳನ್ನು ಹಾಕುತ್ತಿರುತ್ತಾರೆ; ಆದರೆ ವರ್ಕ ಹಾಕುವದೇ ಹೆಚ್ಚು ಗುಣಕಾರಕವಾಗಿದೆ.

೫ ಸಂಜ್ಞಾಪ್ರಬೋಧಾಂಜನ:—ಸಮುದ್ರಶೋಕನ ಬೀಜ, ಅಂಟಾಳಕಾಯಿ, ಭೂತಕೇಶೀ, ಮಾವಳ್ಳಿಬೀಜ, ತುತ್ತೆ ಸಮಭಾಗ ತಕ್ಕೊಂಡು ಅರೆದು ಅರಿವೆಯಲ್ಲಿ ಸೋಸಿದ ಪುಡಿಯನ್ನು ಮೂಗಿನಲ್ಲಿ ಊದಬೇಕು. ಇದರಿಂದ ವಾಯುವಾದ ಮನುಷ್ಯನು ಸ್ಮೃತಿಹೊಂದುವನು; ಮತ್ತು ಸನ್ನಿಪಾತ, ಶ್ಲೇಷ್ಮ, ಶಿರೋವ್ಯಥಾ ಇತ್ಯಾದಿಗಳು ಹೋಗುವವು. ಇದರ ಅಂಜನವನ್ನೂ ಮಾಡತಕ್ಕದು.

೬ ತ್ರಿಮೂರ್ತಿ ರಸ:—ಗಂಟುಭಾರಂಗಿ ೧೬ ಭಾಗ, ಕೋಳಿಕುಕ್ಕನ ಗಿಡ ೮ ಭಾಗ, ನೇಪಾಳದ ಬೇರು ೪ ಭಾಗ, ಪಾರಜ ೧ ಭಾಗ, ಗಂಧಕ ೧ ಭಾಗ ಇವನ್ನೆಲ್ಲ ಅಲ್ಲದ ರಸದಲ್ಲಿ ೭ ದಿನ ಅರೆದು, ೨ ಗುಲಗಂಜಿಯಷ್ಟು ಗುಳಿಗೆ ಕಟ್ಟಿ, ಅಂಥದೊಂದು ಗುಳಿಗೆಯನ್ನು ಚಿತ್ರಮೂಲ, ಹಿಪ್ಪಲಿ, ಜೇನು ತುಪ್ಪಗಳೊಡನೆ ಕೊಡಬೇಕು. ಇದಕ್ಕೆ ಪಥ್ಯವಿಲ್ಲ. ಮೊಸರು, ಅನ್ನ, ಸಕ್ಕರಿ, ತಣ್ಣೀರು, ಮಜ್ಜಿಗೇಅನ್ನ, ಸ್ನಾನ ಮುಂತಾದವುಗಳನ್ನು ಸಂಕೋಚವಿಲ್ಲದೆ ಮಾಡಬಹುದು. ಈ ಔಷಧದಿಂದ ೧೩ ಪ್ರಕಾರದ ಸನ್ನಿಪಾತಗಳೂ, ಹೊಟ್ಟೆ ಶೂಲಿ, ಬಾವು, ಸಾಮ-ನಿರಾಮಜ್ವರ, ತರುಣ ಜ್ವರ, ಜೀರ್ಣಜ್ವರಗಳೂ ಹೋಗುತ್ತವೆ.

೭ ಗೋವಿನಬಳ್ಳಿಯ ಪಂಚಾಂಗದ ಕಾಢೇದೊಳಗೆ ಹಿಪ್ಪಲೀಪುಡಿ ಹಾಕಿ ಕೊಡಬೇಕು.

೮ ಅಂಜನ:—ಕಾಗದಲಿಂಬೀಹಣ್ಣು ಹೆಚ್ಚಿ ಅದರಲ್ಲಿ ಜಾಪಾಳದ ಬೀಜ ಮತ್ತು ಮೆಣಸು ತುಂಬಿ ಆ ಹಣ್ಣನ್ನು ಕಟ್ಟಿ ೨ ತಿಂಗಳ ವರೆಗೆ ನೆಲದಲ್ಲಿ ಹುಗಿದಿಡ ತಕ್ಕದ್ದು. ನಂತರ ಹೊರಗೆ ತೆಗೆದು, ಆ ಔಷಧವನ್ನು ಮತ್ತೆ ಲಿಂಬೀಹುಳಿ ಯಲ್ಲಿ ಅರೆದು ಉದ್ದನ್ನ ಗುಳಿಗೆ ಮಾಡಿಡಬೇಕು. ಪ್ರಸಂಗದಲ್ಲಿ ಖಾರಗೆಣಸಿನ ಹಾಗು ಲಿಂಬೀಹಣ್ಣಿನ ರಸದಲ್ಲಿ ತೆಯ್ದು ಅಂಜನ ಮಾಡುವದು. ಇದರಿಂದ ಉನ್ಮಾದವಾಯು, ಸನ್ನಿಪಾತ, ಅಪಸ್ಮಾರ, ಪಟಕಿರೋಗ, ಚಳಿಚಳಿಯಾಗುವದು, ಹೆಚ್ಚು ಬೆವರು ಬರುವದು ಮುಂತಾದ ವಿಕಾರಗಳು ಹೋಗುವವು.

೯ ಪ್ರತಾಪ ಲಂಕೇಶ್ವರ:—ಹಸೇಉತ್ತರಾಣಿ ಮತ್ತು ಚಿತ್ರಮೂಲದ ಬೇರುಗಳನ್ನು ತಂದು ರಸ ತೆಗೆದು ಅದರಲ್ಲಿ ಶುದ್ಧಪಾರಜ, ಅಭ್ರಕಭಸ್ಮ, ಶುದ್ಧ ಇಂಗಳೀಕ, ಶುದ್ಧ ಹರದಾಳ ಮತ್ತು ಬಳೆಗಾರೆ ಇವುಗಳನ್ನು ಕುಟ್ಟಿ ೭ ದಿನಗಳ ವರೆಗೆ ಅರೆಯಬೇಕು. ನಂತರ ಅದಕ್ಕೆ ನೆಲಿತಾಳೇ ರಸದ ೩ ಭಾವನೆ ಕೊಟ್ಟು ಬಿಸಿಲಲ್ಲಿ ಒಣಗಿಸಬೇಕು. ಬಳಿಕ ದೀರ್ಘವರ್ತುಲಾಕಾರದ ಬಾಟಲಿಯಲ್ಲಿ ಅದನ್ನು ತುಂಬಬೇಕು. ಅದಕ್ಕೆ (ಸಾತವಾತ) ಅರಿವೆ, ಕೆಸರು, ಅರಿವೆ, ಕೆಸರು ಈ ರೀತಿ ೭ ಸಾರೆ ಕಟ್ಟಿ ಸೌಮ್ಯ ಬೆಂಕಿಯಿಂದ ಒಣಗಿಸಿ ತೆಗೆದು, ಅದರೊಳಗಿನ ಪಾರಜದಷ್ಟೇ ರೌಪ್ಯ ಭಸ್ಮ, ತಾಮ್ರ ಭಸ್ಮ, ತವರಿನ ಭಸ್ಮ, ಲೋಹ ಭಸ್ಮ ತಕ್ಕೊಂಡು ಮಧುತೇಗು, ಜೇಕಿನಗಡ್ಡೆ, ಚಿತ್ರಮೂಲ, ಗುಗ್ಗುಳ, ಕಲ್ಲಂಟು, ಹುಳಚುಕ್ಕ, ಇವನ್ನು ಸಮಭಾಗ ತಕ್ಕೊಂಡು ಅದರರ್ಧ ಭಾಗ ಶುದ್ಧ ನೇಪಾಳದಬೇರು ಇವುಗಳ ಕಷಾಯದ; ಸುಂಠಿ, ಮೆಣಸು, ಹಿಪ್ಪಲಿ ಇವುಗಳ ಕಷಾಯದ; ಮದುಗುಣಿಕೆಯ ರಸದ; ತ್ರಿಫಳದ ಕಷಾಯದ; ಹೊಗಚೀರಸದ ಮತ್ತು

ವಿಜಿಸದ ಪಿತ್ಥದ ಹೀಗೆ ೭ ಬೇರೆ ಬೇರೆ ಭಾವನೆ ಕೊಡಬೇಕು. ಬಳಿಕ ಅದಕ್ಕೆ ನೇಪಾಳದ ಬೇರಿನ ಧೂಪ ಕೊಡಬೇಕು. ತದನಂತರ ಸಮುದ್ರಶೋಕನ ಬೀಜದ ಕಷಾಯ, ಉತ್ತರಾಣೀ ಬೀಜದ ಕಷಾಯ, ಚಿತ್ರಮೂಲದ ಕಷಾಯ, ಮಾವಳ್ಳಿ ರಸ ಇದರಲ್ಲಿ ಅರೆದು, ಗುಲಗಂಜಿಯಷ್ಟು ಗುಳಿಗೆ ಮಾಡಿಡಬೇಕು. ಅಂಥದೊಂದು ಗುಳಿಗೆಯನ್ನು ಚಿತ್ರಮೂಲದ ಮತ್ತು ಖಾರಗೆಣಸಿನ ರಸದಲ್ಲಿ ಕೊಡುವದು. ಇದರಿಂದ ತೀವ್ರವಾದ ಹುಚ್ಚು-ಮಬ್ಬುಗಳೂ, ವಿಸ್ಮೃತಿಯೂ ನಾಶವಾಗುತ್ತವೆ. ನೆತ್ತಿಯ ಮೇಲೆ ಬ್ರಹ್ಮರಂಧ್ರದ ಸ್ಥಳದಲ್ಲಿ ಶಸ್ತ್ರದಿಂದ ಛೇದ ಮಾಡಿ, ಅದರಲ್ಲಿ ಈ ಗುಳಿಗೆಯ ಪುಡಿಯನ್ನು ಅಲ್ಲದ ರಸವನ್ನು ಹಾಕಿ ತಿಕ್ಕಬೇಕು ಹಲ್ಲು ಗಿಟಕಿರದಿದ್ದರೆ ಈ ಪ್ರಕಾರ ಮಾಡಬೇಕು. ತಲೆಯ ಮೇಲೆ ಬಹಳ ತಣ್ಣೀರು ಸುರುವಬೇಕು. *ಬೀಸಣಿಕೆಯಿಂದ ಗಾಳಿಹಾಕಬೇಕು. ರೋಗಿಗೆ ಉಣ್ಣುವ ಇಚ್ಛೆಯಾದರೆ ಮೊಸರೂ ಅನ್ನ ಸಕ್ಕರೆ ಉಣಬಡಿಸಬೇಕು. ಜೀರಿಗಿ ಪುಡಿಹಾಕಿದ ಮಜ್ಜಿಗೆಯನ್ನು ಕುಡಿಸಬೇಕು. ಹೀಗೆ ಮಾಡುವದರಿಂದ ಪಾರಜ ದಿಂದುಂಟಾಗುವ ದಾಹವು ಶಾಂತವಾಗುವದು. ಬಳಿಕ ಚಂದನ ಕರ್ಪೂರಗ ಳನ್ನು ಮೈಗೆ ಸವರಬೇಕು. ಸಂಪೂರ್ಣ ವಾತವಿಕಾರದವನಿಗೆ ಈ ಗುಳಿಗೆ ಯನ್ನು ಸೈಂಧಲವಣ, ಚಿತ್ರಮೂಲ ಮತ್ತು ಗುಗ್ಗುಳಗಳೊಡನೆ ಕೊಡಬೇಕು. ಕಾಮಣಿ, ಕ್ಷಯ, ಪಾಂಡುರೋಗದವರಿಗೆ ಹಿಪ್ಪಲಿ, ಸುವರ್ಣಮಾಕ್ಷಿಕ ಗಳೊಡನೆ ಕೊಡುವದು; ಮತ್ತು ಸರ್ವ ರೋಗಗಳಿಗೆ ರೋಗೋಕ್ತ ಅನುಪಾನ ದೊಡನೆ ಕೊಡತಕ್ಕದ್ದು. ಈ ಪ್ರತಾಪಲಂಕೇಶ್ವರ ಮಾತ್ರೆಯು ಎಲ್ಲ ಬಗೆಯ ಸನ್ನಿಪಾತಕ್ಕೂ ಪ್ರಶಸ್ತವಿರುತ್ತದೆ.

---

## ೨೦ ಕರ್ಣಮೂಲ.

ಲಕ್ಷಣ: —ಸನ್ನಿಪಾತ ಜ್ವರದಲ್ಲಿ ಅಥವಾ ತದನಂತರ ಕಿವಿಯ ಬೊಡ್ಡಿಗೆ ಗಂಟಾಗುವದು ಇಲ್ಲವೆ ಬಾವು ಬರುವದು ಇದಕ್ಕೆ ಕರ್ಣಮೂಲವೆನ್ನು ವರು. ಈ ಗಂಟು ಹಾಗು ಬಾವುಗಳು ಪ್ರಾಣಘಾತಕಗಳಾಗಿವೆ. ಈ ವಿಕಾರ ದೊಳಗಿಂದ ಮನುಷ್ಯನು ಕ್ವಚಿತ್ತಾಗಿಯೇ ಬದುಕುತ್ತಾನೆ. ಈ ಗಂಟು ಇಲ್ಲವೆ ಬಾವು ಜ್ವರಕ್ಕೆ ಮೊದಲು ಉಂಟಾದರೆ ಸಾಧ್ಯವಾಗುವದು. ಜ್ವರದೊಳಗೆ ಬಂದರೆ ಕಷ್ಟಸಾಧ್ಯವು ಜ್ವರ ನಿಂತ ಮೇಲೆ ಉಂಟಾದರೆ ಅಸಾಧ್ಯವೆಂದೇ ತಿಳಿಯತಕ್ಕದ್ದು.

### ಕರ್ಣಮೂಲಕ್ಕೆ ಉಪಾಯಗಳು.

೧ ರಾಸನೆ, ಶುಂಠಿ, ಮಾದಾಳದ ಬೇರು, ಮರಅರಿಷಿಣ, ಟಕ್ಕ ಣಿಕೆ ಬೇರು ಇವನ್ನು ನೀರಲ್ಲಿ ತೇಯ್ದು ಹಚ್ಚಿದರೆ ಕರ್ಣಮೂಲವು ಹೋಗುತ್ತದೆ.

೨ ಕರ್ಣಮೂಲವು ಒಡೆಯುಲಿಕ್ಕೆ ಚಿಕಿತ್ಸಾ ಪ್ರಭಾಕರ ಗ್ರಂಥದೊಳಗಿನ ಉಪದಂಶ ಪ್ರಕರಣದಲ್ಲಿ ಯಾವ ಯಾವ ಉಪಾಯುಗಳನ್ನು ಹೇಳಿದೆಯೋ ಅವನ್ನೆಲ್ಲ ಮಾಡಶಕ್ಕದ್ದು.

೩ ಇಂಗು, ಅರಿಷಿಣ ಬೇರು, ಕಾಡಕವಡೀಕಾಯಿ, ಸೈಂಧಲವಣ, ದೇವದಾರು, ಹಿಪ್ಪಲಿ ಇವುಗಳ ಚೂರ್ಣವನ್ನು ಎಕ್ಕೀಹಾಲಿನಲ್ಲಿ ಅರೆದು, ಅದರಲ್ಲಿ ತುಪ್ಪ ಕೂಡಿಸಿ, ಕೈಯಾಡಿ ಹಚ್ಚಬೇಕು. ಇದರಿಂದ ಬಹು ತೀವ್ರ ಗುಣವಾಗುವದು.

೪ ಅರ್ಧೀತೊಲಿ ಬಜೆ, ೧೦ ಬಳ್ಳೊಳ್ಳಿ ಬೀಜ ಇವುಗಳನ್ನರೆದು ಹಚ್ಚಿದರೆ ೩ ಲೇಪಗಳೊಳಗೆ ಕರ್ಣಮೂಲದ ನಾಮಶೇಷವಾಗುತ್ತದೆ.

೫ ಕಂಚಾಳ ಗಿಡದ ತೊಗಟಿಯ ಕಷಾಯ ಕುಡಿಸಿ, ಶುಂಠಿ ಮತ್ತು ನೇಪಾಳಬೀಜ ಇವುಗಳನ್ನು ತೆಯ್ದು ಗಂಟಿನ ಇಲ್ಲವೆ ಬಾವಿನ ಮೇಲೆ ಹಚ್ಚಬೇಕು.

೬ ಬೆಲ್ಲ, ಗುಗ್ಗುಳ, ಚಿತ್ರಮೂಲ, ಸಾಸಿವೆ ಇವನ್ನು ನೀರಲ್ಲರೆದು ಹಚ್ಚಬೇಕು.

೭ ಬಿಳೇಹೂವಿನ ಮಧ್ಯಾಹ್ನಮಲ್ಲಿಗೆಯ ಗಡ್ಡಿಯನ್ನು ಹೆರೆದು, ಅದರಲ್ಲಿ ೨ ಕೇರು ಹಾಕಿ ಅರೆದು ತುಪ್ಪದಲ್ಲಿ ಕುಚ್ಚಿ ಇಳಿಸುವಾಗ ಬೆಲ್ಲ ಹಾಕಿಳಿಸಿ ಅಡಿಕೆಯಷ್ಟು ಗುಳಿಗೆ ಕಟ್ಟಿಡಬೇಕು. ಇವನ್ನು ದಿನಾಲು ೨ ಗುಳಿಗೆ ತಕ್ಕೊಳ್ಳತಕ್ಕದ್ದು. ಇದಕ್ಕೆ ವರ್ಜ್ಯ ಪದಾರ್ಥಗಳು:—ಇಂಗು, ಸಾಸಿವೆ, ಅವರೇಕಾಯಿ ಇಲ್ಲವೆ ಅವರೆ, ಎಳ್ಳೆಣ್ಣೆ, ಖಾರ, ಹುಳಿಗಳು ವರ್ಜ್ಯ. (ಇದು ತೆಲಗುದೇಶದ ಘನಪಾಠಿಯ ಔಷಧವಾಗಿರುತ್ತದೆ.)

೮ ಜಿಗಣೀ ಹಚ್ಚಿ ಸಾಕಷ್ಟು ರಕ್ತ ತೆಗೆಯಬೇಕು. ಅದರಿಂದ ಹೆಚ್ಚು ಗ್ಲಾನಿ ಬಂದರೆ ತುಪ್ಪ ಕುಡಿಸಬೇಕು.

೯ ಹುಣಸೀ ರಾಡಿ ಕಾಸಿ ತೇವಿದ್ದಂಥ ಭೂಮಿಯ ಮೇಲೆ ಸುರುವಬೇಕು; ಮತ್ತು ಒದರ ಲೇಪವನ್ನು ಕರ್ಣಮೂಲಕ್ಕೆ ಮಾಡಬೇಕು.

೧೦ ನೇಪಾಳದ ಬೇರನ್ನು ಲಿಂಬೀ ಹುಳಿಯಲ್ಲಿ ತೆಯ್ದು ಕರ್ಣಮೂಲಕ್ಕೆ ಹಚ್ಚಬೇಕು.

೧೧ ಕರ್ಣಮೂಲದ ಗಂಟಿಗೆ ಪೋಟೀಸು ಕಟ್ಟಿ ಅದನ್ನು ಹಣ್ಣುಮಾಡಬೇಕು; ಅದು ಒಡೆದ ಮೇಲೆ ಹಳೇ ತುಪ್ಪ ಇಲ್ಲವೆ ಮಲಮನ್ನು ಬತ್ತಿಗೆ ಹಚ್ಚಿ ಅದರ ಛಿದ್ರದೊಳಗೆ ಹಾಕುತ್ತಿರಬೇಕು. ಅದರಿಂದ ಕೀವು ಸೋರುವದಲ್ಲದೆ ಗಾಯವು ಮಾಯಹತ್ತುತ್ತದೆ. ಒಳಗೆ ದೋಷವುಳಿದರೆ ಹಣ್ಣಾಗಿ ಎದೆಗೆ ಇಳಿಯ ಹತ್ತುತ್ತದೆ. ಇಲ್ಲವೆ ಮೂಗಿನಿಂದ ಸೋರಹತ್ತುತ್ತದೆ.

೧೨ ಸನ್ನಿಪಾತಜ್ವರದೊಳಗಿನ ೨ನೇ ಕಲಮಿನ ಕಿರಿಶಿವಣಿ ಮೊದಲಾದ ವನಸ್ಪತಿಗಳ ಕಷಾಯವನ್ನು ಕೊಡಬೇಕು.

೧೩ ಯಾವುದೊಂದು ಲೇಪದಿಂದ ಕರ್ಣಮೂಲವು ಕಡಿಮೆಯಾಗದೆ, ಬಾವು ಹೆಚ್ಚಾಗಹತ್ತಿದರೆ, ಅದಕ್ಕೆ ಶಸ್ತ್ರ ಪ್ರಯೋಗ ಮಾಡಿ ಇಲ್ಲವೆ ಅನ್ಯ ಉಪಾಯದಿಂದ ರಕ್ತತೆಗೆಯಬೇಕು. ಗಂಟು ಹಣ್ಣಾದರೆ ಒಡೆದು ಅದಕ್ಕೆ ವ್ರಣದ ಚಿಕಿತ್ಸೆ ಮಾಡಬೇಕು.

೧೪ ನುಗ್ಗೀತೊಗಟೆ ಮತ್ತು ಸಾಸಿವೆ ಇವುಗಳನ್ನರೆದು ಕರ್ಣಮೂಲಕ್ಕೆ ಹಚ್ಚಬೇಕು. ಇದರಿಂದ ಗಂಟು ಹಾಗು ಬಾವುಗಳು ನಾಶವಾಗುತ್ತದೆ.

೧೫ ಕರ್ಣಮೂಲದ ಬಾವಿಗೆ ಮೊದಲು ಜಿಗಣಿ ಹಚ್ಚಿ ರಕ್ತತೆಗೆದು ಮರು ಬಿನ ಬಾವಿಗೆ ಸಾಸುವೆ, ಸೈಂಧಲವಣ, ಬಜೆ ಇವುಗಳನ್ನು ನೀರಲ್ಲರೆದು ಹಚ್ಚ ಬೇಕು. ಇದರಿಂದ ಬಾವು, ಗಾಯ ಮತ್ತು ನೋವುಗಳು ಕಡಿಮೆಯಾಗುತ್ತವೆ.

---

## ೨೧ ವಾತೋಲ್ಬಣ ಸನ್ನಿಪಾತ.

ಲಕ್ಷಣ:—(ಯೋಗತರಂಗಿಣಿ) ಜ್ವರ, ತೃಷೆ, ಗ್ಲಾನಿ, ಬೆನ್ನಿನಲ್ಲಿ ಶೂಲಿ, ಣ್ಣು ಮಂದಾಗೋಣ, ಮೊನಗಂಡ ಮತ್ತು ಮಂಡೆಗಳ ನೋವು, ಹೈರಾಣ ಗುವದು, ದಾಹ, ಬಲಹೀನತೆ, ಮುಖ ಮತ್ತು ಮಲಮೂತ್ರಗಳ ವರ್ಣವು ಂಪಾಗೋಣ, ಶೂಲಿ, ನಿದ್ರಾನಾಶ, ಗುದಭೇದ, ಮೂತ್ರಾಶಯವು ಸಂಕುಚಿತ ಾಗೋಣ, ಅಂಗಭೇದ, ವಿಲಾಪ, ಮೂರ್ಛೆ, ಒದರೋಣ, ಅಳೋಣ ಇವೆಲ್ಲ ಕ್ಷಣಗಳಾಗುತ್ತವೆ. ಈ ಸನ್ನಿಪಾತದಲ್ಲಿ ವಾತವಿಕಾರವು ಹೆಚ್ಚಾಗಿರುತ್ತದೆ.

### ವಾತೋಲ್ಬಣ ಸನ್ನಿಪಾತಕ್ಕೆ ಉಪಾಯಗಳು.

ಸನ್ನಿಪಾತದೊಳಗಿನ ೨ನೇ ಕಲಮಿನ ಕಿರಿಶಿವಣಿ ಮೊದಲಾದ ಔಷಧಗಳ ಷಾಯ ಕೊಡಬೇಕು.

೨ ಎಕ್ಕೀಬೇರು, ನೆಲಇಂಗಳ, ದೇವದಾರು, ನೆಲಬೇವು, ರಾಸನೆ, ಲೆಕ್ಕೀ ಲೆ, ಬಜೆ, ಟಕ್ಕರಿಕೆ, ನುಗ್ಗೀತೊಗಟೆ, ಹಿಪ್ಪಲಿ, ಹಿಪ್ಪಲಿಬೇರು, ಕಾಡು ಣಸಿನ ಬೇರು, ಮೆಣಸು, ಶುಂಠಿ, ಅತಿಬಜೆ, ಕಾಡಿಗ್ಗರಗು ಇವುಗಳ ಷಾಯದಿಂದ ಸನ್ನಿಪಾತ, ಧನುರ್ವಾತ, ಹಲ್ಲುಗಿಟಕಿರಿಯೋಣ, ಬೆವರು, ಶ್ವಾಸ, ಬಾಣಂತಿರೋಗ ಇವುಗಳ ನಾಶವಾಗುತ್ತದೆ.

೩ ಜೇಕಿನಗಡ್ಡೆ ಮತ್ತು ಪಂಚಮೂಲ ಇವುಗಳ ಕಷಾಯವನ್ನು ಮಾಡಿ, ೋಷಗಳು ಬಲವಾಗಿದ್ದಾಗ ಹೆಚ್ಚು ಬಿಸಿಯಾದದ್ದನ್ನೂ, ಮಂದದೋಷಗಳ ಾಗ ಸುಖೋಷ್ಣವಾದದ್ದನ್ನೂ ಕೊಡಬೇಕು.

೪ ಗಂಟುಭಾರಂಗಿ, ನೆಲಬೇವು, ಬೇವು, ಬೇಕಿನಗಡ್ಡೆ, ಒಜೆ, ಶುಂಠಿ, ನೆಣಸು, ಹಿಪ್ಪಲಿ, ಅಡಸಾಲ, ಕಾಡಕವಡೇಬೇರು, ರಾಸನೆ, ನೆಲಇಂಗಳ, ಪಡವಲು, ದೇವದಾರು, ಅರಿಷಿಣ, ಪಾದರಿಬೇರು, ಲೋಧ್ರನಚಕ್ಕೆ, ಒಂದೆಲಗ, ಮರಅರಿಷಿಣ, ಅಮೃತಬಳ್ಳಿ, ತಿಗಡಿ, ಅತಿಬಜೆ, ತಾವರೆಗಡ್ಡೆ, ನಿರಾಮೆಬಳ್ಳಿ, ಅಗಳುಶುಂಠಿ, ನೆಲಗುಳ್ಳಬೇರು, ಕೋಡುಮುರುಕನಬೀಜ, ತ್ರಿಫಳ, ಕಚೂರ, ಕಟುಕರೋಣಿ ಇವುಗಳ ಕಷಾಯದಿಂದ ಎಲ್ಲ ಒಗೆಯ ಸನ್ನಿಪಾತಗಳೂ, ಮನ್ಯಾಸ್ತಂಭ ಮತ್ತು ಗುದಾವಮಯ, ಹಿಕ್ಕಾ, ಭ್ರಮೆ, ಮೂರ್ಛೆ, ಶೀತ, ಶ್ವಾಸ, ಬಲಾಸ, ಇಣಕೆಮ್ಮು ವಾಯುಹೃದ್ರೋಗ, ಮಲಾವಷ್ಟಂಭಗಳೂ ನಾಶವಾಗುವವು.

---

## ೨೨ ಪಿತ್ತೋಲ್ಬಣ ಸನ್ನಿಪಾತ.

ಲಕ್ಷಣ:—ಇದರಲ್ಲಿ ಪಿತ್ತವು ಅಧಿಕವಾಗಿರುತ್ತದೆ. ಮಲ-ಮೂತ್ರಗಳು ಕೆಂಪು, ದಾಹ, ಬೆವರು, ಶಕ್ತಿಕ್ಷಯ ಮತ್ತು ಮೂರ್ಛೆ ಈ ಲಕ್ಷಣಗಳಿರುತ್ತವೆ ಈ ಸನ್ನಿಪಾತದಲ್ಲಿ ಶೀತೋಪಚಾರ ಮಾಡಿದರೆ, ಕಫ, ವಾಯು, ಇವುಗಳ ಪ್ರಕೋಪವಾಗಿ ಬಿಕ್ಕು, ಶ್ವಾಸ ಕಣ್ಣಿಗೆಮಬ್ಬು ಮುಂತಾದ ಲಕ್ಷಣಗಳಾಗುತ್ತವೆ.

### ಪಿತ್ತೋಲ್ಬಣ ಸನ್ನಿಪಾತಕ್ಕೆ ಉಪಾಯಗಳು.

೧ ಕಚೂರ, ತಾವರೆಗಡ್ಡೆ, ನೆಲಗುಳ್ಳಬೇರು, ದುಷ್ಟಪುಚೆಟ್ಟು, ನೆಲಿಂಗಳ, ಕೋಡುಮುರುಕನಬೀಜ, ಕಹಿಪಡುವಲ, ಕಟುಕರೋಣಿ ಇವುಗಳ ಕಷಾಯ ಕೊಡಬೇಕು.

೨ ನೆಲಬೇವು, ಬೇಕಿನಗಡ್ಡೆ, ಅಗಳಶುಂಠಿ, ಶುಂಠಿ, ಜಾಳದಬೇರು, ಕಮಲದ ನೂಲು ಇವುಗಳ ಕಷಾಯವನ್ನು ಆರಿಸಿ ಕೊಡತಕ್ಕದ್ದು.

೩ ಫಾಲಸಾ, ತ್ರಿಫಳ, ದೇವದಾರು, ಕಿರಿಶಿವಣೆ, ಚಂದನ, ಪದ್ಮಕಾಷ್ಠ, ಕಟುಕರೋಣಿ, ಉರಿಹೊನ್ನೆ ಇವನ್ನೆಲ್ಲ ಕುಟ್ಟಿ ರಾತ್ರಿ ನೀರೊಳಗೆ ನೆನಿ ಹಾಕಿ ಬೆಳಗ್ಗೆ ಕಷಾಯ ಮಾಡಿ ಆರಿಸಿಕೊಟ್ಟರೆ ಪಿತ್ತಾಧಿಕ ಸನ್ನಿಪಾತವು ಗುಣವಾಗುತ್ತದೆ.

೪ ಚಂದನ, ಪದ್ಮಕಾಷ್ಠ, ಕಟುಕರೋಣಿ, ಉರಿಹೊನ್ನೆ ಇವುಗಳನ್ನು ಸಮಭಾಗ ತಕ್ಕೊಂಡು ಜಜ್ಜಿ ತಣ್ಣೀರಲ್ಲಿ ರಾತ್ರಿ ನೆನೆಹಾಕಿ, ಬೆಳಗ್ಗೆ ಸೋಸಿ, ಆ ನೀರು ಕುಡಿಯಬೇಕು. ಇದರಿಂದ ಪಿತ್ತಾಧಿಕ ಸನ್ನಿಪಾತದ ನಾಶವಾಗುವದು.

---

## ೨೩ ಕಫೋಲ್ಬಣ ಸನ್ನಿಪಾತ.

ಲಕ್ಷಣ:—ಇದರಲ್ಲಿ ಕಫದೋಷವು ಹೆಚ್ಚಾಗಿದ್ದು ಆಲಸ್ಯತನ, ಅರುಚಿ, ಓಕರಿಕೆ, ದಾಹ, ತಲೆ ತಿರುಗುವದು ಮನಸ್ಸಿಗೆ ಸೊಗಸಿಲ್ಲದಿರುವದು, ಭ್ರಮೆ, ಮಬ್ಬು ಮತ್ತು ಕೆಮ್ಮು ಈ ಲಕ್ಷಣಗಳಿರುತ್ತವೆ.

ಕಫೋಲ್ಬಣ, ಸನ್ನಿಪಾತಕ್ಕೆ ಉಪಾಯಗಳು:—

೧ ನೆಲಗುಳ್ಳಬೇರು, ಗುಕ್ಕ, ತಾವರೆಗಡ್ಡೆ, ಗಂಟುಭಾರಂಗಿ, ಕಚೋರ, ದುಷ್ಟಪುಜೆಟ್ಟು, ನೆಲಇಂಗಳ, ಕೋಡುಮುರುಕನ ಬೀಜ, ಕಹಿ ಪಡುವಲ, ಕಟುಕರೋಣಿ,(ಇದಕ್ಕೆ ಬೃಹತ್ಯಾದಿ ಗಣವೆನ್ನುತ್ತಾರೆ) ಇವುಗಳ ಕಾಢೆ-ನಿಕಾಢೆ ಮಾಡಿ ಕೊಡಬೇಕು. ಈ ಕಷಾಯದಿಂದ ಕಫೋಲ್ಬಣ ಸನ್ನಿಪಾತ, ದಮ್ಮು ಮೊದಲಾದ ಎಲ್ಲ ಉಪದ್ರವಗಳ ನಾಶವಾಗುವದು.

೨ ಹಿಪ್ಪಲಿಬೇರು, ದೇವದಾರು, ಕೋಡಮುರಕನಬೀಜ, ವಾಯುವಡಂಗ, ಒಂದೆಲಗ, ಕಾಡಿಗ್ಗರುಗ, ಚಿತ್ರಮೂಲ, ತ್ರಿಕಟು, ಕಿರಿಶಿವಣಿ, ತಾವರೆಗಡ್ಡೆ ಇವುಗಳ ಕಷಾಯದಲ್ಲಿ ೧ ಮಾಸಿ ತೂಕ ಗುಗ್ಗುಳದ ಪುಡಿಹಾಕಿ ಕೊಡುವದು.

೩ ರಾಸನೆ, ಅರಳೀಕಾಯಿ, ಗುಕ್ಕದಬೇರು, ನೆಲಗುಳ್ಳಬೇರು, ಲಕ್ಕಿ, ಅಗಳಶುಂಠಿ, ಬಜೆ, ಕಾಡುಮೆಣಸಿನಬೇರು ಇವುಗಳ ಕಷಾಯದಲ್ಲಿ ಮಾಸಿ ತೂಕ ಗುಗ್ಗುಳದ ಪುಡಿ ಹಾಕಿ ಕೊಡಬೇಕು. ಇದರಿಂದ ಸನ್ನಿಪಾತ, ಬೆವರು, ಶೀತ, ಬಡಬಡಿಕೆ, ಶೂಲಿ, ದಮ್ಮು, ಕಫಗಳ ನಾಶವಾಗುತ್ತದೆ.

---

## ೨೪ ತ್ರಿಯುಲ್ಬಣ ಸನ್ನಿಪಾತ.

ಲಕ್ಷಣ:—ಇದು ಎಲ್ಲ ಲಕ್ಷಣಗಳಿಂದ ಕೂಡಿರುತ್ತದೆ. ಜ್ವರ, ಮೈ ನೋವು, ನೆತ್ತಿಯಶೋಷ, ಇಂದ್ರಿಯಗಳ ಬಲಹೀನತೆ, ಹೊಟ್ಟೆಯುಬ್ಬೋಣ, ಕಣ್ಣಿಗೆ ಮಬ್ಬು, ಅರುಚಿ, ಶ್ವಾಸ, ಒಣಕೆಮ್ಮು, ಶ್ರಮ, ಭ್ರಮೆ ಇತ್ಯಾದಿ ಲಕ್ಷಣಗಳಾಗುತ್ತವೆ.

ತ್ರಿಯುಲ್ಬಣ ಸನ್ನಿಪಾತಕ್ಕೆ ಉಪಾಯಗಳು.

೧ ಶುಂಠಿ, ಮೆಣಸು, ಹಿಪ್ಪಲಿ, ಜೇಕಿನಗಡ್ಡಿ, ತ್ರಿಫಳ, ಬೇವು, ಕಹಿ ಪಡುವಲ, ಕಟುಕರೋಣಿ, ಕೋಡುಮುರುಕನಬೀಜ, ನೆಲಬೇವು, ಅಮೃತ ಬಳ್ಳಿ, ಅಗಳಶುಂಠಿ ಇವುಗಳ ಕಷಾಯದಿಂದ ತ್ರಿದೋಷಗಳ ನಾಶವಾಗುತ್ತದೆ.

೨ ಶುಂಠಿ, ಹವೀಜ, ಗಂಟುಭಾರಂಗಿ, ಪದ್ಮಕಾಷ್ಠ, ರಕ್ತಚಂದನ, ಬೇವು, ಕಹಿಪಡುವಲ, ತ್ರಿಫಳ, ಜ್ಯೇಷ್ಠಮಧು, ಕಲ್ಲ ಕಡಲೇಬೇರು, ಸಕ್ಕರಿ,

ಕಟುಕರೋಹಿಣಿ, ದೊಡ್ಡ ಹಿಪ್ಪಲಿ, ಕಕ್ಕೀಕಾಯಿಯೊಳಗಿನ ತಿಳುಲು, ನೆಲಬೇವು. ಅಮೃತಬಳ್ಳಿ, ದಶಮೂಲ, ಮತ್ತು ನೆಲಗುಳ್ಳ ಬೇರು ಇವುಗಳ ಕಷಾಯದಿಂದ ಮೃತ್ಯುಸ್ವರೂಪವಾದ ಸನ್ನಿಪಾತವು ಕೂಡ ನಾಶವಾಗುವದು.

---

## ೨೫ ತಂದ್ರಾ (ಮಬ್ಬು.)

ಲಕ್ಷಣ:—ಸನ್ನಿಪಾತಜ್ವರದಲ್ಲಿ ಮಬ್ಬು ಬರುತ್ತದೆ. ಅದನ್ನು ಹಂಚಿಕೆಗಳಿಂದಲೇ ಕಳೆಯಬೇಕು. ಇದು ಜ್ವರದೊಳಗಿನ ಕಷ್ಟಸಾಧ್ಯವಾದ ಉಪದ್ರವವಾಗಿರುತ್ತದೆ. ಯಾವ ಜ್ವರದೊಳಗೆ ಆಮಾಶಯದೊಳಗೆ ಆಮ ಮತ್ತು ಕಫಗಳ ಸಂಚಯವಾಗುವದೋ ಆಗ ದೃಢಸನ್ನಿಪಾತವಾಗಿ ಜ್ವರ ಶಾಂತವಾಯಿತೆಂದರೆ ಆ ರೋಗಿಗೆ ಮಬ್ಬು ಬರುವದು ಖಂಡಿತವು. ಅವನು ಅನ್ನದ ರಸ, ಹಾಲು ಇವುಗಳನ್ನು ಸೇವಿಸುವದರಿಂದಲೂ, ಹಗಲು ನಿದ್ದೆ ಮಾಡುವದರಿಂದಲೂ ಅವನ ಕಫವು ಪ್ರಕೋಪವಾಗಿ, ವಾಯುವನ್ನು ನಿರೋಧಿಸಿ, ನರಗಳಲ್ಲಿ ಪ್ರವೇಶಿಸುತ್ತದೆ. ಆ ರೋಗಿಯ ಕಣ್ಣುಗಳು ಸದಾ ಅರ್ಧ ಮರ್ಧ ಮುಚ್ಚಿದಂತಾಗುತ್ತವೆ; ಇಲ್ಲವೆ ನೆಟ್ಟಗಣ್ಣಿಗೆ ಬಿದ್ದು, ಒಳಗಿನ ಗೊಂಬೆಗಳು ತಿರುಗಿರುತ್ತವೆ; ಮತ್ತು ಕಣ್ಣುಗುಡ್ಡೆಗಳು ಚಂಚಲವಾಗಿ ತೇಜೋಹೀನವಾಗಿರುತ್ತವೆ. ಕಣ್ಣುರೆಪ್ಪೆಗಳು ಅಚಂಚಲವಾಗಿದ್ದು, ಬಾಯಿ ತೆರೆದಂತೆಯೂ, ಹಲ್ಲುಗಳು ಹೊರಗೆ ಹಾದಂತೆಯೂ ಕಾಣುತ್ತವೆ. ಆ ರೋಗಿಯು ಆಗಾಗ್ಗೆ ಅಂಗಾತ ಮಲಗುವನು ಅವನ ಕಣ್ಣೊಳಗಿಂದ ಜಿಗುಟು ಹಾಗು ತಂತುಯುಕ್ತವಾದ ಸ್ರಾವವು ಹೊರ ಬೀಳುತ್ತಿರುತ್ತದೆ. ಕಂಠಮಾರ್ಗದ ರೋಧವಾಗುತ್ತದೆ. ಈ ಪ್ರಕಾರದ ಲಕ್ಷಣಗಳಾದಾಗ ತ್ರಿರಾತ್ರಿಗಳೊಳಗೇ ಸಾಧ್ಯವು. ಬಳಿಕ ಅಸಾಧ್ಯವೆಂದೇ ತಿಳಿಯತಕ್ಕದ್ದು.

### ಮಬ್ಬಿಗೆ ಉಪಾಯಗಳು:—

೧ ಲೋಹಭಸ್ಮ, ಬಿಳೀ ಲೋಧ್ರದ ಚೆಕ್ಕೆ, ಮೆಣಸು ಮತ್ತು ಗೋರೋಜನ ಇವುಗಳನ್ನು ನೀರಲ್ಲಿ ತೆಯ್ದು ಒಂದೆರಡು ಸಾರೆ ಅಂಜನ ಮಾಡಬೇಕು.

೨ ಸೈಂಧಲವಣ, ಮನಸೀಲ, ತ್ರಿಕಟು ಇವುಗಳನ್ನು ಜೇನುತುಪ್ಪದಲ್ಲಿ ತೆಯ್ದು ಅಂಜನ ಮಾಡಬೇಕು.

೩ ಶುಂಠಿ, ಮೆಣಸು, ಹಿಪ್ಪಲಿ ಇವನ್ನು ಕಾಡಿಗೆಯಂತೆ ಸಣ್ಣಾಗಿ ಅರೆದು ಮೂಗಿನಲ್ಲಿ ಊದಬೇಕು.

೪ ಜಾಜೀ ಹೂವು ಮತ್ತು ಎಲೆ, ಮೆಣಸು, ಕಟುಕರೋಹಿಣಿ, ಬಜೆ, ಸೈಂಧಲವಣ ಇವನ್ನೆಲ್ಲ ಕುರಿಯ ಉಚ್ಚೆಯಲ್ಲಿ ಅರೆದು ಮೂಗಿನಲ್ಲಿ ಹಿಂಡಬೇಕು.

ಇಲ್ಲವೆ ೨-೩ ಹನಿಗಳನ್ನು ಮೂಗಿನಲ್ಲಿ ಎಳೆಯಹಚ್ಚಬೇಕು. ಮಬ್ಬು ಇಳಿಸುವ ದಕ್ಕೆ ಇದೊಳ್ಳೇ ಔಷಧವಾಗಿರುತ್ತದೆ.

೨೪ ನೆಲ್ಲಿಕಾಯಿಗಳನ್ನು ಕುದಿಸಿ ಅರೆಯಬೇಕು. ಅದರಲ್ಲಿ ದೀಪದ್ರಾಕ್ಷಿ, ಶುಂಠಿ ಚೂರ್ಣ, ಜೇನುತುಪ್ಪ ಹಾಕಿ ಕೊಡಬೇಕು. ಇದರಿಂದ ಕೆಮ್ಮು, ಶ್ವಾಸ, ಮೂರ್ಛೆ, ಅರುಚಿ, ಮಬ್ಬುಗಳ ನಾಶವಾಗುತ್ತದೆ.

---

## ೨೬ ಸನ್ನಿಪಾತದ ಉಪಭೇದಗಳೂ, ಅವುಗಳ ಕಾಲ ಮರ್ಯಾದೆಯೂ.

ಸಂಧಿಕ ೭, ಅಂತಕ ೧೦, ರುಗ್ದಾಹ, ೨೦, ಚಿತ್ತವಿಭ್ರಮ ೨೪, ಶೀತಾಂಗ ೧೫, ತಂದ್ರಿಕ ೨೫, ಕಂಠಕುಬ್ಜ ೧೩, ಕರ್ಣಕ ೯೦, ಭುಗ್ನನೇತ್ರ ೮, ರಕ್ತಷ್ಠೀವಿ ೧೦, ಪ್ರಲಾಪಕ ೧೪, ಜಿಹ್ವಕ ೧೬ ಮತ್ತು ಅಭಿನ್ಯಾಸ ೧೫ ಈ ದಿವಸಗಳು ಆಯುಷ್ಯದ ಪರಾವಧಿ ಕಾಲವು; ಆದರೆ ಒಮ್ಮೊಮ್ಮೆ ರೋಗಿಯು ಅವ್ಯವಸ್ಥೆಯಿಂದಲೂ, ಅಜಾಗರೂಕತೆಯಿಂದಲೂ ಮತ್ತು ಸ್ಥಲ, ಕಾಲ, ದ್ರವ್ಯ, ಔಷಧಗಳ ಅಭಾವದಿಂದಲೂ ತಾತ್ಕಾಲದಲ್ಲಿ ಕೂಡ ಸಾಯುತ್ತಾನೆ. ಒಟ್ಟಿಗೆ ಸನ್ನಿಪಾತದಲ್ಲಿ ಮೇಲೆ ಬರೆದಂತೆ ೧೩ ಪ್ರಭೇದಗಳುಂಟು.

ಸಾಧ್ಯಾಸಾಧ್ಯ ವಿಚಾರವು:—ಸಂಧಿಕ, ತಂದ್ರಿಕ, ಕರ್ಣಕ, ಕಂಠಕುಬ್ಜ ಜಿಹ್ವಕ, ಚಿತ್ತವಿಭ್ರಮ ಈ ಸನ್ನಿಪಾತಗಳು ಸಾಧ್ಯವೆಂದು ಅನ್ನಬಹುದು; ಆದರೆ ಉಳಿದ ೭ ಸನ್ನಿಪಾತಗಳು ಕಷ್ಟಸಾಧ್ಯ ಹಾಗು ಮಾರಕಗಳೆಂದೇ ಹೇಳಬಹುದು.

---

### (೧) ಸಂಧಿಕ ಸನ್ನಿಪಾತ.

ಲಕ್ಷಣ:—ಸಂದಿಸಂದಿಗೆ ಬಾವು ಇಲ್ಲವೆ ಶೂಲಿ, ದೇಹಕ್ಕೆ ವಾತಬಾಧೆ, ಕಫ, ಸಂತಾಪ, ಬಲಹೀನತೆ, ನಿದ್ರಾನಾಶ, ಇವೇ ಮೊದಲಾದ ಲಕ್ಷಣ ಗಳಾಗುತ್ತವೆ.

#### ಸಂಧಿಕ ಸನ್ನಿಪಾತಕ್ಕೆ ಉಪಾಯಗಳು.

೧ ಶುದ್ಧಪಾರಜ, ಗಂಧಕ, ಅಭ್ರಕಭಸ್ಮ, ತ್ರಿಕ್ಷಾರಗಳು, ಜೀರಿಗಿ, ತ್ರಿಕಟು, ತ್ರಿಫಳ, ಉಪ್ಪು ಇವನ್ನು ಸಮಭಾಗ ತಕ್ಕೊಂಡು ಕುಟ್ಟಿ, ಚಿತ್ರಮೂಲದ ಕಷಾಯದಲ್ಲಿ ಅರೆದು ೪ ಗುಲಗಂಜಿಯಷ್ಟು ಗುಳಿಗೆ ಮಾಡಿಟ್ಟು ಅಂಥ ದೊಂದು ಗುಳಿಗೆಯನ್ನು ಜೇನತುಪ್ಪ ಹಿಪ್ಪಲಿಗಳೊಡನೆ ಕೊಡಬೇಕು. ಈ ಸಂಧಿ ಕಾರಿ ರಸವು ಸಂಧಿಕಸನ್ನಿಪಾತಕ್ಕೆ ಹಿತಕರವಾಗಿದೆ.

೨ ಪಂಚಮೂಲ, ಹಿಪ್ಪಲಿ, ಸೈಂಧಲವಣ, ಶುಂಠಿ ಇವುಗಳ ಚೂರ್ಣ ವನ್ನು ಹುರುಳಿಯ ಕಷಾಯದೊಡನೆ ಕೊಡಬೇಕು.

೩ ಲೆಕ್ಕಿ, ಗುಗ್ಗಳ, ಸಾಸುವೆ, ಬೇವಿನಎಲಿ, ಬೆಲ್ಲ ಇವುಗಳ ಧೂಪವನ್ನು ಕೊಟ್ಟರೆ ಸಂಧಿಕ ಸನ್ನಿಪಾತದ ನಾಶವಾಗುತ್ತದೆ.

೪ ದೇವದಾರು, ಕಚೂರ, ಅಮೃತಬಳ್ಳಿ, ರಾಸನೆ, ಸುಂಠಿ, ಇವುಗಳ ಕಷಾಯದಲ್ಲಿ ಗುಗ್ಗಳದ ಪುಡಿ ಹಾಕಿ ಕೊಟ್ಟರೆ ಸಂಧಿವಾತದ ಶಮನವಾಗುತ್ತದೆ.

೫ ಬಜೆ, ನೆಲಿಂಗಳ, ಅಮೃತಬಳ್ಳಿ, ಗಂಟುಭಾರಂಗಿ, ಗೊರಟಿಗೆ, ದೇವ ದಾರು, ಜೇಕಿನಗಡ್ಡೆ, ಸುಂಠಿ, ವೃದ್ಧದಾರು, ರಾಸನೆ, ಗುಗ್ಗಳ, ಅಶ್ವಗಂಧಿ, ಔಡಲಬೇರು, ಶತಾವರಿ ಇವುಗಳ ಕಷಾಯದಿಂದ ಸಂಧಿಕಸನ್ನಿಪಾತ, ಜಾಡ್ಯ, ಗ್ಲಾನಿ, ಬವಳಿ ಮತ್ತು ಪಕ್ಷಘಾತಗಳ ನಾಶವಾಗುತ್ತದೆ.

೬ ಹಿಪ್ಪಲೀಬೇರು, ತಾರೀಕಾಯಿ, ಅಳಲೇಕಾಯಿ, ಕಕ್ಕೀಕಾಯಿಯೊಳ ಗಿನ ತಿಳಲು, ನೆಲ್ಲೀಚೆಟ್ಟು, ಅಡಸಾಲ ಇವುಗಳ ಕಷಾಯದಲ್ಲಿ ಔಡಲೆಣ್ಣೆ ಹಾಕಿ ಕೊಡುವದು. ಇದರಿಂದ ವಾಯುವಿಕಾರದಿಂದುಂಟಾದ ಜಾಡ್ಯದ ನಾಶವು.

೭ ಸಂಧಿಕ ಸನ್ನಿಪಾತಕ್ಕೆ ಲಂಘನ ಮಾಡುವದೂ, ಬೆವರು ಹೊರಡಿ ಸುವದೂ, ಔಷಧ ಕಟ್ಟುವದೂ ಇವೆಲ್ಲ ಹಿತಕರಗಳಾಗಿವೆ. ಈ ಉಪಾಯಗಳಿಂದ ಅವಯವಗಳು ಹಗುರಾಗುತ್ತವೆ. ಈ ರೋಗಿಗೆ ಗಂಜಿ ಮುಂತಾದ ಹಗುರ ಆಹಾರವನ್ನು ಕೊಡಬೇಕು.

---

## (೨) ಅಂತಕ ಸನ್ನಿಪಾತ.

ಲಕ್ಷಣ:—ದಾಹ, ಸಂತಾಪ, ಮೋಹ, ತಲೆ ನಡುಗು, ಬಿಕ್ಕು ಮತ್ತು ಕೆಮ್ಮು ಇವೇ ಮೊದಲಾದ ಲಕ್ಷಣಗಳಾಗುತ್ತಿದ್ದ ಈ ಅಂತಕ ಸನ್ನಿಪಾತವು ಅಸಾಧ್ಯವೆಂದೇ ಹೇಳಬಹುದು.

### ಅಂತಕ ಸನ್ನಿಪಾತಕ್ಕೆ ಉಪಾಯಗಳು.

೧ ರಾಗೀಹಿಟ್ಟನ್ನು ಬಳ್ಳೊಳ್ಳಿ ರಸದಲ್ಲಿ ನಾದಿ ಅದರ ರೊಟ್ಟಿಗೆ ಎಣ್ಣೆ ಇಲ್ಲವೆ ತುಪ್ಪ ಹಚ್ಚಿ ಸುಟ್ಟು ಬಿಸಿ ಬಿಸಿಯಾಗಿರುವಾಗಲೆ ತಲೆಗೆ ಕಟ್ಟಬೇಕು. ೨ ಪ್ರಹರಗಳ ನಂತರ ಅದನ್ನು ಬಿಚ್ಚಿ ತೆಗೆದು ಮತ್ತೆ ಹೊಸ ರೊಟ್ಟಿ ಸುಟ್ಟು ಕಟ್ಟಬೇಕು. ಈ ಉಪಾಯದಿಂದ ಅಂತಕ ಸನ್ನಿಪಾತಕದ ವ್ಯಥೆಯು ಕಡಿಮೆ ಯಾಗುವದು. ನಮ್ಮ ಸ್ವಂತ ಅಭಿಪ್ರಾಯದಂತೆ ಆ ರಾಗೀ ರೊಟ್ಟಿಯನ್ನು ಔಡಲೆಣ್ಣೆ ಹಚ್ಚಿ ಸುಡಬೇಕು. ವೈದ್ಯರು ಈ ಉಪಾಯದ ವಿಶೇಷ ಅನುಭವ ತಕೊಂಡು ಹೇಳಿರುತ್ತಾರೆ.

೨ ಅಳಲೇಕಾಯಿ, ಅಡಸಾಲ, ಫಾಲಸಾ, ದೇವದಾರು, ಕಟುಕರೋಹಿಣಿ, ರಾಸನೆ, ಅಮೃತಬಳ್ಳಿ ಮತ್ತು ಕೋಷ್ಟಕೊಳಂಜನ ಇವುಗಳ ಕಷಾಯದಿಂದ ಜ್ವರ ಮತ್ತು ವ್ಯಥೆಗಳಿಂದ ಯುಕ್ತವಾದ ಅಂತಕಸನ್ನಿಪಾತವು ನಾಶವಾಗುತ್ತ ದೆಂಬದಕ್ಕೆ ಸಂದೇಹವಿಲ್ಲ.

೩ ಆನಂದಭೈರವ ಮಾತ್ರೆ ಇಲ್ಲವೆ ಶಂಕರಶೋಕ್ತ ಮೃತಸಂಜೀವಿನೀ ರಸ (ಮಾತ್ರೆ) ಕೊಡಬೇಕು.

---

## (೩) ರುಗ್ದಾಹ ಸನ್ನಿಪಾತ.

ಲಕ್ಷಣ:— ನೀರಡಿಕೆಯಿಂದ ಯುಕ್ತವಾದ ವಿಶೇಷ ಜ್ವರ, ವಿಶೇಷ ಸಂತಾಪದಿಂದ ಶರೀರದ ಗ್ಲಾನಿ, ತಲೆ ನಡುಗು. ಇದರಿಂದ ಗಂಟಲು, ಕುತ್ತಿಗೆ, ಗದ್ದಗಳಲ್ಲಿ ವ್ಯಥೆ; ಉಬ್ಬಸ, ಒಣಕೆಮ್ಮು ಮತ್ತು ಬಿಕ್ಕು ಈ ಲಕ್ಷಣಗಳಿಂದ ಯುಕ್ತವಾದ ಈ ರುಗ್ದಾಹ ಸನ್ನಿಪಾತವು ಕಷ್ಟಸಾಧ್ಯವೂ, ಮಾರಕವೂ ಆಗಿರುತ್ತದೆ.

ರುಗ್ದಾಹ ಸನ್ನಿಪಾತಕ್ಕೆ ಉಪಾಯಗಳು.

೧ ಜೇಕಿನಗಡ್ಡಿ, ರಕ್ತಚಂದನ, ಶುಂಠಿ, ಬಾಳದಬೇರು, ಕರೇಬಾಳದ ಬೇರು, ಕಲ್ಲುಸಬ್ಬಸಿಗಿ ಇವುಗಳ ಕಷಾಯವನ್ನು ಆರಿಸಿ ಕೊಟ್ಟರೆ, ಈ ಸನ್ನಿಪಾತವನ್ನು ಶಮನ ಮಾಡುತ್ತದೆ.

೨ ಅಳಲೇಕಾಯಿ, ಜೇಕಿನಗಡ್ಡೆ, ಕಲ್ಲುಸಬ್ಬಸಿಗಿ, ಕಟುಕರೋಹಿಣಿ, ಕಕ್ಕೀಕಾಯೊಳಗಿನ ತಿರಲು, ಕರೇದ್ರಾಕ್ಷಿ ಇವುಗಳ ಕಷಾಯದಿಂದ ಈ ಸನ್ನಿಪಾತದ ನಾಶವಾಗುತ್ತದೆ.

೩ ಒಂದೆಲಗ, ದೀಪದ್ರಾಕ್ಷಿ, ಜೇಕಿನಗಡ್ಡೆ, ಬಾಳದಬೇರು, ಕಕ್ಕೀಕಾಯಿ, ಕಟುಕರೋಹಿಣಿ, ಬಜೆ, ತ್ರಿಫಳ, ಕಾಡಮೆಣಸಿನ ಬೇರು, ಜೇವು, ಕಹಿಹೀರಿಕಾಯಿ, ದಶಮೂಲ, ನೆಲದೇವು ಇವುಗಳ ಕಷಾಯದಿಂದ ಸಕಲ ಪ್ರಕಾರದ ವಾತವ್ಯಾಧಿಗಳೂ ರುಗ್ದಾಹ ಸನ್ನಿಪಾತವೂ ಗುಣವಾಗುತ್ತವೆ.

೪ ಕರೀಅಗರು, ಕರ್ಪೂರ, ತದಕನ ಗಿಡ (ಆನೆಬೇಲ), ನಖಲ, ತಗರ, ಬಾಳದಬೇರು, ಚಂದನ ಮತ್ತು ರಾಳ ಇವುಗಳ ಧೂಪವನ್ನು ಈ ಸನ್ನಿಪಾತದ ರೋಗಿಯ ಕೋಣೆಯಲ್ಲಿ ಕೊಡುವದು ಹಿತಕರವಾಗಿದೆ.

೫ ಹವೀಜ ಮತ್ತು ಅಕ್ಕಿಗಳನ್ನು ರಾತ್ರಿ ನೀರಲ್ಲಿ ನೆನೆ ಹಾಕಿ ಬೆಳಿಗ್ಗೆ ಅದರ ಗಂಜೀ ಮಾಡಿ ಆರಿಸಿ ಕೊಟ್ಟರೆ ಅಂತರ್ದಾಹ ಮತ್ತು ಪಿತ್ತಜ್ವರಗಳ ಶಮನವಾಗುವದು.

೬ ಉಗ್ರಾಹ ಸನ್ನಿಪಾತಕ್ಕೆ ಲೇಪ:—ಜಾಜೀಸೊಪ್ಪು, ಚಂದನ, ಬೇವಿನ ಸೊಪ್ಪು ಇವುಗಳನ್ನು ಒಟ್ಟಾಗಿ ನುಣ್ಣಗೆ ಅರೆದು, ಅಂಗಾಲಿಗೆ ಬಡಿದರೆ ಉಗ್ರಾಹವು ಶಾಂತವಾಗುವದು.

೭ ದಾಹ-ವಾಂತಿಗಳಿಂದ ಬಳಲುವ, ಅನ್ನ ಸೇರದಿರುವ, ನೀರಡಿಕೆಯಿಂದ ಪೀಡಿತನಾದ ರೋಗಿಗೆ ಭತ್ತದ ಅರಳಿನ ಹಿಟ್ಟಿನಲ್ಲಿ ಸಕ್ಕರಿ ಮತ್ತು ಜೇನತುಪ್ಪ ಹಾಕಿ ತಿನಿಸಬೇಕು. ಶಾಂತವಾಗುವದು.

---

## (೪) ಚಿತ್ತವಿಭ್ರಮ ಸನ್ನಿಪಾತ.

ಲಕ್ಷಣ:—ಯಾವುದೊಂದು ಬಗೆಯಿಂದ ದೇಹಕ್ಕೆ ಪೀಡೆ, ಭ್ರಮೆ, ಉನ್ಮಾದ, ಸಂತಾಪ, ಮೋಹ, ವೈಕಲ್ಯ, ಕಣ್ಣಿಗೆ ಮಬ್ಬು, ನಗುವದು, ಹಾಡುವದು, ಕುಣಿಯುವದು, ಬಡಬಡಿಸುವದು ಇವೇ ಮೊದಲಾದ ವಿಕಾರಗಳಾದರೆ ಅದಕ್ಕೆ ಚಿತ್ತವಿಭ್ರಮಸನ್ನಿಪಾತವೆನ್ನುವರು. ಇದು ಅಸಾಧ್ಯವೇ ಸರಿ.

### ಚಿತ್ತವಿಭ್ರಮ ಸನ್ನಿಪಾತಕ್ಕೆ ಉಪಾಯಗಳು.

೧ ದೀಪದ್ರಾಕ್ಷಿ, ದೇವದಾರು, ಕಟುಕರೋಹಿಣಿ, ಜೇಕಿನಗಡ್ಡೆ, ನೆಲ್ಲೀಚೆಟ್ಟು, ಅಮೃತಬಳ್ಳಿ, ಅಳಲೇಕಾಯಿ, ಕಕ್ಕೀಕಾಯೊಳಗಿನ ತಿಳಲು, ನೆಲಬೇವು, ಕಲ್ಲುಸಬ್ಬಸಿಗಿ, ಕಹಿಪಡುವಲು ಇವುಗಳ ಇಲ್ಲವೆ ಒಂದೆಲಗ, ದೀಪದ್ರಾಕ್ಷಿ, ಕಹಿಪಡುವಲ, ಬಾಳದಬೇರು, ಅಳಲೇಕಾಯಿ, ಕಲ್ಲುಸಬ್ಬಸಿಗಿ, ಕಕ್ಕೀಕಾಯೊಳಗಿನ ತಿಳಲು, ಕಟುಕರೋಹಿಣಿ, ಕಡುವಾಳ ಇವುಗಳ ಕಷಾಯದಿಂದ ಈ ಸನ್ನಿಪಾತದ ಶಮನವಾಗುತ್ತದೆ.

೨ ಇಪ್ಪಿತೊಗಟೆ, ನಬಲ, ಬುರುಲ, ಹಿಪ್ಪಲಿ, ಕೆಂಪು (ತೊರೆ) ಮತ್ತಿತೊಗಟೆ, ಅಳಲೇಕಾಯಿ, ತಾಲಶರ್ಣಿ, ರಕ್ತಚಂದನ ಇವುಗಳ ಕಷಾಯವು ಈ ರೋಗಕ್ಕೆ ಹಿತಕರವಾಗಿದೆ.

೩ ಒಂದೆಲಗ, ಬಜೆ, ಶತಾವರಿ, ತ್ರಿಫಳ, ಕಕ್ಕಿ, ನೆಲಬೇವು, ಬೇವು, ಕಹಿಪಡುವಲ, ಕರೇದ್ರಾಕ್ಷಿ ಮತ್ತು ದಶಮೂಲ ಇವುಗಳ ಕಷಾಯವು ಚಿತ್ರವಿಭ್ರಮ ಹಾಗು ಉಗ್ರಾಹಸನ್ನಿಪಾತಕಗಳನ್ನು ನಾಶಮಾಡುತ್ತದೆ.

೪ ಅಳಲೇಕಾಯಿ, ಕಲ್ಲುಸಬ್ಬಸಿಗಿ, ಕರೇದ್ರಾಕ್ಷಿ, ಕಡುವಾಳ, ಕಟುಕರೋಹಿಣಿ, ಜೇಕಿನಗಡ್ಡೆ, ದೇವದಾರು, ಕಕ್ಕಿಕಾಯಿ ತಿಳಲು, ಒಂದೆಲಗ ಇವುಗಳ ಕಷಾಯವು ಚಿತ್ತವಿಭ್ರಮ ಸನ್ನಿಪಾತವನ್ನು ಶಮನಗೊಳಿಸುತ್ತದೆ.

೫ ಜೊಗಚಿಸೊಪ್ಪಿನ ರಸದಲ್ಲಿ ಶುಂಠಿ-ಬೆಲ್ಲಗಳನ್ನು ತೆಯ್ದು, ನಸ್ಯ ಮಾಡಿಸಿದರೆ(ಮೂಗಿನಲ್ಲಿ ಹಾಕಿದರೆ)ಚಿತ್ರವಿಭ್ರಮಸನ್ನಿಪಾತದ ನಾಶವಾಗುವದು.

---

## (೫) ಶೀತಾಂಗಸನ್ನಿಪಾತವು

ಲಕ್ಷಣ:—ದೇಹವು ಬಹು ತಣ್ಣಗೆ, ನಡುಗು, ಶ್ವಾಸ, ಬಿಕ್ಕು, ದೇಹ ಶೈಥಿಲ್ಯ, ದನಿಯು ಕುಗ್ಗು, ಅಂತರ್ದಾಹ, ಅಲ್ಪಾಯಾಸದಿಂದಲ ಶ್ರಮ, ಸಂತಾಪ, ಕೆಮ್ಮು, ವಾಂತಿ ಮತ್ತು ಅತಿಸಾರ ಇವುಗಳಿಂದ ಕೂಡಿದ ಸನ್ನಿಪಾತಜ್ವರಕ್ಕೆ ಶೀತಾಂಗಸನ್ನಿಪಾತವೆನ್ನುವರು.

### ಶೀತಾಂಗಸನ್ನಿಪಾತಕ್ಕೆ ಉಪಾಯಗಳು.

೧ ಅಕ್ಕಾದಿ ಕಷಾಯ:—ಎಕ್ಕೇಬೇರು, ಜೀರಿಗಿ, ತ್ರಿಕಟು, ಗಂಟು ಭಾರಂಗಿ, ನೆಲಗುಳ್ಳಬೇರು, ಪುಷ್ಕರಪುಷಟ್ಟು, ತಾವರೆಗಡ್ಡೆ ಇವುಗಳ ಕಷಾಯವನ್ನು ಗೋಮೂತ್ರದಲ್ಲಿ ಸಿದ್ಧಮಾಡಿಕೊಟ್ಟರೆ ತಾತ್ಕಾಲದಲ್ಲಿ ಶೀತಾಂಗ ಸನ್ನಿಪಾತ, ಮೋಹ, ಶ್ವಾಸ ಮತ್ತು ಕಫವೃದ್ಧಿಗಳ ನಾಶವಾಗುತ್ತದೆ.

೨ ಮಾದಾಳ, ನೆಲಬೇವು, ಹಿಪ್ಪಲಿಬೇರು, ದೇವದಾರು, ದಶಮೂಲ, ಅಜಮೋದ ಮತ್ತು ಶುಂಠಿ ಇವುಗಳ ಕಷಾಯವು ಶೀತಾಂಗಸನ್ನಿಪಾತದ ನಾಶಕವಾಗಿರುತ್ತದೆ.

೩ ಒಣಗಿದ ಅಡವೀ ಹಾಗಲಕಾಯಿ, ಹುರಿದ ಹುಣಸೆ, ಕಲ್ಲುಸಬ್ಬಸಿಗಿ, ಹಿಪ್ಪಲಿ, ಬಜೆ, ಕರಿಶಿವಣೆ, ಜೀರಿಗೆ, ನೆಲಬೇವು, ಚಿತ್ರಮೂಲ, ವಿಷಗುಂಬಳ, ಅಳಲೇಕಾಯಿ ಇವುಗಳ ಹಿಟ್ಟಿನಂತಹ ಚೂರ್ಣವನ್ನು ಮೈಗೆ ತಿಕ್ಕಿದರೆ ಬೆವರುಂಟಾಗಿ ಶೀತಗಾತ್ರ ಸನ್ನಿಪಾತವು ಗುಣವಾಗುತ್ತದೆ.

---

## (೬) ತಂದ್ರಿಕ ಸನ್ನಿಪಾತ.

ಲಕ್ಷಣ:—ಮಬ್ಬು, ನಾಲಿಗೆಯ ಮೇಲೆ ಹೆಚ್ಚಾಗಿ ಮುಳ್ಳು ಏಳೋಣ, ಶೂಲಿ, ಜ್ವರ, ಕಫ, ನೀರಡಿಕೆಗಳಿಂದ ಬಳಲುವದು, ನಾಲಿಗೆ ಕಪ್ಪು-ಬಿರುಸಾಗುವದು, ಅತಿಸಾರ, ಶ್ವಾಸ, ಗ್ಲಾನಿ, ಸಂತಾಪ, ಕಿವಿಶೂಲಿ, ಹಗಲೆಲ್ಲ ನಿದ್ದೆ, ದನಿ ಕುಗ್ಗುವದು, ತೀವ್ರ ಜ್ವರ ಬರುವದು ಇವೇ ಮುಂತಾದ ಲಕ್ಷಣಗಳಿಂದ ಯುಕ್ತವಾಗಿರುತ್ತದೆ. ಜ್ವರ ಬರಹತ್ತುತ್ತಲೆ ದೃಷ್ಟಿ ಮಂದವಾಗುತ್ತದೆ.

### ತಂದ್ರಿಕ ಸನ್ನಿಪಾತಕ್ಕೆ ಉಪಾಯಗಳು.

೧ ಸೈಂಧಲವಣ, ಕರ್ಪೂರ, ಮನಶಿಲ, ಹಿಪ್ಪಲಿ ಇವುಗಳನ್ನು ಕುದುರೆಯ ಜೊಲ್ಲು ಮತ್ತು ಜೇನುತುಪ್ಪಗಳಲ್ಲಿ ತೆಯ್ದು ಅಂಜನ ಮಾಡುವದು—

೨ ಗಂಟುಭಾರಂಗಿ, ಅಮೃತಬಳ್ಳಿ, ಜೇಕಿನಗಡ್ಡೆ, ನೆಲಗುಳ್ಳಬೇರು, ಅಳಲೇಕಾಯಿ, ತಾವರೆಗಡ್ಡೆ, ಶುಂಠಿ ಇವುಗಳ ಕಾಢೆ-ನಿಕಾಢೆಯನ್ನು ೩ ಇಲ್ಲವೆ ೬ ದಿವಸ ಕೊಡತಕ್ಕದ್ದು.

೩ ಶುಂಠಿ, ಮೆಣಸು, ಹಿಪ್ಪಲಿ ಇವುಗಳ ಸೋಸಿದ ಚೂರ್ಣವನ್ನು ಮೂಗಿನಲ್ಲಿ ಊದಿದರೆ ರೋಗಿಯು ಸಾವಧನಾಗುತ್ತಾನೆ.

೪ ಅಮೃತಬಳ್ಳಿ, ಕಹಿಪಡುವಲ, ಅಡಸಾಲ, ಶುಂಠಿ, ಮೆಣಸು, ಹಿಪ್ಪಲಿ ಇವುಗಳ ಕಷಾಯ ಕೊಡಬೇಕು.

೫ ರಾಸನೆಯ ಕಷಾಯದಲ್ಲಿ ಮನಶಿಲ ಮತ್ತು ಎಳ್ಳೆಣ್ಣೆ ಹಾಕಿ ಕುದಿಸಿ, ಬಾಕಿ ಉಳಿದ ಎಣ್ಣೆಯಿಂದ ಅಂಜನ ಮಾಡಬೇಕು. ಇದು ತಂದ್ರಿಕ ಸನ್ನಿಪಾತವನ್ನು ನಾಶಮಾಡುತ್ತದೆ.

೬ ಕೋಷ್ಟ, ಕಕ್ಕೀಕಾಯಿ ಶುಂಠಿ, ಅರಿಷಿಣ, ಮರಅರಿಷಿಣ, ಮೆಣಸು, ಹಿಪ್ಪಲಿ, ಬಜೆ ಇವನ್ನು ಕುರಿಯ ಉಚ್ಚೆಯಲ್ಲಿ ಅರೆದು ಮೂಗಿನಲ್ಲಿ ಹಿಂಡಬೇಕು. ಇದರಿಂದ ತಂದ್ರಿಕ ಸನ್ನಿಪಾತವು ಗುಣವಾಗುತ್ತದೆ.

---

## (೭) ಕಂಠಕುಬ್ಜ ಸನ್ನಿಪಾತಜ್ವರ.

ಲಕ್ಷಣ:—ಹನುಸ್ತಂಭ, ದಾಹ, ಅರುಚಿ, ಶ್ವಾಸ, ನಡುಗು, ತಲೆನೋವು, ಎಚ್ಚರದಪ್ರಲಾಪ, ಬಹಳ ಜ್ವರ, ರಕ್ತದ ಬಗ್ಗೆ ವ್ಯಥೆ, ದನಿಕುಗ್ಗುವದು, ಬಡಬಡಿಕೆ ಸಂತಾಪ ಈ ಲಕ್ಷಣಗಳಾಗುತ್ತವೆ.

### ಕಂಠಕುಬ್ಜ ಸನ್ನಿಪಾತಕ್ಕೆ ಉಪಾಯಗಳು.

೧ ಉತ್ತರಾಣೀ ಸೊಪ್ಪಿನ ರಸದಲ್ಲಿ ಹಿಪ್ಪಲೀ ತೆಯ್ದು ಮೂಗಿನಲ್ಲಿ ಹಾಕಬೇಕು.

೨ ತ್ರಿಫಳ, ಕಟುಕರೋಣಿ, ಜೇಕಿನಗಡ್ಡೆ, ತ್ರಿಕಟು, ಕೋಡಮುರುಕನ ತೊಗಟೆ, ಅಡಸಾಲ ಮತ್ತು ಅರಿಷಿಣಗಳ ಕಷಾಯವು ಈ ಸನ್ನಿಪಾತಕ್ಕೆ ಗುಣಕಾರಿಯಾಗಿರುತ್ತದೆ.

೩ ದುಷ್ಟಪುಚೆಟ್ಟು, ಕೋಡುಮುರುಕ, ಅಳಲೇಕಾಯಿ, ಜೇಕಿನಗಡ್ಡೆ, ಕಚೂರ, ನೆಲಬೇವು, ಗಂಟುಭಾರಂಗಿ, ಅರಿಷಿಣ, ಕಟುಕರೋಣಿ, ತಾವರೆಗಡ್ಡೆ, ಚಿತ್ರಮೂಲ, ಮೆಣಸು, ನೆಲಗುಳ್ಳಬೇರು, ಅಡಸಾಲ, ನೆಲ್ಲೀಚೆಟ್ಟು, ದೇವದಾರು, ತಾರೀಕಾಯಿ, ಕಾಡಮೆಣಸಿನ ಬೇರು, ಶುಂಠಿ, ಹಿಪ್ಪಲಿ, ಕಿರಿಶಿವಣೆ ಇವುಗಳ ಮಂದೋಷ್ಣ ಕಷಾಯ ಕೊಡುವದು.

೪ ತ್ರಿಕಟು, ಕೋಡುಮುರುಕನಬೀಜ, ಕಟುಕರೋಣಿ, ತ್ರಿಫಳ, ಮರಅರಿಷಿಣ, ಅರಿಷಿಣ ಇವುಗಳ ಕಷಾಯ ಕೊಡತಕ್ಕದ್ದು.



## (೮) ಕರ್ಣಕ ಸನ್ನಿಪಾತ ಜ್ವರ.

ಲಕ್ಷಣ:—ಬಡಬಡಿಕೆ, ಮೋಹ, ದನಿ ಕುಗ್ಗುವದು, ಕಿವಿಮಂದವಾಗುವದು, ಒಡ್ಡಮುರಿಯುವದು; ಟೊಣ್ಣು ನೋರುವದು, ಜ್ವರ, ಸಂತಾಪ, ಕಿವಿ ಮತ್ತು ಗಲ್ಲಗಳಿಗೆ ವ್ಯಥೆ ಇಲ್ಲವೆ ಕಿವಿಯ ಬೊಡ್ಡೆಗೆ ಗಂಟಾಗುವದೇ ಮುಂತಾದ ಲಕ್ಷಣಗಳಾಗುತ್ತವೆ.

### ಕರ್ಣಕಸನ್ನಿಪಾತಕ್ಕೆ ಉಪಾಯಗಳು.

೧ ರಾಸನೆ, ನೆಲಗುಳ್ಳಬೇರು, ಅಳಲೇಕಾಯಿ, ತ್ರಿಕಟು, ಕಟುಕರೋಣಿ, ಜೇಕಿನಗಡ್ಡಿ, ತಾವರೆ ಗಡ್ಡೆ, ದುಷ್ಟಪುಚಟ್ಟು, ನೆಲ್ಲೀಚಟ್ಟು, ಗಂಟುಭಾರಂಗಿ ಇವುಗಳ ಕಷಾಯವನ್ನು ಕೊಡುವದು.

೨ ಸನ್ನಿಪಾತ ವಿಧ್ವಂಸ ರಸವನ್ನು ಕೊಡತಕ್ಕದ್ದು. (ಇದು ಪ್ರಸಿದ್ಧ ವೈದ್ಯರ ಕಡೆಗೆ ದೊರೆಯುತ್ತದೆ.)

೩ ಮೆಣಸು, ದಶಮೂಲ, ಹಿಪ್ಪಲಿ, ತ್ರಿಫಳ, ಅರಿಷಿಣ, ಶುಂಠಿ, ಕಟುಕರೋಣಿ, ನೆಲಬೇವು ಇವುಗಳ ಕಷಾಯದಲ್ಲಿ ಸೈಂಧಲವಣ ಹಾಕಿ ಕೊಟ್ಟರೆ, ಕರ್ಣಕಸನ್ನಿಪಾತವು ಗುಣವಾಗುತ್ತದೆ.

೪ ಗಂಟುಭಾರಂಗಿ, ಕಾಡುಬನ್ನಿ, ತಾವರೆಗಡ್ಡೆ, ನೆಲಗುಳ್ಳ ಬೇರು, ತ್ರಿಕಟು, ಬಜೆ, ಶೀ ಸೂರಣಗಡ್ಡಿ, ದುಷ್ಟಪುಚಟ್ಟು, ಕಟುಕರೋಣಿ, ರಾಸನೆ ಇವುಗಳ ಕಷಾಯವು ಈ ಸನ್ನಿಪಾತವನ್ನು ನಾಶಗೊಳಿಸುತ್ತದೆ.

೫ ಗಂಟು ಕರ್ಣಮೂಲದಲ್ಲಿ ಎದ್ದಿದ್ದರೆ, ಕರ್ಣಮೂಲದ ಮೇಲಿನ ಉಪಾಯಗಳನ್ನು ಮಾಡಬೇಕು.

---

## (೯) ಭೂಗ್ನೇತ್ರ ಸನ್ನಿಪಾತಜ್ವರ.

ಲಕ್ಷಣ:—ಬಲಕ್ಷಯ, ಸ್ಮೃತಿನಾಶ, ಶ್ವಾಸ, ಬಡಬಡಿಕೆ, ಮೋಹ, ಸಂತತಜ್ವರ, ವಕ್ರದೃಷ್ಟಿ, ಭ್ರಮೆ, ನಡುಗು, ಬಾವು, ಕೆಮ್ಮು. ಕಣ್ಣು ನೆಟಿದಿರುವದು ಮತ್ತು ಕಣ್ಣು ನಿಸ್ತೇಜವಾಗುವದು ಇವೆಲ್ಲ ಲಕ್ಷಣಗಳಿರುತ್ತವೆ. ಈ ಸನ್ನಿಪಾತದಿಂದ ರೋಗಿಯು ೮ ದಿನಗಳಲ್ಲಿ ಇಲ್ಲವೆ ತಾತ್ಕಾಲದಲ್ಲಿ ಸಾಯುತ್ತಾನೆ. ಇದು ಮಹಾಖೋಡಿ ಸನ್ನಿಪಾತವಿರುತ್ತದೆ.

### ಭೂಗ್ನೇತ್ರ ಸನ್ನಿಪಾತಕ್ಕೆ ಉಪಾಯಗಳು.

೧ ಹಿರೇಮದ್ದಿನ ಬೇರು, ಉಪ್ಪು, ಬಜೆ, ಹಿಪ್ಪಲಿ, ಮೆಣಸು, ಜೇಷ್ಠಮಧು, ಡಾಳಿಂಬರಹಣ್ಣಿನ ತೊಗಟೆ, ಬಳ್ಳೊಳ್ಳಿ, ಶುಂಠಿ ಇವುಗಳ ಚೂರ್ಣವನ್ನು ಹೋತಿನ ಉಚ್ಚಿಯಲ್ಲಿ ಅರೆದು ಮೂಗಿನಲ್ಲಿ ಹಿಂಡಬೇಕು.

೨ ನೆಲಬೇವು, ಜೇನುತುಪ್ಪ, ಬಜೆ, ಹಿಪ್ಪಲಿ, ಮೆಣಸು, ಒಳ್ಳೆಳ್ಳಿ, ಸಾಸುವೆ ಇವುಗಳ ರಸಕ್ರಿಯೆಯು (ಅವಲೇಹವ)ನ್ನು ನೆಕ್ಕಿಸಬೇಕು; ಮತ್ತು ಉಪ್ಪು, ಹಿಪ್ಪಲಿಗಳನ್ನು ನೀರಲ್ಲಿ ತೆಯ್ದು ಅಂಜನ ಮಾಡಬೇಕು; ಹಾಗು ಬಜೆ, ಮೆಣಸು, ಇಂಗು, ಜ್ಯೇಷ್ಠಮಧು, ದಾಳಿಂಬರ ಇವುಗಳನ್ನರೆದು ಮೂಗಿನಲ್ಲಿ ಹಿಂಡಬೇಕು.

೩ ಮರಅರಿಷಿಣ, ಕಹಿಪಡುವಲ, ಜೇಕಿನಗಡ್ಡೆ, ನೆಲಗುಳ್ಳ, ಕಟುಕ ರೋಹಿಣಿ, ಅರಿಷಿಣ, ಬೇವು, ಅಳಲೇಕಾಯಿ, ತಾರೀಕಾಯಿ, ನೆಲ್ಲೀಚೆಟ್ಟು ಇವುಗಳ ಕಷಾಯದಿಂದ ಜ್ವರ ಹಾಗು ಭೃಗ್ನೇತ್ರ ಸನ್ನಿಪಾತಕಗಳು ಗುಣವಾಗುವವು.

೪ ಹಿಪ್ಪಲಿ, ಕಹಿಪಡುವಲ, ಜೇಕಿನಗಡ್ಡೆ, ಕಟುಕರೋಹಿಣಿ, ಬೇವು, ದೇವದಾರು, ನೆಲಗುಳ್ಳಬೇರು ಇವುಗಳ ಕಷಾಯವು ದೋಷ, ಪಿತ್ಥ ಮತ್ತು ಸನ್ನಿಪಾತಗಳನ್ನು ನಾಶಗೊಳಿಸುತ್ತದೆ.

---

## (೧೦) ರಕ್ತಷ್ಠೀವಾ ಸನ್ನಿಪಾತ.

ಲಕ್ಷಣ:— ರಕ್ತ ಕಾರುವದು ಇಲ್ಲವೆ ರಕ್ತಮಿಶ್ರಿತ ಉಗುಳು ಬರುವದು, ಜ್ವರ, ತೃಷೆ, ಓಕರಿಕೆ, ಮೂರ್ಛೆ, ಶೂಲಿ, ಅತಿಸಾರ, ಬಿಕ್ಕು, ಹೊಟ್ಟೆಯುಬ್ಬುವದು, ತಲೆಯೊಳಗೆ ತಿರುಗಿದಂತಾಗುವದು, ಸಂತಾಪ, ಶ್ವಾಸ, ಎಚ್ಚರದಪ್ಪುವದು, ನಾಲಿಗೆಯು ಕಪ್ಪು ಇಲ್ಲವೆ ಕೆಂಪಾಗುವದು ಮತ್ತು ಅದರ ಮೇಲೆ ಕಲೆ ಕಲೆಯಾಗುವದು ಮುಂತಾದ ಲಕ್ಷಣಗಳಾಗುತ್ತವೆ. ಈ ಸನ್ನಿಪಾತವು ಪ್ರಾಣ ನಾಶಪಡಿಸಲಿಕ್ಕೆ ಹೆಸರುವಾಸಿಯಾಗಿರುತ್ತದೆ.

### ರಕ್ತಷ್ಠೀವೀ ಸನ್ನಿಪಾತಕ್ಕೆ ಉಪಾಯಗಳು.

೧. ದಾಳಿಂಬರ ತೊಗಟೆಯು ಇಲ್ಲವೆ ಹೂಪಿನ ಅಥವಾ ಮಾಪಿನ ಗಿಡದ ತೊಗಟೆಯು ಇಲ್ಲವೆ ಉಳುಳೀಗಡ್ಡಿಯು ಇ ಹಸಿ ರಸವನ್ನು ಮೂಗಿನಲ್ಲಿ ಹಿಂಡಬೇಕು. ಅಂದರೆ ಮೂಗಿನಿಂದ ಹೊರಡುವ ರಕ್ತವು ಕಟ್ಟಾಗುವದು. ಅದರಲ್ಲಿ ಕರ್ಕೀರಸವನ್ನು ಹಾಕಬೇಕು; ಮತ್ತು ತುಸ ಕರ್ಕಿರಸವನ್ನು ಕುಡಿಯಲಿಕ್ಕೂ ಕೊಡಬೇಕು. ಉಳುಳಿಗಡ್ಡಿ ಜಜ್ಜಿ ತಲೆಗೆ ಕಟ್ಟಬೇಕು; ಇಲ್ಲವೆ ತಲೆಗೆ ಬರ್ಫವನ್ನಿಡಬೇಕು.

೨ ಕಲ್ಲುಸಬ್ಬಸಿಗಿ, ಕಟುಕರೋಹಿಣಿ, ನೆಲಿಂಗಳ, ಆಡಸಾಲ, ನೆಲಬೇವು, ಬಾಳದ ಬೇರು, ಗಂಟಕಚೋರ ಇವುಗಳ ಕಷಾಯದಲ್ಲಿ ಸಕ್ಕರೆ ಹಾಕಿ ಕೊಡಬೇಕು.

೩ ಜೇಕಿನಗಡ್ಡೆ, ಪದ್ಮಕಾಷ್ಠ, ಕಲ್ಲಸಬ್ಬಸಿಗಿ, ಚಂದನ, ಜಾಜಿ, ಶತಾವರಿ, ಜ್ಯೇಷ್ಠಮಧು, ಬೇವು, ಬಾಳದ ಬೇರು, ಚಿತ್ರಮೂಲ, ರಕ್ತಚಂದನ ಇವುಗಳ ಕಷಾಯದಿಂದ ಬಾಯಿಂದ ಕಾರುವ ನೆತ್ತರವು ಕಟ್ಟಾಗುವದು.

೪ ಗಣಜಲಿನೊಪ್ಪು, ನೆಲಿಂಗಳ, ಅಡಸಾಲ, ಕಲ್ಲುಸಬ್ಬಸಿಗಿ, ಸಾವಿ ಮತ್ತು ಕಟುಕರೋಣಿ ಇವುಗಳ ಕಷಾಯದಿಂದ ಈ ಸನ್ನಿಪಾತದ ಶಮನವಾಗುತ್ತದೆ

೫ ಇಪ್ಪೇಕೊಗಟಿ, ಜ್ಯೇಷ್ಠಮಧು, ಫಾಲಸಾ, ರಕ್ತಚಂದನ, ಪದ್ಮಕಾಷ್ಠ, ದೇವದಾರು, ನುಊರೆಲೆಹೊನ್ನೆಯ ಹಣ್ಣು ಇವುಗಳ ಕಷಾಯವನ್ನು ಆರಿಸಿ, ಸಕ್ಕರೆ ಬೆರಿಸಿ ಕೊಡಬೇಕು.

೬ ಬಾಯಿಂದ ನೆತ್ತರ ಬೀಳಹತ್ತಿದರೆ:—ಪದ್ಮಕಾಷ್ಠ, ಬಿಳೇಚಂದನ, ಕಲ್ಲುಸಬ್ಬಸಿಗಿ, ಜೇಕಿನಗಡ್ಡೆ, ಜಾಜಿಮಲ್ಲಿಗೆಯ ಸೊಪ್ಪು, ತ್ರಿಫಳ, ರಕ್ತಚಂದನ, ಬಾಳದಬೇರು, ಜ್ಯೇಷ್ಠಮಧು, ಬೇವು ಇವುಗಳ ಕಷಾಯದಿಂದ ನೆತ್ತರ ಕಾರುವದು ನಿಲ್ಲುತ್ತದೆ.

೭ ರಕ್ತಷ್ಠೀವಿಸನ್ನಿಪಾತಕ್ಕೆ ಅಥವಾ ಅನ್ನಾಶಯದೊಳಗೆ ಜೀರ್ಣಕ್ಷತವಿದ್ದುದರಿಂದ ರಕ್ತಬೀಳಹತ್ತಿದರೆ ಇಲ್ಲವೆ ಮತ್ತಾವ ಕಾರಣದಿಂದಾದರೂ ರಕ್ತ ಬೀಳಹತ್ತಿದರೆ ಅದನ್ನು ನಿಲ್ಲಿಸಲಿಕ್ಕೆ ಟರ್ಪೇಂಟಾಯಿನ್ ಇದು ಒಳ್ಳೆ ಹಿರ್ಗಿನ ಔಷಧವಾಗಿದೆ. ಇಂಥ ಪ್ರಸಂಗಗಳಲ್ಲಿ ಟರ್ಪೇಂಟಾಯಿನ್‌ನ್ನು ಅಲ್ಪ ಪ್ರಮಾಣದಲ್ಲಿ ಕೊಡಬೇಕು. ಅಂದರೆ ೫ ರಿಂದ ೧೦ ಹನಿಗಳ ವರೆಗೆ ಹಾಲಿನೊಡನೆ ಅಥವಾ ಮಜ್ಜಿಗೆಯೊಡನೆ ಇಲ್ಲವೆ ನೀರಿನೊಡನೆ ಕೊಡಬೇಕು. ಪ್ರತಿಸಾರೆ ಹಾಲು, ಮಜ್ಜಿಗೆ ಅಥವಾ ನೀರು ಇವುಗಳನ್ನು ೨-೩ ತೊಲಿ ಹಾಕಿ ಕೊಡುವದು.

---

## (೧೧) ಪ್ರಲಾಪಕ ಸನ್ನಿಪಾತ.

ಲಕ್ಷಣ:—ನಡುಗು, ಬಡಬಡಿಕೆ, ಸಂತಾಪ, ತಲೆನೋವು, ಇಂಬಿನ ಮಾತುಗಳನ್ನಾಡುವದು, ಸ್ವೇಚ್ಛತೆಯ ಒಗ್ಗೆ ಅಭಿರುಚಿ, ಪ್ರಜ್ಞಾದಪ್ರೀಣ, ಅತಿಜ್ವರ, ದಾಹ, ಬುದ್ಧಿನಾಶ, ಕ್ಷಣದಲ್ಲಿ ಅತಿ ಬಡಬಡಿಕೆ, ಕ್ಷಣದಲ್ಲಿ ತೀರ ಸ್ತಬ್ಧತೆ ಈ ಎಲ್ಲ ಲಕ್ಷಣಗಳಾಗುತ್ತಿರುವದರಿಂದ ಈ ಸನ್ನಿಪಾತದ ರೋಗಿಯು ಬದುಕುತ್ತಾನೆಂದು ತಿಳಿಯುವದು ವ್ಯರ್ಥವು.

### ಪ್ರಲಾಪಕ ಸನ್ನಿಪಾತಕ್ಕೆ ಉಪಾಯಗಳು.

೧ ತಗರ, ಹಿರೇಮದ್ದಿನಬೇರು, ತುಂಬೀಗಿಡ, ಕಡವಾಳ, ದೇವದಾರು, ಕಟುಕರೋಣಿ, ಬಂದೆಲಗ, ಜಟಾಮಾಂಸಿ, ಜೇಕಿನಗಡ್ಡೆ, ಶಕ್ಕಿಕಾಯಿ, ಅಳಲೇ

ಕಾಯಿ, ದೀಪದ್ರಾಕ್ಷಿ, ದಶಮೂಲ, ಬಾಳದಬೇರು, ಶುಂಠಿ, ಚಂಗಸ, ಅಡಸಾಲ ಇವುಗಳ ಕಷಾಯವು ಪ್ರಲಾಪಕ ಸನ್ನಿಪಾತಕ್ಕೆ ಗುಣಕಾರಿಯಾಗುವದು.

೨ ಜೇಕಿನಗಡ್ಡೆ, ಬಾಳದಬೇರು, ದಶಮೂಲ, ಶುಂಠಿ, ಕಲ್ಲುಸಬ್ಬಸಿಗಿ, ರಕ್ತಚಂದನ, ನಂದಿಮರದ ತೊಗಟಿ, ಅಡಸಾಲ ಇವುಗಳನ್ನು ಸಮಭಾಗ ತಕ್ಕೊಂಡು ಕಷಾಯ ಮಾಡಿ ಕೊಡಬೇಕು.

೩ ಶುದ್ಧ ಪಾರಜ, ಮನಶೀಲ, ನೇಪಾಳದಬೇರು, ಇಂಗಳೀಕ, ಕಾಂತ ಭಸ್ಮ, ತಾಮ್ರಭಸ್ಮ, ಹರದಾಳ, ಮಾಕ್ಷಿಕ ಇವೆಲ್ಲ ೧-೧ ಭಾಗ, ಗಂಧಕ ೨ ಭಾಗ ಇವೆನ್ನೆಲ್ಲ ಒಟ್ಟುಗೂಡಿಸಿ ಅದನ್ನು ಮಜ್ಜಿಗೆಗಿಡ, ಲಿಂಬೀಹುಳಿ, ಹುಳಚುಕ್ಕ ಖಾರಗೆಣಸು, ಲೆಕ್ಕಿ ಇವುಗಳ ಪ್ರತ್ಯೇಕ ರಸದಲ್ಲಿ ಒಂದೊಂದು ದಿನ ಅರೆದು ಬಳಿಕ ಮುಂಡೀಕಸದ ರಸದಲ್ಲಿ ೨ದಿವಸ ಅರೆಯಬೇಕು. ನಂತರ ಅದನ್ನು ಒಂದು ಮುಚ್ಚಳದಲ್ಲಿ ಹಾಕಿ ಅದರ ಮೇಲೆ ಮತ್ತೊಂದು ಮುಚ್ಚಳ ಮುಚ್ಚಿ ಅದಕ್ಕೆ ಹಸಿಅರಿವೆ ಸುತ್ತಿ ಅದರ ಮೇಲೆ ಅರಲು ಮೆತ್ತಿ ಭೂಧರ ಯಂತ್ರದಲ್ಲಿ ೪ ಪ್ರಹರಗಳ ವರೆಗೆ ಪಚನ ಮಾಡಿಸಬೇಕು. ಅದು ತನ್ನಷ್ಟಕ್ಕೆ ತಾನೇ ತಣ್ಣಗಾದ ಬಳಿಕ ಚಿತ್ರಮೂಲದ ಕಷಾಯದಲ್ಲಿ ೨ ಪ್ರಹರಗಳ ವರೆಗೆ ಅರೆದು ಸಿದ್ಧಮಾಡಬೇಕು. ಇದಕ್ಕೆ ಮೃತೋತ್ಥಾಪನ ರಸವೆನ್ನುವರು. ಈ ರಸ ೧ ಮಾಸಿಯಷ್ಟು ತಕ್ಕೊಂಡು ಇಂಗು, ಶುಂಠಿ, ಮೆಣಸು, ಹಿಪ್ಪಲಿ, ಕರ್ಪೂರ ಇವುಗಳ ಚೂರ್ಣದೊಡನೆ ಕೊಡಬೇಕು. ಇದರಿಂದ ಸನ್ನಿಪಾತಗ್ರಸ್ತನಾಗಿ ಮರಣೋನ್ಮುಖನಾಗಿದ್ದರೂ ಕೂಡ ಅವನು ತತ್ಕ್ಷಣದಲ್ಲಿ ಸಾವಧನಾಗುತ್ತಾನೆ. ಈ ಔಷಧಕ್ಕೆ ಪಥ್ಯ:—ಆಕಳ ಹಾಲು, ಅನ್ನ.

---

## (೧೨) ಜಿಹ್ವಕ ಸನ್ನಿಪಾತಜ್ವರ.

ಲಕ್ಷಣ:—ಬಿರುಸು ಮತ್ತು ಮುಳ್ಳುಗಳಿಂದ ಯುಕ್ತವಾದ ನಾಲಿಗೆ, ಕಿವಿ ಕೇಳದಿರುವದು, ಬಾಯಿ ಬಂದಾಗೋಣ, ಜ್ವರ, ದಾಹ, ಕೆಮ್ಮು, ಮೋಹ, ಶ್ವಾಸ, ಸಂತಾಪಗಳಿಂದ ವ್ಯಾಕುಲತೆ, ಬಲಹೀನತೆ ಇತ್ಯಾದಿ ಲಕ್ಷಣಗಳಿಂದ ಯುಕ್ತವಾದ ಈ ಸನ್ನಿಪಾತವು ಕಠಿಣವೇ ಸರಿ.

### ಜಿಹ್ವಕ ಸನ್ನಿಪಾತಕ್ಕೆ ಉಪಾಯಗಳು.

೧ ನೇಪಾಳದ ಬೇರು, ಶುಂಠಿ, ಹಿಪ್ಪಲಿ, ದೊಡ್ಡಹಿಪ್ಪಲಿ, ಎಕ್ಕೀಬೇರು, ಕೆಂಪು ಔಡಲಬೇರು ಇವುಗಳನ್ನು ಕ್ರಮವಾಗಿ ಒಂದಕ್ಕಿಂತ ಒಂದು ಹೆಚ್ಚು ತಕ್ಕೊಂಡು ಅಲ್ಲದ ರಸದಲ್ಲಿ ಅರೆದು, ಅವರೇ ಕಾಳಷ್ಟು ಗುಳಿಗೆ ಮಾಡಬೇಕು.

ಒಂದೊಂದು ಗುಳಿಗೆಯನ್ನು ಜೇನುತುಪ್ಪ-ತುಪ್ಪಗಳೊಡನೆ ತಕ್ಕೊಂಡರೆ ಜಿಹ್ವಕ ಸನ್ನಿಪಾತದ ನಾಶವಾಗುತ್ತದೆ.

೨ ಬಜೆ, ನೆಲಗುಳ್ಳಬೇರು, ನೆಲಿಂಗಳ, ರಾಸನೆ, ಅಮೃತಬಳ್ಳಿ, ಶುಂಠಿ, ದುಷ್ಟಪುಚೆಟ್ಟು, ಕಟುಕರೋಹಿಣಿ, ತಾವರೆಗಡ್ಡೆ, ಒಂದೆಲಗ, ಗಂಟುಭಾರಂಗಿ, ನೆಲಬೇವು, ಆಡಸಾಲ, ಕಚೂರ ಇವುಗಳ ಕಷಾಯದಿಂದ ಈ ಸನ್ನಿಪಾತವು ಗುಣವಾಗುತ್ತದೆ.

೩ ದೇವದಾರು, ಬೇವು, ಅಳಲೇಕಾಯಿ, ತಾರೀಕಾಯಿ, ಕಹಿಪಡುವಲ, ಅರಿಷಿಣ, ಮರಅರಿಷಿಣ, ಶುಂಠಿ, ನೆಲಗುಳ್ಳಬೇರು, ತಾವರೆಗಡ್ಡೆ, ಜೇಕಿನಗಡ್ಡೆ, ಅಮೃತಬಳ್ಳಿ, ಅಡಸಾಲ ಇವುಗಳ ಕಷಾಯವು ಕಷ್ಟಸಾಧ್ಯಜಿಹ್ವಕ ಸನ್ನಿಪಾತದ ನಾಶಮಾಡುತ್ತದೆ.

೪ ನೆಲಬೇವು, ಆಕಳಕರಿ, ಕೊಳಂಜನ, ಕಚೂರ, ಹಿಪ್ಪಲಿ ಇವುಗಳ ಚೂರ್ಣವನ್ನು ಸಾಸುವೆಯ ಎಣ್ಣೆ ಹಾಗು ಮಾದಾಳದ ರಸ ಇವುಗಳಲ್ಲಿ ಕಲಸಿ, ಅರೆದು ಗುಳಿಗೆ ಮಾಡಿ ಬಾಯಲ್ಲಿ ಹಿಡಿಯಬೇಕು. ಅಂದರೆ ಜಿಹ್ವಕದ ದೋಷವು ಹೋಗುತ್ತದೆ.

೫ ತಾವರೆಗಡ್ಡೆ, ಉರಿಹೊನ್ನೆ, ಕೋಷ್ಟ, ಕಡವಾಳ ಇವುಗಳ ಚೂರ್ಣವನ್ನು ಜೇನುತುಪ್ಪದೊಡನೆ ನೆಕ್ಕಬೇಕು. ಇದರಿಂದ ವಾಣಿಯು ಶುದ್ಧವಾಗುತ್ತದೆ.

---

## (೧೩) ಅಭಿನ್ಯಾಸ ಸನ್ನಿಪಾತ ಜ್ವರ.

ಲಕ್ಷಣ:—ಇದರಲ್ಲಿ ಎಲ್ಲ ಸನ್ನಿಪಾತದ ಲಕ್ಷಣಗಳು ಸಂಪೂರ್ಣವಾಗಿರುತ್ತವೆ; ಮತ್ತು ದಾಹ, ಮೋಹಗಳೂ ಇರುತ್ತವೆ. ತ್ರಿದೋಷಗಳ ಮೂಲಕ ಮೋರೆಯ ಮೇಲೆ ಎಣ್ಣೆಮಿಂಚು ಇರುತ್ತದೆ. ನಿದ್ದೆ, ಬಲಹೀನತೆ, ಕಷ್ಟದಿಂದ ಶಬ್ದೋಚ್ಚಾರ, ಸ್ಮೃತಿನಾಶ, ದಮ್ಮು ಹತ್ತೋಣ ಇವೆಲ್ಲ ಲಕ್ಷಣಗಳಾಗುವದರಿಂದ ಈ ಸನ್ನಿಪಾತವು ಕೇವಲ ಮೃತ್ಯುಸ್ವರೂಪವೇ ಆಗಿರುತ್ತದೆ. ಇದಕ್ಕೆ ಬಹು ಬೇಗನೆ ಉಪಾಯಮಾಡಬೇಕು. ಎಲ್ಲಿಯ ವರೆಗೆ ಶ್ವಾಸೋಚ್ಛ್ವಾಸವು ನಡೆಯುವದೋ, ಗಂಟಲಲ್ಲಿ ಔಷಧವು ಇಳಿಯುವದೋ ಅಲ್ಲಿಯ ವರೆಗೆ ಔಷಧೋಪಚಾರ ಮಾಡಲಿಕ್ಕೆ ಹಿಂಸರಿ ಮಾಡಕೂಡದು. ಯಾಕಂದರೆ ದೈವಗತಿಯು ವಿಚಿತ್ರವಾದದ್ದು. ಒಮ್ಮೊಮ್ಮೆ ಇಂಥ ನಿರಾಶೆಯ ಸ್ಥಿತಿಯಿಂದಲೂ ರೋಗಿಯು ಬದುಕುವದುಂಟು. ಈ ಬೇನೆಯಲ್ಲಿ ಕ್ಷೀಣತೆಯು ಬಹಳ ಇರುವದರಿಂದ ಇದಕ್ಕೆ "ಹತೌಜಸ" ಸನ್ನಿಪಾತವೆಂತಲೂ ಅನ್ನುತ್ತಾರೆ.

## ಅಭಿನ್ಯಾಸ ಸನ್ನಿಪಾತಕ್ಕೆ ಉಪಾಯಗಳು.

೧ ನೆಲಗುಳ್ಳಬೇರು, ಗುಳ್ಳದಬೇರು, ಅಮೃತಬಳ್ಳಿ, ದೀಪದ್ರಾಕ್ಷಿ, ಜೀರಿಗೆ, ತ್ರಿಕಟು, ದುಷ್ಟಪುಚೆಟ್ಟು, ವಾಯುವಿಡಂಗ ಇವುಗಳ ಕಷಾಯ ಮಾಡಿ ಅದರಲ್ಲಿ ಅಕ್ಕಿಯನ್ನು ತುಪ್ಪದಲ್ಲಿ ಹುರಿದು, ಕಾಟಿ ಮಾಡಿ ಬಿಸಿ ಬಿಸಿ ಇರುವಾಗಲೆ ಅದನ್ನು ರೋಗಿಗೆ ಕುಡಿಸಬೇಕು ಇದರಿಂದ ಬಿಕ್ಕು, ಶ್ವಾಸ, ಒಣಕೆಮ್ಮು, ವಾಯು ಮಲಮೂತ್ರ ಕಟ್ಟೋಣ, ಅಭಿನ್ಯಾಸ ಸನ್ನಿಪಾತಗಳ ಶಮನವಾಗುತ್ತದೆ.

೨ ನಿರಾಮೆಬಳ್ಳಿ, ದಶಮೂಲ, ಕೊಳಂಜನ, ಔಡಲ ಬೇರು, ಅಜ್ವಾನ, ಗಂಟುಭಾರಂಗಿ, ಅಮೃತಬಳ್ಳಿ, ಆಡಸಾಲ, ಕಚೂರ, ದುಷ್ಟಪುಚೆಟ್ಟು, ತ್ರಿಕಟು, ಬಿಳೀಗಣಜಲಿ ಬೇರು ಇವುಗಳ ಕಷಾಯವನ್ನು ಗೋಮೂತ್ರದಲ್ಲಿ ಮಾಡಿ ಕುಸ ಬೆಚ್ಚಗಿರುವಾಗಲೆ ಕೊಟ್ಟರೆ ಈ ಸನ್ನಿಪಾತವು ಗುಣವಾಗುತ್ತದೆ.

೩ ಮಾಬಳ್ಳಿ, ಔಡಲಬೇರು, ತಾವರೆಗಡ್ಡೆ, ನಿರಾಮೆಬಳ್ಳಿ, ಶುಂಠಿ, ಅಮೃತಬಳ್ಳಿ, ದಶಮೂಲ, ಕಚೂರ, ದುಷ್ಟಪುಚೆಟ್ಟು, ಆಡಸಾಲದ ಎಲೆ, ಗಂಟುಭಾರಂಗಿ, ಬಿಳೀಗಣಜಲಿ ಬೇರು ಇವುಗಳ ಕಷಾಯವನ್ನು ಗೋಮೂತ್ರದಲ್ಲಿ ಮಾಡಿ ಕೊಟ್ಟರೆ, ನಾಡಿಗಳ ಶೋಧನವಾಗಿ ಅಭಿನ್ಯಾಸ ಸನ್ನಿಪಾತದ ನಾಶವಾಗುತ್ತದೆ.

೪ ಇಂಗು-ಶುಂಠಿಗಳ ಚೂರ್ಣವನ್ನು ಕಾಡಿಗ್ಗರಗು, ಲಿಂಬೀರಸಗಳಲ್ಲಿ ಅರೆದು ನೆಕ್ಕಿಸಬೇಕು.

---

ಮೇಲೆ ವಿವರಿಸಿದ ೧೩ ಬಗೆಯ ಸನ್ನಿಪಾತದ ಹೊರತು ೧೪ನೆಯದಾದ

## ಹಾರಿದ್ರಕ ಸನ್ನಿಪಾತವು.

ಲಕ್ಷಣ:—ದೇಹ, ಉಗುರು, ಕಣ್ಣು, ಕೈಕಾಲು ಇವೆಲ್ಲ ಅರಿಷಿಣದಂತೆ ಹಳದೀವರ್ಣದವಾಗುತ್ತವೆ. ಜ್ವರ, ಕಫ, ಕೆಮ್ಮು ಮುಂತಾದ ಲಕ್ಷಣಗಳು ಯಾವ ಸನ್ನಿಪಾತದಲ್ಲಿ ಆಗುತ್ತವೆಯೋ ಅದಕ್ಕೆ ಹಾರಿದ್ರಕ ಸನ್ನಿಪಾತವೆನ್ನುವರು. ಇದು ೧೩ ಸನ್ನಿಪಾತಗಳಿಗಿಂತಲೂ ಭಿನ್ನವಾದ ಕಾಲರೂಪ ರೋಗವೇ ಆಗಿದೆ. ಇದು ವೈದ್ಯದಿಂದ ಶಮನಸಾಧ್ಯವಿಲ್ಲ. ಇದಕ್ಕೆ ಮುಖ್ಯವಾಗಿ ದೈವಬಲವೇ ಕಾರಣವು.

### ಹಾರಿದ್ರಕ ಸನ್ನಿಪಾತಕ್ಕೆ ಉಪಾಯಗಳು.

೧ ಮಹಾಮೃತ್ಯುಂಜಯ ಇಲ್ಲವೆ ಕಾಲಕೂಟ ಮಾತ್ರೆಯನ್ನು ಖಾರಗೆಣಸಿನ ರಸ, ಕಲ್ಲುಸಕ್ಕರೆಗಳೊಡನೆ ಕೊಡಬೇಕು.

ಈ ಸನ್ನಿಪಾತಕ್ಕೆ ಪಥ್ಯ:—ಚತುರ್ಥಾಂಶ ಕಾಥೆ ಮಾಡಿ ಸಿದ್ಧವಾದ

ಆರಿದ ನೀರು ಕುಡಿಯಲಿಕ್ಕೆ ಕೊಡಬೇಕು. ಹಳೇ ಅಕ್ಕಿಯ ಗಂಜಿಯನ್ನು ಸೈಂಧವಲವಣದೊಡನೆ ಕುಡಿಯಲಿಕ್ಕೆ ಕೊಡಬೇಕು. ಪಿತ್ತಾಧಿಕ್ಯವಿದ್ದರೆ, ಕಲ್ಲುಸಕ್ಕರೆ ಹಾಕಿ ಕೊಡಬಹುದು. ತೊಗರಿ, ಹೆಸರು, ಹುರುಳಿ ಇವುಗಳ ಅಷ್ಟಮಾಂಶ ಕಷಾಯದ ಕಾಟಿಯಲ್ಲಿ ಭಕ್ತದ ಅರಳಲ್ಲಿ, ೧೬ ಪಾಲು ನೀರು ಹಾಕಿ, ಕುದಿಸಿ, ೪ ಪಾಲು ಉಳಿಯಿತೆಂದರೆ ಆ ಕಾಟಿಯನ್ನು ರೋಗಿಗೆ ಕೊಡಬೇಕು.

ಇದಕ್ಕೆ ಅಪಥ್ಯ:— ತಣ್ಣೀರು, ಮದ್ಯ, ಮಾಂಸ, ಗಾಳಿ, ಅರಳಿಯ ಗಾದಿ (ಹಾಸಿಗೆ), ಜಡಾನ್ನ, ಬಹಳ ಮಾತು, ದೊಡ್ಡ ಸಪ್ಪಳ ಇಲ್ಲವೆ ಗಲಾಟೆಗಳು ವರ್ಜ್ಯ.

## (೧೫) ಸಮತ್ರಿದೋಷ ಲಕ್ಷಣ.

ವಾತ, ಪಿತ್ತ, ಕಫ ಇವು ಒಂದೇ ಕಾಲಕ್ಕೆ ಸಮಬಲದಿಂದ ಪ್ರಕೋಪಗಳಾಗಿ, ಅವುಗಳ ಪೂರ್ವೋಕ್ತ ಸಂಪೂರ್ಣ ಲಕ್ಷಣಗಳು ಆಗುತ್ತವೆ; ಮತ್ತು ಅದರಿಂದ ಇಂದ್ರಿಯಗಳ ಎಲ್ಲ ವ್ಯಾಪಾರಗಳು ಕಟ್ಟಾಗುತ್ತವೆ. ಏನನ್ನೂ ತಿನ್ನುವದಾಗುವದಿಲ್ಲ. ಅತಿ ಶ್ವಾಸ, ಮೈ ನೆಟೆಯುವದು, ನೆಟ್ಟಗಣ್ಣಿಗೆ ಬೀಳುವದು ಈ ಲಕ್ಷಣಗಳಾಗುತ್ತವೆ. ಈ ಲಕ್ಷಣಗಳಿಂದ ಯುಕ್ತನಾದ ರೋಗಿಯು ೩-೪ ದಿನಗಳಲ್ಲಿ ಸಾಯುತ್ತಾನೆ.

ಯಾವ ದೋಷವು ಹೆಚ್ಚಾಗಿದೆಯೋ ಅದನ್ನು ಕಡಿಮೆ ಮಾಡಬೇಕು; ಮತ್ತು ಯಾವದು ಕಡಿಮೆಯಾಗಿದೆಯೋ ಅದನ್ನು ಯೋಗ್ಯ ಮರ್ಯಾದೆಯವರೆಗೆ ಹೆಚ್ಚಿಸಬೇಕು. ಅಂದರೆ ವೈದ್ಯನು ಅವುಗಳನ್ನು ತನ್ನ ಹಿಡಿತದಲ್ಲಿ ತಂದುಕೊಳ್ಳಬೇಕು. ಬೆಳೆದ ದೋಷವನ್ನು ಕಡಿಮೆ ಮಾಡಿದರೆ ಮಧ್ಯಮವಾದ ದೋಷವು ತನ್ನಷ್ಟಕ್ಕೆ ತಾನೇ ಶಾಂತವಾಗುತ್ತದೆ.

## ೨೭ ಆಗಂತುಕ ಜ್ವರಗಳು.

[ಇದರಲ್ಲಿ ೧೫ ಪ್ರಕಾರಗಳಿರುತ್ತವೆ.]

ಕಾರಣಗಳು:— ಈ ಜ್ವರಗಳು ಅತಿಸಿಟ್ಟು, ಶೋಕ, ಭಯ, ಚಿಂತೆ, ಅತಿ ಲಾಭ, ಹಾನಿ, ಸಂತಾಪ, ಶ್ರಮ, ಆಘಾತ, ಶಸ್ತ್ರಾಘಾತ, ಭೂತಬಾಧೆ, ಶೂಲಿ, ಪೀಡೆಯನ್ನುಂಟು ಮಾಡುವ ರೋಗ, (ನಾರುಹುಣ್ಣು, ಕುರ, ಮೊಂಡೆಬೇನೆ ಇತ್ಯಾದಿ) ಮುಂತಾದ ಕಾರಣಗಳಿಂದ ಬರುತ್ತವೆ. ವೈದ್ಯರು ಆಯಾ ಕಾರಣಗಳನ್ನು ಚೆನ್ನಾಗಿ ವಿಚಾರ ಮಾಡಿ ಔಷಧಗಳನ್ನು ಯೋಜಿಸಬೇಕು. ಇವುಗಳ

ಹೊರತು ಮೈಲಿ, ಗೊಬ್ಬರ, ಸಿಡುಬುಗಳೇಳುವ ಮೊದಲು ೩ ದಿವಸ ಸಣ್ಣ ಹುಡುಗರಿಗೆ ಅಥವಾ ದೊಡ್ಡವರಿಗೆ ಅತಿಜ್ವರ ಬರುತ್ತವೆ; ಆದರೆ ಆ ಜ್ವರಗಳು ಆಯಾರೋಗದ ಪ್ರತೀಕಾರವಾಯಿತೆಂದರೆ ತಾವೇ ಕಡಿಮೆಯಾಗುವವು. ಅವಕ್ಕೆ ಬೇರೆ ಔಷಧವು ಬಹುಶಃ ಬೇಕಾಗುವದಿಲ್ಲ. ಇಂಥ ಜ್ವರಗಳಿಗೆ ಲಂಘನವನ್ನು ಮಾಡಲೇಬಾರದು. ಇದರ ಹೊರತು ಸಾಂಸರ್ಗಿಕ ಜ್ವರಗಳ ಲಕ್ಷಣ ಹಾಗು ಉಪಾಯಗಳನ್ನು ಮುಂದೆ ಪ್ರತ್ಯೇಕವಾಗಿ ಕೊಟ್ಟಿದೆ.

---

## (೧) ಅಭಿಚಾರ ಜ್ವರ.

ಲಕ್ಷಣ:—ತೃಷೆ, ಮೋಹ, ಮೈಮೇಲೆ ಹುಣ್ಣು, ಭ್ರಮೆ, ಮೂರ್ಛೆ, ಸಂತಾಪಚಿತ್ತ, ದಾಹ, ಉತ್ತರೋತ್ತರ ರೋಗದ ಬೆಳವಣಿಗೆ ಈ ಲಕ್ಷಣಗಳಾಗಿ ಹೋಮ, ಮಂತ್ರ, ತಂತ್ರಗಳ ವಿಪರೀತ ಕಾರಣಗಳಿಂದ ಈ ಜ್ವರವು ಮನಸ್ಸಿಗೆ ಧಕ್ಕೆ ಕೊಡುತ್ತದೆ.

ಉಪಾಯ:—ಮನಸ್ಸಿಗೆ ಶಾಂತಿಯುಂಟಾಗುವಂಥ ಪ್ರಶ್ಯ ಉಪಾಯ ಗಳನ್ನು ಮಾಡಬೇಕು. ಅವಾವವೆಂದರೆ:—ಹೋಮ, ದೇವರಪೂಜೆ, ವ್ರತ, ತೀರ್ಥಯಾತ್ರೆ, ದೇವರಿಗೆ ಪ್ರದಕ್ಷಿಣೆ ಮುಂತಾದ ಭಾವುಕ ಉಪಾಯಗಳನ್ನು ಮಾಡಿಸಿ ಜ್ವರ ಮುಕ್ತವಾಗಬೇಕು.

---

## (೨) ಶಾಪಜ್ವರ

ಲಕ್ಷಣ:—ಬ್ರಾಹ್ಮಣ ಗುರು, ವೃದ್ಧ, ಸಿದ್ಧ, ಮಹಾಸಾಧು, ಇವರ ಶಾಪದಿಂದಲೂ, ಅನಿಷ್ಟ ವಚನಗಳಿಂದಲೂ ಮನಸ್ಸಿಗೆ ಧಕ್ಕೆಯಾಗಿ ಈ ಜ್ವರಗಳು ಬರುತ್ತವೆ. ಇದರ ಲಕ್ಷಣಗಳು ಅಭಿಚಾರಜ್ವರದಂತೆಯೇ ತೃಷೆ ಮೋಹಾದಿ ಗಳಾಗುತ್ತವೆ.

ಉಪಾಯ:—ಯಾವ ವ್ಯಕ್ತಿಯಿಂದ ಅನಿಷ್ಟ ವಚನದ ಶಾಪವಾಗಿರು ವದೋ ಆ ವ್ಯಕ್ತಿಗೆ ಶರಣುಹೋಗಬೇಕು; ಇಲ್ಲವೆ ಜಪ, ಹೋಮ, ದಾನ, ವ್ರತಗಳಿಂದ ಮನಸ್ಸಿಗೆ ಶಾಂತಿಯುಂಟಾಗುವಂತೆ ಮಾಡಬೇಕು. ಅಂದರೆ ಜ್ವರಮುಕ್ತನಾಗುವನು.

---

## (೩) ಭೀತಿಜ್ವರ.

ಲಕ್ಷಣ:—ಭಯಂಕರವಾದ ಶಬ್ದದಿಂದ ಇಲ್ಲವೆ ಸಪ್ಪಳದಿಂದ ಇಲ್ಲವೆ ಮೈ ಮೇಲೆ ದೊಡ್ಡ ಪೇಚು ಬಂದಿರುವದರಿಂದ ಅಥವಾ ಬರುವ ಭಯದಿಂದ

ಮನಸ್ಸಿಗೆ ಧಕ್ಕಿಯಾಗಿ ಈ ಜ್ವರಗಳು ಬರುತ್ತವೆ. ಈ ಜ್ವರದಲ್ಲಿ ಬಡಬಡಿಕೆ, ತಲೆಶೂಲಿ, ನಡುಗು, ಕತ್ತಲಡಲ್ಲಿ ಅಡಗಿ ಕೂಡುವ ಇಚ್ಛೆ, ಮೋರೆಮುಚ್ಚಿ ಕೊಳ್ಳುವದು ಮುಂತಾದ ಲಕ್ಷಣಗಳಾಗುತ್ತವೆ.

ಉಪಾಯ:—ಭಯನಾಶಕ ಉಪಾಯ ಮಾಡುವದು; ರೋಗಿಗೆ ಧೈರ್ಯ ಕೊಡಬೇಕು. ಸಮಾಧಾನದ ಮಾತುಗಳನ್ನು ಹೇಳಬೇಕು; ಮತ್ತು ಅವನಿಗೆ ಆನಂದ ಉತ್ಪನ್ನವಾಗುವಂಥ ಸುದ್ದಿಗಳನ್ನು ತಿಳಿಸಬೇಕು. ಅದರಿಂದ ಜ್ವರಪರಿಹಾರವಾಗುತ್ತದೆ.

---

## (೪) ಭೂತಾವೇಶಜ್ವರ.

ಲಕ್ಷಣ:—ಈ ಜ್ವರಗಳು ಪಿಶಾಚಿಗಳ ಸಂಬಂಧದಿಂದುಂಟಾಗುತ್ತವೆ. ಮನಸ್ಸಿನ ಉದ್ವಿಗ್ನತೆ, ನಗುವದು, ಅಳುವದು, ನಡುಗುವದು ಈ ಮೊದಲಾದ ಲಕ್ಷಣಗಳಾಗುವವು; ಅಲ್ಲದೆ ಲಜ್ಜೆ, ಬುದ್ಧಿ, ನಿದ್ದೆ ಇವುಗಳ ನಾಶವಾಗುತ್ತದೆ.

### ಭೂತಾವೇಶ ಜ್ವರಕ್ಕೆ ಉಪಾಯಗಳು.

೧ ಪಂಚಾಕ್ಷರಿ ಇಲ್ಲವೆ ದೇವಋಷಿಗಳಿಂದ ಉಪಚಾರ ಮಾಡಿಸತಕ್ಕದ್ದು.

೨ ಶನಿವಾರ ದಿವಸ ನಿಮಂತ್ರಣವನ್ನು ಕೊಟ್ಟು ರವಿವಾರ ಕಾಡಮೆಣಸಿನ ಬೇರನ್ನು ಶುಚಿರ್ಭೂತರಾಗಿ ತಂದು ಧೂಪಕೊಟ್ಟು ರೋಗಿಯ ಕೊರಳಲ್ಲಿ ಕಟ್ಟಬೇಕು.

೩ ಮೋಲಿನಂತೆಯೇ ಹೊತ್ತು ತಿರುಗುವ ಹೂವಿನಗಿಡದ(ಸೂರ್ಯಪಾನದ) ಬೇರನ್ನು ತಂದು ರೋಗಿಯ ಕಿವಿಗೆ ಕಟ್ಟಬೇಕು.

೪ ಪಡಿಯ ಗುದ್ದಿನೊಳಗಿನ ಮಣ್ಣನ್ನು ತಂದು ರೋಗಿಗೆ ತಿಲಕ ಹಚ್ಚಬೇಕು. ಇದರಿಂದ ಭೂತಜ್ವರಗಳು ನಿಲ್ಲುವವು.

೫ ಭೂತವಿದ್ಯೆಯಲ್ಲಿ ಹೇಳಿದ ಹುಗಿಯುವದು, ಮಂತ್ರ, ತಂತ್ರ ಇತ್ಯಾದಿ ಉಪಾಯಗಳಿಂದ ಈ ಜ್ವರವನ್ನು ಕಳೆಯಬೇಕು.

೬ ಭೂತ-ಪ್ರೇತಾದಿ ಜ್ವರಗಳಿಗೆ ಅಂಜನ:—ಬಳ್ಳೊಳ್ಳಿ, ಮೆಣಸು, ಹಾವಿನಪರಿಯ ಬೂದಿ, ಕಿರಿತಿಮಣಿ, ಇಂಗು, ಅಂಟುವಾಳಕಾಯಿ, ಒಜೆ, ನುಗ್ಗೀತೊಗಟೆ, ಇಂಗಳಾರ ಮೇಣ, ಬೇವಿನಬೀಜ ಇವನ್ನೆಲ್ಲ ಸಮಭಾಗ ತಕ್ಕೊಂಡು ಕತ್ತೆಯ ಉಚ್ಚೆಯಲ್ಲಿ ಅರೆದು ಗುಳಿಗೆ ಕಟ್ಟಬೇಕು. ಅದನ್ನು ನೀರಲ್ಲಿ ತೆಯ್ದು ಅಂಜನ ಮಾಡಿದರೆ ಎಲ್ಲ ಭೂತಪ್ರೇತಾದಿ ದೋಷಗಳೂ ಹೋಗುತ್ತವೆ.

---

## (೫) ಕಾಮಜ್ವರ.

ಲಕ್ಷಣ:—ಯುವಕ-ಯುವತಿಯರ ಶರೀರದಲ್ಲಿ ಕಾಮ ಸಂಚಾರವಾಗಲು, ಇಚ್ಛಿತ ಕಾಲಕ್ಕೆ ಸ್ತ್ರೀ-ಪುರುಷರ ಸಂಭೋಗವಾಗದಿದ್ದರೆ ಈ ಜ್ವರವುಂಟಾಗುತ್ತದೆ. ಇದರಲ್ಲಿ ಸ್ತ್ರೀಪುರುಷ ವಿಷಯಕ ಚಿಂತೆ, ಶರೀರ ದಾಹ, ಮನಸ್ಸಿನ ಚಾಂಚಲ್ಯ, ಅವಯಗಳ ಬಲಹೀನತೆ, ಆಲಸ್ಯ, ಅನ್ನದ ಮೇಲೆ ಇಚ್ಛೆಯಾಗದಿರುವದು, ತಂಪು ಪದಾರ್ಥಗಳಲ್ಲಿ ಆಸಕ್ತಿ, ಬುದ್ಧಿ, ಮೋಹ, ಲಜ್ಜೆ ಇವುಗಳ ಕ್ಷಯ ಮತ್ತು ವಿರಹವೇದನೆ ಈ ಲಕ್ಷಣಗಳಾಗುತ್ತವೆ.

### ಕಾಮಜ್ವರಕ್ಕೆ ಉಪಾಯಗಳು.

೧ ಚಂದನ, ಕರ್ಪೂರ, ಬಾಳದಬೇರು ಇವುಗಳನ್ನು ತೇಯ್ದು, ಮೈಗೆ ತೊಡೆಯಬೇಕು. ಇದರಿಂದ ದಾಹವು ಶಾಂತವಾಗುತ್ತದೆ.

೨ ಕಮಲದ ಎಲೆಗಳ ಮೇಲೆ ಮಲಗಿಸಬೇಕು. ಕೆರೆ, ಕಾಲುವೆ, ನದಿಗಳ ದಡದ ತಂಪು ಪ್ರದೇಶಗಳಲ್ಲಿ ರೋಗಿಯನ್ನು ಸಂಚರಿಸಬೇಕು. ಅವನೊಡನೆ ಚೇಷ್ಟೆ, ವಿನೋದಪರಭಾಷಣ ಮಾಡಬೇಕು. ಅವನಿಗೆ ಬೀಸಣಿಕೆಯಿಂದ ಚೆನ್ನಾಗಿ ಗಾಳಿ ಹಾಕಬೇಕು.

೩ ಸುರೂಪ ಹಾಗು ಚತುರ ಸ್ತ್ರೀಪುರುಷರೊಡನೆ ಆಲಿಂಗನ ಮಾಡಿಸಬೇಕು.

೪ ಹವೀಜಗಳನ್ನು ರಾತ್ರಿಯಲ್ಲಿ ನೀರೊಳಗೆ ನೆನೆಹಾಕಿ, ಬೆಳಗ್ಗೆ ಕೈಯಿಂದ ಕಿವುಚಿ ಸೋಸಿ, ಆ ನೀರನ್ನು ಕಲ್ಲುಸಕ್ಕರೆಯೊಡನೆ ಕುಡಿಸಬೇಕು.

---

## (೬) ಶೋಕಜ್ವರ.

ಇದು ಶೋಕದಿಂದುಂಟಾಗುತ್ತದೆ. ಇದರ ಲಕ್ಷಣಗಳು ಭೀತಿಜ್ವರದಂತಿರುತ್ತವೆ.

ಉಪಾಯಗಳು:—೧ ಶೋಕ ಉತ್ಪನ್ನವಾಗದಂತೆ ಸಮಾಧಾನದ ಮಾತುಗಳನ್ನು ಲಾಲಿಸಬೇಕು. ೨ ಆನಂದದ ಸುದ್ದಿಗಳನ್ನು ತಿಳಿಸಬೇಕು. ೩ ಯಾವುದೊಂದು ಉಪಾಯದಿಂದ ಶೋಕವನ್ನು ಮರೆಯಿಸಬೇಕು. ಅಂದರೆ ಈ ಜ್ವರದ ಶಮನವಾಗುತ್ತದೆ.

---

## (೭) ಕ್ರೋಧಜ್ವರ.

ಲಕ್ಷಣ:—ಅತಿ ಕ್ರೋಧದಿಂದ ಈ ಜ್ವರವು ಉಂಟಾಗುತ್ತದೆ. ನಡುಗು, ತಲೆಶೂಲಿ, ದಾಹ, ಬಡಬಡಿಕೆ, ಕಣ್ಣು ಕೆಕ್ಕರಿಸುವದು ಮತ್ತು ಕೆಂಪಡರುವದು ಇವೇ ಮುಂತಾದ ಲಕ್ಷಣಗಳಾಗುತ್ತವೆ.

ಉಪಾಯ:—ಪಿತ್ತನಾಶಕ ಉಪಾಯಗಳನ್ನು ಮಾಡುವದು, ಆಶ್ವಾಸ, ಇಷ್ಟವಿಷಯದ ಪ್ರಾಪ್ತಿ ಮತ್ತು ಕ್ರೋಧದ ಕಾರಣವನ್ನು ಕಡಿಮೆಮಾಡು ಉಪಾಯಗಳನ್ನು ಮಾಡುವದರಿಂದ ಈ ಜ್ವರದ ಶಮನವಾಗುತ್ತದೆ.

---

## (೮) ವಿಷಜ್ವರ.

ಲಕ್ಷಣ:—ಯಾರಾದರೂ ವಿಷಪ್ರಯೋಗ ಮಾಡಿದರೆ ಇಲ್ಲವೆ ತಿಳಿಯ ಹೊಟ್ಟೆಯಲ್ಲಿ ವಿಷದ ಪ್ರವೇಶವಾದರೆ ಈ ಜ್ವರವುಂಟಾಗುತ್ತವೆ. ನಡುಗ ಮುಖಕಳೆ ಒದಲಾಗುವದು, ದೇಹವು ಹಳದಿ-ಹಸರು ಇಲ್ಲವೆ ಹಸರು-ಹಳದಿ ಬಣ್ಣದ್ದಾಗುವದು, ಗ್ಲಾನಿ ಬರುವದು ಮುಂತಾದ ಲಕ್ಷಣಗಳಾಗುವವಲ್ಲ ದಾಹ, ಅರುಚಿ, ಅತಿಸಾರ, ತೃಷೆ, ಹೊಟ್ಟೆಯಲ್ಲಿ ಉರಿ, ಮನಸ್ಸಿಗೆ ಸೊಗಸಾ ದಿರುವದು ಇತ್ಯಾದಿ ವಿಶೇಷ ಲಕ್ಷಣಗಳೂ ಆಗುತ್ತವೆ.

### ವಿಷಜ್ವರಕ್ಕೆ ಉಪಾಯಗಳು.

(೧) ವಿಷರೋಗಕ್ಕೆ ಹೇಳಿದ (ಚಿಕಿತ್ಸಾ ಪ್ರಭಾಕರ ಗ್ರಂಥದಲ್ಲಿ) ಉಪಾಯಗಳನ್ನು ಮಾಡಬೇಕು. (೨) ಜುಲಾಬು ಮತ್ತು ವಾಂತಿಮಾಡಿ ಬೇಕು. (೩) ಹೊಟ್ಟೆಯೊಳಗೆ ಪ್ರವೇಶಿಸಿದ ವಿಷದಷ್ಟು ಒಳಿಗಾರವನ ನೀರೊಡನೆ ಇಲ್ಲವೆ ಗೋಮೂತ್ರದೊಡನೆ ಕೊಡಬೇಕು.

---

## (೯) ತೀವ್ರೌಷಧಿ ಗಂಧಜನ್ಯಜ್ವರ.

ಲಕ್ಷಣ:—ಯಾವುದೊಂದು ಉಗ್ರ ಔಷಧ ಇಲ್ಲವೆ ಪದಾರ್ಥದ ವಾಸ ನೆಯಿಂದ ಈ ಜ್ವರ ಬರುತ್ತವೆ. ಮೂರ್ಛೆ, ಶಿರಶೂಲೆ, ತಲೆಶೂಲಿ, ಓಕರಿಕೆ ಸೀನು, ನಡುಗು ಈ ಲಕ್ಷಣಗಳಾಗುತ್ತವೆ.

ಉಪಾಯ:—ಪಿತ್ತಶಾಮಕ, ಶೀತಲ ಮತ್ತು ಸೌಗಂಧಿಕ ಉಪಾಯ ಗಳನ್ನು ಮಾಡಬೇಕಲ್ಲದೆ, ಸುಗಂಧದ ಹೂವು ಎಣ್ಣೆ ಮುಂತಾದವುಗಳನ್ನು ಆಘ್ರಾಣಿಸಬೇಕು.

---

## (೧೦) ಶ್ರಮಜನ್ಯಜ್ವರ.

ಲಕ್ಷಣ:—ಅತಿಶ್ರಮ, ಅತಿ ಮಾರ್ಗಾಯಾಸ, ಒಜ್ಜೆಹೊರುವದು ಒಕ್ಕಿತ ಕೆಲಸಕ್ಕಾಗಿ ಹೆಚ್ಚು ಮಾನಸಿಕ ಹಾಗು ದೈಹಿಕ ಶ್ರಮ ವಹಿಸುವದು ಅದು ಸಾಧಿಸದಿದ್ದರೆ ಈ ಶ್ರಮ ಜ್ವರಗಳು ಬರುತ್ತವೆ. ಈ ಜ್ವರದಲ್ಲಿ ಮೈ ನೋವು, ಸಂದುನೋವು, ಕಣ್ಣಿಗೆ ಮಬ್ಬು ಮುಂತಾದ ಲಕ್ಷಣಗಳಾಗುತ್ತವೆ

## ಶ್ರಮಜನ್ಯಜ್ವರಕ್ಕೆ ಉಪಾಯಗಳು.

೧ ಹೆಚ್ಚು ವಿಶ್ರಾಂತಿ ತಕ್ಕೊಳ್ಳಬೇಕು. ಸ್ವಸ್ಥವಾಗಿ ಮಲಗಿಕೊಳ್ಳಬೇಕು; ಇದರಿಂದ ಈ ಜ್ವರ ನಿಲ್ಲುವವು.

೨ ನೆರೆ, ಅಫು, ಭಂಗಿ ಮುಂತಾದ ಅಮಲಿನ ಪದಾರ್ಥಗಳನ್ನು ಪ್ರಮಾಣ ಮೀರದಂತೆ ಸೇವಿಸಬೇಕು.

೩ ಎಣ್ಣೆಹಚ್ಚಿ ಚೆನ್ನಾಗಿ ಮೈ ತಿಕ್ಕಿಕೊಳ್ಳುವದು. ಇದರಿಂದ ಈ ಜ್ವರ ನಿಲ್ಲುವವು.

೪ ತುಪ್ಪ ಕುಡಿಸಬೇಕು, ಮಾಂಸದ ರಸ ಕೊಡಬೇಕು ಇಲ್ಲವೆ ಪೇಡೆ, ಜಿಲೇಬಿ, ಬದಾಮಿನ ಉಂಡಿ ಮುಂತಾದ ಪೌಷ್ಟಿಕ ಪದಾರ್ಥಗಳನ್ನು ತಿನಿಸಬೇಕು; ಮತ್ತು ಸಾಕಷ್ಟು ನಿದ್ದೆ ಮಾಡಬೇಕು. ಅಂದರೆ ಈ ಜ್ವರ ನಿಲ್ಲುವವು.

೫ ಸರ್ವಾಂಗಕ್ಕೆ ಚೆನ್ನಾಗಿ ಎಣ್ಣೆ ತೊಡೆದು, ತಿಕ್ಕಿಸಿ ಬಿಸಿ ಬಿಸಿ ನೀರಿನಿಂದ ಸ್ನಾನ ಮಾಡಿ ದಪ್ಪನ್ನ ಸ್ವಚ್ಛವಾದ ಹಾಸಿಗೆ ಹೊದಿಕೆಗಳಲ್ಲಿ ಮಲಗಬೇಕು. ಹೆಚ್ಚಾಗಿ ಬೆವರು ಬಂದು ಈ ಜ್ವರ ನಿಲ್ಲುತ್ತವೆ.

೬ ತುಪ್ಪ, ಹಾಲು, ಸಕ್ಕರೆಗಳನ್ನು ಕೂಡಿಸಿ ಕುಡಿಸಬೇಕು.

---

## (೧೧) ದಾಹಜ್ವರ.

ಉಪಾಯ:—ಹೆಚ್ಚು ಮೈ ಕಾಯುವದರಿಂದ ಇಲ್ಲವೆ ಮೈ ಸುಡುವದರಿಂದ ಈ ಜ್ವರ ಬರುವವು. ತೃಷೆ, ಭ್ರಮೆ, ಮೂರ್ಛೆ, ಸಂತಾಪಚಿತ್ತ, ಮೈಮೇಲೆ ಹುಣ್ಣುಗಳೇಳುವದು, ಶರೀರದಾಹ, ಜ್ವರದ ಹೆಚ್ಚಳಿಕೆ ಮುಂತಾದ ಲಕ್ಷಣಗಳಾಗುತ್ತವೆ.

ದಾಹಜ್ವರಕ್ಕೆ ಉಪಾಯಗಳು:—

(೧) ಶೀತೋಪಚಾರ ಮಾಡಬೇಕು. ಮಧುರಾನ್ನವನ್ನುಣಿಸಬೇಕು. ತುಪ್ಪ, ಹಾಲು ಕುಡಿಸಬೇಕು; ಪಿತ್ತಶಾಮಕ ಉಪಾಯಗಳನ್ನು ಮಾಡಬೇಕು. (೨) ಪಿತ್ತಜ್ವರದ ಔಷಧಗಳನ್ನು ಕೊಡುವದು (೩) ಅಂಗ್ರೀಬೇರು ಮತ್ತು ಅತ್ತೀಹಾಲು ಇವುಗಳೊಡನೆ ಸಕ್ಕರಿ ಕೂಡಿಸಿ ಕೊಡಬೇಕು. (೪) ೪ ತೊಲಿ ಹವೀಜ ಕುಟ್ಟಿ ಅದರಲ್ಲಿ ೬ ಪಾಲು ನೀರು ಹಾಕಿ ರಾತ್ರಿ ನೆನೆ ಇಟ್ಟು ಬೆಳಗಿನಲ್ಲಿ ಕಿವುಚಿ ಸೋಸಿ ಸಕ್ಕರಿ ಬೆರಸಿ ಕೊಡುವದು. ಇದರಿಂದ ದಾಹ, ನೀರಡಿಕೆಗಳ ಶಮನವಾಗಿ ಮೂತ್ರ ಸಾಫವಾಗುವವು (೫) ಹವೀಜ, ನೆಲ್ಲಿಚೆಟ್ಟು, ಅಡಸಾಲದೆಲೆ, ದೀಪದ್ರಾಕ್ಷಿ, ಕಲ್ಲುಸಕ್ಕರಿ ಇವನ್ನೆಲ್ಲ ಸಮಭಾಗ ತಕ್ಕೊಂಡು

ಇಟ್ಟು ರಾತ್ರಿ ನೀರಲ್ಲಿ ನೆನೆ ಹಾಕಿ ಬೆಳಿಗ್ಗೆ ಸೋಸಿ ಕೊಡಬೇಕು. ಇದರಿಂದ ರಕ್ತಪಿತ್ತಜ್ವರ, ದಾಹ, ನೀರಡಿಕೆಗಳು ಶಮನವಾಗುತ್ತವೆ.

---

## (೧೨) ಕ್ಷತಜನ್ಯಜ್ವರ.

ಲಕ್ಷಣ:—ಯಾವುದೊಂದು ಕಾರಣದಿಂದ ಶರೀರಕ್ಕೆ ತೂತು ಬಿದ್ದು ಇಲ್ಲವೆ ನೋವಾಗಿ ಈ ಜ್ವರ ಬರುತ್ತವೆ. ಮೈನೋವು, ಅರುಚಿ, ನಿದ್ರಾನಾಶ, ಬಾವು ಮುಂತಾದ ಲಕ್ಷಣಗಳಾಗುತ್ತವೆ. ಇದಕ್ಕೆ ಉಪಾಯ:—ಒಗರು ಮತ್ತು ಮಧುರೋಪಚಾರಗಳನ್ನು ಮಾಡಬೇಕು. ಕ್ಷತಗಳಿಗೆ ಆಯಾರೋಗದ ಉಪಚಾರ ಮಾಡಬೇಕು.

---

## (೧೩) ಅಭಿಘಾತ (ಛೇದನ) ಜ್ವರ.

ಲಕ್ಷಣ:— ಶಸ್ತ್ರಾದಿಗಳ ಕಡಿತದಿಂದ ಇಲ್ಲವೆ ಹೊಡೆ-ಬಡೆಯುವದರಿಂದ ಇಲ್ಲವೆ ಎತ್ತರದಿಂದ ಬೀಳುವದು, ಹಾಗುವದು ಮತ್ತು ಆಯಕಟ್ಟಿನ ಸ್ಥಳಕ್ಕೆ ಪೆಟ್ಟು ತಾಕುವದು ಮುಂತಾದ ಕಾರಣಗಳಿಂದ ಈ ಜ್ವರಗಳು ಬರುತ್ತವೆ. ಈ ಜ್ವರದಲ್ಲಿ ಅರುಚಿ, ನಿದ್ರಾನಾಶ, ಬಾವು, ಸಂತಾಪ, ಮೈನೋವು ಮುಂತಾದ ಲಕ್ಷಣಗಳಾಗುತ್ತವೆ.

ಇದಕ್ಕೆ ಉಪಾಯಗಳು.

ತುಪ್ಪ ಕುಡಿಸಬೇಕು; ಮೋಹನ, ಭೋಗ ಎಂಬ ಪಕ್ವಾನ್ನ ಇಲ್ಲವೆ ಹೆಚ್ಚು ತುಪ್ಪ ಹಾಕಿ ಮಾಡಿದ ಸಜ್ಜಿಗೆಯನ್ನು ಕೊಡುವದು; ಸೆರೆ, ಸಿಂದಿ, ಮಾಂಸರಸಗಳನ್ನು ಕೊಡುವದು. ಉಳಿದ ಉಪಾಯಗಳನ್ನು ಆಯಾ ಪ್ರಕರಣದಲ್ಲಿ ಹೇಳಿದಂತೆ ಮಾಡುವದು.

---

## (೧೪) ಶ್ರಮಜನ್ಯ ಜ್ವರ.

ಲಕ್ಷಣ:—ಹೆಚ್ಚು ಶ್ರಮ ಮಾಡುವದು, ಏರಿಯನ್ನು ಏರುವದು, ಓಡುವದು, ಹೆಚ್ಚು ಬೆವರುಬರುವಂತೆ ವ್ಯಾಯಾಮ ಮುಂತಾದಕೃತ್ಯಗಳನ್ನೆಸಗುವದು, ಬಲಿಷ್ಠನೊಡನೆ ಕುಸ್ತಿ ಹಿಡಿಯುವದು, ಸಾಹಸ ಮಾಡುವದು, ಕುದುರೆಯನ್ನು ಹತ್ತಿ ಹೆಚ್ಚಾಗಿ ಓಡಿಸುವದು ಮುಂತಾದ ಕೃತ್ಯಗಳಿಂದ ಹೆಚ್ಚು ಬೆವರೊಡೆದು ಈ ಜ್ವರಬರುತ್ತವೆ. ಈ ಜ್ವರದಲ್ಲಿ ಮೈ-ಕೈಗಳು ಸೇದುವದು, ಬಿಗಿದಂತಾಗುವದು, ಅತಿ ಮೋಹ, ಮೂರ್ಛೆ, ಗ್ಲಾನಿ, ಉಚ್ಛ್ವಾಸ, ಸ್ತಬ್ಧತೆ, ಕಣ್ಣು ಮುಚ್ಚುವದು, ನಡುಗು, ಮೆಲ್ಲಗೆ ಮಾತಾಡುವದು, ಕಣ್ಣಲ್ಲಿ ನೀರು ಸುರಿಯುವದು ಮುಂತಾದ ಲಕ್ಷಣಗಳಾಗುತ್ತವೆ.

### ಇದಕ್ಕೆ ಉಪಾಯಗಳು.

೧ ವೈ ತಿಕ್ಕಿಸುವದು, ಬೆವರಿನ ಮುಖ್ಯ ಶ್ರಮದ ಉಪಚಾರಗಳನ್ನು ಮಾಡುವದು. ಇದರಿಂದ ಜ್ವರ ನಿಲ್ಲುತ್ತದೆ.

೨ ಶುಂಠಿ, ಮೆಣಸು, ಹಿಪ್ಪಲಿ, ಇಂಗು, ನೆಲಬೇವು ಇವುಗಳ ಚೂರ್ಣ ವನ್ನು ಜೇನುತುಪ್ಪದೊಡನೆ ಕೊಡುವದು.

---

## ೧೫ ದೃಷ್ಟಿ ಜ್ವರ.

ಲಕ್ಷಣ:—ಪಾಪಿಮನುಷ್ಯನೆದುರಿಗೆ ಉಂಡರೆ ಇಲ್ಲವೆ ಸುಕುಮಾರನಿಗೆ ಪಾಪಿ ಚಂಡಾಲರ ಕಣ್ಣು ಹತ್ತಿದರೆ, ಹಸಿವೆಯಿಂದ ಬಳಲುವವನ ಎದುರಿಗೆ ಉಂಡರೆ ದೃಷ್ಟಿಯಾಗಿ ಜ್ವರ ಬರುತ್ತದೆ. ಅಲ್ಲದೆ ಸುಂದರ ಭಾಷಣ ಮಾಡುವವನಿಗೂ, ರೂಪಸಂಪನ್ನನಿಗೂ ಪಾಪಿಜನರ ದೃಷ್ಟಿಯಾಗಿ ಜ್ವರ ಬರುತ್ತದೆ. ಇದರಲ್ಲಿ ಬುದ್ಧಿವಿಕಲ್ಪ, ವೈಚಾಂಚಲ್ಯ, ಅನ್ನ ಸೇರದಿರುವದು ಮುಂತಾದ ಲಕ್ಷಣಗಳಾಗಿ ಉತ್ತಮ ಔಷಧೋಪಚಾರಗಳಿಂದಲೂ ಈ ಜ್ವರ ಗುಣವಾಗದಿರುವದು.

### ಇದಕ್ಕೆ ಉಪಾಯಗಳು.

ದೃಷ್ಟಿ ತೆಗೆಯಬೇಕು. ಅನ್ನಕ್ಕೆ ದೃಷ್ಟಿಯಾಗಿದ್ದರೆ, ಉಪ್ಪು ಮಂತ್ರಿಸಿ ತಿನ್ನಬೇಕು. ಯಾವ ಪದಾರ್ಥಗಳು ಸೇರುವದಿಲ್ಲವೋ ಅವುಗಳನ್ನು ನಾಯಿಗೂ ಪಾಪಿಚಾಂಡಾಲರಿಗೂ ಹಾಕಬೇಕು. (ಆ ಪದಾರ್ಥವನ್ನು ದೃಷ್ಟಿಯಾದ ಮನುಷ್ಯನ ಮೇಲೆ ನಿವಾಳಿಸಿ ಚೆಲ್ಲುವ ರೂಢಿಯೂ ಉಂಟು.)

---

## ೨೮ ಕೆಲವು ಕ್ಷುದ್ರಜ್ವರಗಳು.

### (೧) ಋತುಗಳು ಬದಲಾಗುವಾಗ ಬರುವ ಜ್ವರಗಳು.

ಆಯಾ ಋತುಮಾನಗಳಂತೆ ಈ ಜ್ವರದ ಲಕ್ಷಣಗಳಿರುತ್ತವೆ.

ಉಪಾಯ:—೧ ಹವೀಜ, ಅಮೃತಬಳ್ಳಿ, ನೆಲಿಂಗಳ, ಕಲ್ಲುಸಬ್ಬಸಿಗಿ, ಬಾಳದಬೇರು, ಜೇಕಿನಗಡ್ಡೆ, ಕಟುಕರೋಹಿಣಿ ಇವುಗಳ ಕಷಾಯ ಕೊಡುವದು.

೨ ಬೆವರು ಬಹಳ ಬರುತ್ತಿದ್ದರೆ:—ಬೂದಿಯನ್ನು ಅರಿವೆಯಲ್ಲಿ ಸೋಸಿ ಅದರಲ್ಲಿ ಬಜೆ, ಅಜ್ವಾನಗಳ ಚೂರ್ಣವನ್ನು ಕೂಡಿಸಿ ಮೈಗೆ ತಿಕ್ಕುವದು.

---

### (೨) ತುಸ ಮೈಮುರಿದಂತಾಗಿ ಬರುವ ಜ್ವರ.

ಇದು ಬೇರೆ ಜ್ವರಗಳಂತೆ ಸಂಪರ್ಗದಿಂದಾಗಲಿ, ಪಿಡುಗಿನಿಂದಾಗಲಿ ಉಂಟಾಗುವದಿಲ್ಲ. ಊಟ-ಉಡಿಗೆಯು, ನಿದ್ದೆ-ನೀರಡಿಕೆಗಳ ಕಡೆಗೆ ಅಲಕ್ಷ್ಯ

ಮಾಡುವದರಿಂದ ಈ ಜ್ವರ ಬರುತ್ತವೆ. ಇಲ್ಲವೆ ಬಿಸಿಲು, ಗಾಳಿ, ಶೀತ, ತಂಪು ಹವೆ, ಶ್ರಮ ಮುಂತಾದ ಕ್ಷುಲ್ಲಕ ಕಾರಣಗಳಿಂದಲೂ ಈ ಜ್ವರ ಹುಟ್ಟುವ ಸಂಭವವಿದೆ. ಈ ಜ್ವರ ಉಂಟಾಗಿದ್ದರೆ ವಿರುದ್ಧ ಉಪಚಾರದಿಂದ ಸಾಧಾರಣ ವಾಗಿ ಇದು ಶಮನವಾಗುತ್ತದೆ. ಉದಾಹರಣ:—ತಂಪುಗಾಳಿ ಬಡಿಸಿಕೊಂಡು ಜ್ವರ ಬಂದಿದ್ದರೆ ಬಿಸಿ ನೀರು ಕುಡಿದು, ಬೆಚ್ಚನ್ನ ಅರಿವೆ ತೊಟ್ಟು, ವೈ-ಕೈ ಕಾಸಿಕೊಂಡರೆ ಇದು ಶಮನವಾಗುತ್ತದೆ. ಉಷ್ಣತೆಯಿಂದ ಜ್ವರ ಬಂದಿದ್ದರೆ, ಶೀತೋಪಚಾರದಿಂದ ನಿಲ್ಲುತ್ತವೆ; ಆದರೆ ಯೋಗ್ಯ ಉಪಚಾರ ಮಾಡಲಿಕ್ಕೆ ಮನಸರಿ ಮಾಡಿದರೆ, ಅದೇ ಬೆಳೆದು ವಿಷಮಕ್ಕೆ ಹಾಕುವ ಸಂಭವವಿರುತ್ತದೆ.

ಲಕ್ಷಣ:—ಈ ಜ್ವರದ ಲಕ್ಷಣಗಳು ಸೌಮ್ಯವಾಗಿರುತ್ತವೆ.

ಉಪಾಯ:—೧ ಗಂಧಕ ೧ ತೊಲಿ, ಸೈಂಧಲವಣ ೨ ತೊಲಿ ಕೂಡಿಸಿ ಲಿಂಬೀಹುಳಿಯಲ್ಲಿ ಅರೆದು ದೊಡ್ಡ ಗಜಗದಷ್ಟು ಗುಳಿಗೆ ಕಟ್ಟಿಡಬೇಕು. ಆ ಗುಳಿಗೆಯನ್ನು ಮುಂಜಾನೆ ಸಂಜೆಗೆ ಒಂದೊಂದರಂತೆ ತೆಗೆದುಕೊಳ್ಳಬೇಕು. ದಿವಸ ೩. ಪಥ್ಯ:—ಬಿಸಿ ನೀರು, ಹಾಲು, ಅನ್ನ.

೨ ಯಾವದೊಂದು ಕ್ಷಾರಯುಕ್ತ, ಸೌಮ್ಯ ಮತ್ತು ಸಾರಕವಾದ ಔಷಧವನ್ನು ಕೊಡುವದು. ಬಳಿಕ ಬೆವರು ಬರುವ ಹಾಗು ಮೂತ್ರ ಸಾಫಾಗುವ ಔಷಧ ಕೊಡತಕ್ಕದ್ದು.

೩ ಶುಂಠಿಯ ಕಷಾಯದಲ್ಲಿ ಬೆಲ್ಲ ಹಾಕಿ ಕೊಡಬೇಕು.

೪ ಬರೇ ನೀರಿನ ಚತುರ್ಥಾಂಶ ಕಷಾಯ ಕೊಡುವದು.

---

## ೩ ಕ್ರಿಮಿಜನ್ಯ ಜ್ವರ. (ಜಂತಿನ ವಿಕಾರದಿಂದ ಬರುವ ಜ್ವರ)

ಲಕ್ಷಣ:—ಜಂತಿನಿಂದ ಜ್ವರ ಬಂದರೆ, ಒಮ್ಮೊಮ್ಮೆ ಕೇವಲ ಸನ್ನಿಪಾತದ ಲಕ್ಷಣಗಳಾಗುತ್ತಿರುತ್ತವೆ. ಅನ್ನ ದ್ವೇಷ, ಒಕರಿಕೆ. ನೀರಡಿಕೆ, ಜುಲಾಬು ಇಲ್ಲವೆ ಮಲಾವರೋಧಗಳಾಗಿ ಬಡಬಡಿಸಹತ್ತುತ್ತಾನೆ.

ಉಪಾಯ:— ೧ ಮೊದಲು ಜಂತಿನ ಉಪಾಯಗಳನ್ನು ಮಾಡಬೇಕು. (ಚಿ. ಪ್ರ. ಕೃಮಿ ಪ್ರಕರಣ ನೋಡು) ಬಳಿಕ ಜ್ವರದ ಲಕ್ಷಣಗಳನ್ನು ತಿಳಿದು ಯೋಗ್ಯ ಔಷಧೋಪಚಾರ ಮಾಡಬೇಕು.

---

## ೪೯ ಕಾಲಜ್ವರ.

ಲಕ್ಷಣ:—ಶರೀರದೊಳಗೆ ದಾಹ, ಹೊರಗೆ ಚಳಿಚಳಿಯಾಗುವದು, ಕಫ ಗಟ್ಟಿಯಾಗುವದು, ಅರುಚಿ, ನಾಲಿಗೆ ಅತಿಕಪ್ಪು, ನಾಡಿಯು ಸೂಕ್ಷ್ಮವೂ ತೀವ್ರ

ವ್ಲೂ, ಕಣ್ಣು ಕೆಂಪಗೆ, ಮೂರ್ಛೆ, ಬಡಬಡಿಕೆ, ಬುದ್ಧಿಭ್ರಮೆ, ಅನೇಕ ಪ್ರಕಾರ ಚೇಷ್ಟೆ ಅಂಗವಿಕ್ಷೇಪಗಳನ್ನು ಮಾಡುವದು, ಸಂತಾಪ, ಮೋಹ, ಕೈಕಾಲು ಒಡಿಯುವದು, ತನ್ನ ಮೋರೆಯ ಮೇಲೆ ತಾನೇ ಹೊಡಕೊಳ್ಳುವದು, ವ್ಯಾಕುಲ ನಾಗುವದು, ನಡುಗು ಬರುವದು ಮುಂತಾದ ಲಕ್ಷಣಗಳಾಗುತ್ತಿರುತ್ತವೆ. ಇವು ಕಷ್ಟಸಾಧ್ಯ ಜ್ವರಗಳಾಗಿರುವವು.

ಕಾಲಜ್ವರಕ್ಕೆ ಉಪಾಯಗಳು.

೧ ಜೇಕಿನಗಡ್ಡೆ, ಅಮೃತಬಳ್ಳಿ, ಕಲ್ಲುಸಬ್ಬಸಿಗಿ, ದೀಪದ್ರಾಕ್ಷಿ, ಕಟುಕ ರೋಹಿಣಿ ಇವುಗಳ ಕಷಾಯ ಮಾಡಿ ಕುಡಿಸಬೇಕು.

೨ ಹಿಪ್ಪಲಿ, ದೇವದಾರು, ತಾವರೆಗಡ್ಡೆ, ಶುಂಠಿ, ಬಜೆ, ರಾಸನೆ, ಬಾಳ ಹಿರಡೆ, ಕಲ್ಲುಸಬ್ಬಸಿಗಿ, ನೆಲಿಂಗಳ ಗಂಟುಭಾರಂಗಿ, ಮೆಣಸು, ಹಿಪ್ಪಲಿ, ನಿರಾವೆ ಬಳ್ಳಿ, ಕಚೂರ, ಅಮೃತಬಳ್ಳಿ, ಕಾಡುಬದನೀಬೇರು ಇವುಗಳ ಕಷಾಯದಿಂದ ಮಬ್ಬು, ದಾಹ, ಶೋಷ, ಕೆಮ್ಮು, ಉಬ್ಬಸ ಮತ್ತು ಕಾಲಜ್ವರಗಳ ಶಮನ ವಾಗುವದು.

---

## ೩೦ ನವಜ್ವರ.

(ಇದಕ್ಕೇ ನೂತನಜ್ವರ ಇಲ್ಲವೆ ಅಪಕ್ವಜ್ವರವೆನ್ನುತ್ತಿರುತ್ತಾರೆ.)

ಲಕ್ಷಣ:—ಜೊಲ್ಲುಸುರಿಯುವದು, ಒಕರಿಕೆ ಬರುವದು, ಎದೆಯೊಳಗೆ ಭಾರವಾಗುವದು, ಅರುಚಿ, ಮಬ್ಬು, ಆಲಸ್ಯ, ಅನ್ನಪಚನವಾಗದಿರುವದು, ಬಾಯಿಗೆ ರುಚಿಯಿಲ್ಲದಿರುವದು, ಮೈಜಾಡ್ಯ, ಹಸಿವೆಯಾಗದಿರುವದು, ಆಗಾಗ್ಗೆ ಮೂತ್ರವಾಗುವದು, ಮೈ ಸೆಟೆಯುವದು, ಅತಿಜ್ವರ ಇವು ಅಪಕ್ವ ಜ್ವರದ ಲಕ್ಷಣಗಳಾಗಿರುತ್ತವೆ. ಈ ಲಕ್ಷಣಗಳಿದ್ದಾಗ ಔಷಧಕೊಡಕೂಡದು. ಯಾಕಂದರೆ ಅಪಕ್ವದೋಷಗಳಿಗೆ ಔಷಧ ಕೊಡುವದರಿಂದ ಜ್ವರ ಹೆಚ್ಚಾಗುತ್ತವೆ. ಶೋಧನ ಇಲ್ಲವೆ ಶಮನಗಳಾದ ಔಷಧಗಳನ್ನು ಕೊಟ್ಟರೆ ವಿಷಮಕ್ಕೆ ಹಾಕುತ್ತದೆ; ಮತ್ತು ಅಪಕ್ವಜ್ವರಗಳು ಹೆಚ್ಚಿದರೆ ಮೃತ್ಯುವೇ ಉಂಟಾಗುವದೆಂಬುದಕ್ಕೆ ಸಂದೇಹವಿಲ್ಲ.

ನವಜ್ವರಕ್ಕೆ ಉಪಾಯಗಳು.

೧ ನವಜ್ವರ ಮತ್ತು ಮಹಾಜ್ವರಗಳಿಗೆ:—ಹುನಗುಂದವನ್ನು ನೆಳಲಲ್ಲಿ ಒಣಗಿಸಿ ಪುಡಿಮಾಡಿ ಜೇನುತುಪ್ಪದೊಡನೆ ನೆಕ್ಕಿಸುವದು. ಪ್ರತಿಸಾರೆ ೩ ಮಾಸಿ ಕೊಡಬೇಕು. ಪಥ್ಯ:—ಮಜ್ಜಿಗೆಯಲ್ಲಿ ಶುಂಠಿಯನ್ನು ತೆಯ್ದು ಬಿಸಿಮಾಡಿ ಕೊಡಬೇಕು. ನವಜ್ವರದಲ್ಲಿ ರೋಗಿಗೆ ಹಾಲುಕೊಟ್ಟರೆ ವಿಷಕೊಟಂತೆಯೇ ಸರ್ಪ

೨ ಒಂದು ಸೇರು ಕಾಡಿಗ್ಗರಗಿನ ರಸದಲ್ಲಿ ೫ ತೊಲಿ ಸೋರುಪ್ಪು ಹಾಕಿ ಕುದಿಸಿ, ರಸ ಆರಿದ ಮೇಲೆ ಆ ಉಪ್ಪು ತೆಗೆದು ಒಂದೆರಡು ಗುಂಜೆಯಷ್ಟು ಜೇನುತುಪ್ಪದೊಡನೆ ಕೊಡಬೇಕು ಜ್ವರ ಕೂಡಲೆ ನಿಲ್ಲುತ್ತವೆ

೩ ಲಿಂಬೀಹುಳಿ, ಕಾಡಿಗ್ಗರಗಿನ ರಸ ಎರಡೂ ಕೂಡಿಸಿ ೮ ತೊಲಿ ತಕ್ಕೊಂಡು ಅದರಲ್ಲಿ ೬ ಮಾಸಿ ಮೆಣಸು, ೧೨ ಕಮಲಗಳ ತಿಳಲು ಇವುಗಳ ಲೇಹ್ಯ ಮಾಡಿ ಕೊಡಬೇಕು.

೪ ಈ ಜ್ವರ ಬಂದಾಗ ಮಲಶುದ್ಧಿಯಾಗದೆ, ಗ್ಲಾನಿ ಬರುವದೋ ಆಗ ಮಲಶುದ್ಧಿಯಾದರೂ ಅಪಕ್ವವಾಗುವದು. ಅದಕ್ಕಾಗಿ ೭ ದಿನಗಳ ಲಂಘನ ಮಾಡ ತಕ್ಕದ್ದು. ಬಳಿಕ ಔಷಧವನ್ನು ಯೋಜಿಸಬೇಕು.

೫ ಕಟುಕರೋಹಿಣಿ, ಜೇಕಿನಗಡ್ಡೆ, ಹಿಪ್ಪಲಿಬೇರು, ಬಾಳಹಿರಡಾ ಇವುಗಳ ಕಾಢೆ-ನಿಕಾಢೆಯನ್ನು ಅರಿಸಿ, ಅದರಲ್ಲಿ ತುಸ ಜೇನುತುಪ್ಪ ಹಾಕಿ ಕೊಟ್ಟರೆ, ಆಮಾಶಯದೊಳಗಿನ ಜ್ವರದ ಶೋಧನವಾಗಿ ಜ್ವರ ನಿಲ್ಲುತ್ತವೆ.

೬ ಶುದ್ಧ ಪಾರಜ ೧ ಭಾಗ, ಶುದ್ಧ ಗಂಧಕ ೨ ಭಾಗ, ಇಂಗಳೀಕ ೩ ಭಾಗ ಶುದ್ಧ ಜಾಪಾಳಬೀಜ ೪ ಭಾಗ ತಕ್ಕೊಂಡು ದಂತಿಘದ ಬೇರಿನ ಕಷಾಯದಲ್ಲಿ ಅರೆದು ಗುಲಗಂಜಿಯಷ್ಟು ಗುಳಿಗೆ ಮಾಡಿ, ಒಂದು ಗುಳಿಗೆಯನ್ನು ತಣ್ಣೀರಿನೊಡನೆ ಕೊಡಬೇಕು. ಜುಲಾಬು ಆಗಿ ಒಂದೇ ದಿನದಲ್ಲಿ ನವಜ್ವರಗಳು ನಿಲ್ಲುತ್ತವೆ.

೭ ಜ್ವರಧೂಮಕೇತು:— ಶುದ್ಧಪಾರಜ, ಗಂಧಕ, ಇಂಗಳೀಕ ಮತ್ತು ಸಮುದ್ರನೊರೆ ಇವುಗಳನ್ನು ಅಲ್ಲದ ರಸದಲ್ಲಿ ೧ ಪ್ರಹರದ ವರೆಗೆ ಅರೆಯಬೇಕು. ೨ ಅವರೇಕಾಳ ಪ್ರಮಾಣದ ಗುಳಿಗೆ ಮಾಡಿ ಅಲ್ಲದರಸದೊಳಗೆ ೩ ದಿನ ಬೆಳಿಗ್ಗೆ-ಸಾಯಂಕಾಲಕ್ಕೆ ಒಂದೊಂದು ಗುಳಿಗೆಯಂತೆ ಕೊಡಬೇಕು ಜ್ವರ ನಿಲ್ಲುವವು.

೮ ನವಜ್ವರರೇಭಸಿಂಹ:—ಶುದ್ಧಪಾರಜ, ಗಂಧಕ, ಲೋಹ, ತಾಮ್ರ-ಸೀಸಗಳ ಭಸ್ಮಗಳು, ಶುಂಠಿ, ಮೆಣಸು, ಹಿಪ್ಪಲಿ ಇವನ್ನೆಲ್ಲ ಸಮ ಭಾಗ ತಕ್ಕೊಂಡು ಚೂರ್ಣ ಮಾಡಬೇಕು. ಅರ್ಧಭಾಗ ನೇಪಾಳದ ಬೇರು ತಂದು ಎಲ್ಲವನ್ನೂ ಅಲ್ಲದ ರಸದಲ್ಲಿ ೨ ದಿನಗಳ ವರೆಗೆ ಚನ್ನಾಗಿ ಅರೆಯಬೇಕು. ಬಳಿಕ ೨ ಗುಂಜೆಯ ತೂಕದ ಗುಳಿಗೆ ಮಾಡಬೇಕು. ಅಲ್ಲದ ರಸದೊಳಗೆ ಒಂದು ಗುಳಿಗೆಯನ್ನು ಕೊಟ್ಟರೆ ಉಗ್ರನವಜ್ವರ, ವಾತಸಂಗ್ರಹಿಣಿಗಳ ನಾಶವಾಗುತ್ತವೆ. ಇವು ಇತರ ಜ್ವರಗಳಿಗೂ ಉಪಯೋಗವಾಗುತ್ತದೆ.

೯ ಶುದ್ಧಪಾರಜ ೧ಭಾಗ, ಕಲ್ಲಂಟು, ಹಿಪ್ಪಲಿ, ಬಾಳಹಿರಡಾ, ಆಕಳ ಕರಿ, ಸಾಸ್ವೇ ಎಣ್ಣೆಯಲ್ಲಿ ಶುದ್ಧಮಾಡಿದ ಗಂಧಕ, ಕಾಡಕವಡೇಕಾಯಿ ಇವು

೪-೪ ಭಾಗ ತಕ್ಕೊಂಡು ಕಾಡಕವಡೇಕಾಯಿರಸದಲ್ಲಿ ಅರೆದು, ೧ ಮಾಸಿಯಷ್ಟು ಗುಳಿಗೆ ಮಾಡಿಡಬೇಕು. ಅಂಥದೊಂದು ಗುಳಿಗೆಯನ್ನು ಅಮೃತಬಳ್ಳಿಯ ರಸದಲ್ಲಿ ಕೊಡಬೇಕು. ಈ ಗುಳಿಗೆಗೆ "ಜ್ವರಘ್ನಗುಟಿ" ಅನ್ನುತ್ತಾರೆ.

೧೦ ವಿಶ್ವತಾಪ ಹರಣ:—ಶುದ್ಧ ಪಾರಜ, ತಾಮ್ರಭಸ್ಮ, ತ್ರಿಗಡಿ, ಗಂಧಕ, ಕಟುಕರೋಣಿ, ಶುದ್ಧಜಾಪಾಳಬೀಜ, ಹಿಪ್ಪಲಿ, ನೇಪಾಳದ ಬೇರು, ಹೆಮ್ಮುಷ್ಟಿ, ಅಳಲೆಕಾಯಿ ಇವನ್ನು ಸಮಭಾಗ ತಕ್ಕೊಂಡು ಧತ್ತೂರಿಯ ರಸದಲ್ಲಿ ಒಂದು ದಿನ ಅರೆಯಬೇಕು. ೨ ಅವರೇ ಕಾಳ ಪ್ರಮಾಣದ ಗುಳಿಗೆ ಕಟ್ಟಿ ಅಲ್ಲದ ರಸದೊಳಗೆ ೧ ಗುಳಿಗೆ ಕೊಡುವದು. ಇದರಿಂದ ನವಜ್ವರದ ನಾಶವಾಗುತ್ತದೆ. ಪಥ್ಯ-ಹೆಸರಿನ ಕಾಟಿ ಮತ್ತು ಹಗರು ಆಹಾರವನ್ನು ಕೊಡಬೇಕು.

೧೧ ಶುದ್ಧ ಪಾರಜ, ಗಂಧಕ, ಒಳೆಗಾರ, ಮೆಣಸು ಸಮಭಾಗ ತಕ್ಕೊಂಡು ಮೀನದ ಪಿತ್ತದಲ್ಲಿ ೩ ದಿವಸ ಅರೆದು ಅವರೇಕಾಳಷ್ಟು ಗುಳಿಗೆ ಮಾಡಿಡಬೇಕು. ಅಲ್ಲದ ರಸದೊಳಗೆ ಅಂಥದೊಂದು ಗುಳಿಗೆಯನ್ನು ಕೊಟ್ಟರೆ ಕ್ಷಣದಲ್ಲಿ ಬೆವರು ಬಂದು ಜ್ವರ ನಿಲ್ಲುವವು. ಇದಕ್ಕೆ ಪಥ್ಯವಿಲ್ಲ.

---

## ೩೧ ವಿಷಮಜ್ವರ.

ಲಕ್ಷಣ ಮತ್ತು ಕಾರಣ:—ಜ್ವರದೊಳಗೆ ಅಪಥ್ಯ ಮಾಡಿದರೆ ಇಲ್ಲವೆ ಯೋಗ್ಯ ಔಷಧೋಪಚಾರ ಮಾಡದಿದ್ದರೆ ಇಲ್ಲವೆ ಪ್ರಾರಂಭದಿಂದಲೂ ರಸ-ರಕ್ತಾದಿ ಧಾತುಗಳಲ್ಲಿ ದೋಷಗಳುಂಟಾಗಿ ವಿಷಮ ಜ್ವರಗಳು ಹುಟ್ಟುತ್ತವೆ. ಭಾಲ್ಲುಕೀ ತಂತ್ರದಲ್ಲಿ "ಶೀತ ಇಲ್ಲವೆ ಉಷ್ಣ ಇವುಗಳ ಮೂಲಕ ಅನಿಯಮಿತ ಕಾಲದಲ್ಲಿ ಬರುವ ಜ್ವರಕ್ಕೆ ವಿಷಮಜ್ವರವೆನ್ನಬೇಕೆ"ಂದು ಹೇಳಿದೆ. ವಿಷಮ ಜ್ವರದಲ್ಲಿ ಜ್ವರ ಆರಿ ಜ್ವರ ಬರುವದೊಂದು ವಿಶೇಷವಾಗಿರುತ್ತದೆ.

ವಿಷಮಜ್ವರದ ಹೆಸರು:—ಸಂತತ, ಸತತ, ಅನ್ನದ್ಯುಷ್ಕ (ದ್ವ್ಯಾಹಿಕ) ತ್ರ್ಯಾಹಿಕ, ಚಾತುರ್ಥಿಕ, ಹೀಗೆ ೫ ಬಗೆಗಳಿರುತ್ತವೆ.

೧ ರಸ ಧಾತುಗತ ಜ್ವರವಿದ್ದರೆ ಸಂತತ ಜ್ವರವನ್ನು ಹುಟ್ಟಿಸುತ್ತದೆ.

೨ ರಕ್ತಧಾತುಗತ ಜ್ವರವಿದ್ದರೆ ಸತತ ಜ್ವರವನ್ನು ಹುಟ್ಟಿಸುತ್ತದೆ.

೩ ಮಾಂಸಧಾತುಗತ ಜ್ವರವಿದ್ದರೆ ದ್ವ್ಯಾಹಿಕ ಜ್ವರಗಳನ್ನುಂಟು ಮಾಡುತ್ತದೆ.

೪ ಮೇದೋಗತ ದೋಷವಿದ್ದರೆ ತ್ರ್ಯಾಹಿಕಜ್ವರವನ್ನುಂಟುಮಾಡುತ್ತದೆ.

೫ ಮಜ್ಜಾ, ಅಸ್ಥಿಗತ ದೋಷವಾಗಿದ್ದರೆ ಚಾತುರ್ಥಿಕ ಜ್ವರವನ್ನುಂಟು ಮಾಡುತ್ತದೆ. ವಿಷಮ ಜ್ವರಗಳಲ್ಲಿ ವಾತ, ಪಿತ್ತ, ಕಫಗಳಲ್ಲಿ ಯಾವ ದೋಷವು ಹೆಚ್ಚಾಗಿರುವದೋ ಅದರ ಚಿಕಿತ್ಸೆಯನ್ನು ಮಾಡಬೇಕು.

ವಿಷಮಜ್ವರದ ಬಲಗುಂದಿಸುವದಕ್ಕಾಗಿಯೂ, ಊರ್ಧ್ವ ಶೋಧನಕ್ಕಾಗಿಯೂ ವಾಂತಿಯನ್ನೂ, ಅಧಃಶೋಧನಕ್ಕಾಗಿ ಜುಲಾಬನ್ನೂ ಮಾಡಿಸಬೇಕು.

೧ ವಿಷಮಜ್ವರದ ಪಾಚನಾರ್ಥವಾಗಿ ನೆಲವರಿ,(ಸೋನಾಮುಖಿ) ಬಾಳ ಹಿರಡಾ, ಕರೇದ್ರಾಕ್ಷಿ, ಜೇರಿಗಿ ಇವುಗಳ ಕಷಾಯವನ್ನು ಕೊಡುವದು.

೨ ಶುಂಠಿ, ಹಿಪ್ಪಲಿಬೇರು, ಬಡೇಸೊಪ್ಪು, ನೆಲವರಿ, ಕಕ್ಕೀಕಾಯಿ ತಿಳಲು, ಬಾಳಹಿರಡಾ ಇವುಗಳ ಕಷಾಯದಲ್ಲಿ ಸೈಂಧಲವಣ ಹಾಕಿ ಕೊಡುವದು. ಇದು ವಿಷಮಜ್ವರದ ಪಾಚನ ಹಾಗು ರೇಚನಗಳಾಗಿರುತ್ತದೆ.

೩ ಕರೇದ್ರಾಕ್ಷಿ, ತ್ರಿಫಳ, ಶುಂಠಿ, ಹವೀಜ ಇವುಗಳ ಕಷಾಯವು ವಿಷಮ ಜ್ವರಕ್ಕೆ ಪಾಚನ ಮತ್ತು ದ್ರಾವಕವಾಗಿರುತ್ತದೆ.

೪ ಲವ್ವಳಸರದ ಬೇರು ೧ ತೊಲಿ ತಂದು ಅರೆದು ಬಿಸಿನೀರಲ್ಲಿ ಕುಡಿಸಬೇಕು. ಇದರಿಂದ ವಾಂತಿಯಾಗಿ ಬಹುದಿನಗಳ ವಿಷಮಜ್ವರಗಳ ನಾಶವಾಗುತ್ತದೆ.

## ವಿಷಮ ಜ್ವರಕ್ಕೆ ಉಪಾಯಗಳು.

೧ ವಾತಾಧಿಕ ವಿಷಮಜ್ವರಕ್ಕೆ:— ಔಷಧಗಳಿಂದ ಸಿದ್ಧಪಡಿಸಿದ ಘೃತಗಳನ್ನೂ, ಅನುವಾಸನ ಬಸ್ತಿಯನ್ನೂ ಕೊಡಬೇಕು.

೨ ಪಿತ್ತಾಧಿಕ ವಿಷಮಕ್ಕೆ:—ಹಾಲು ಕಾಸಿ ಅದರಲ್ಲಿ ಔಷಧಗಳಿಂದ ಸಿದ್ಧ ಮಾಡಲ್ಪಟ್ಟ ತುಪ್ಪ ಹಾಕಿ ಕೊಟ್ಟು ರೇಚನ ಮಾಡಿಸಬೇಕು; ಮತ್ತು ಕಹಿ ಹಾಗು ಶೀತ ಉಪಚಾರಗಳನ್ನು ಮಾಡಬೇಕು.

೩ ಕಫಾಧಿಕ ವಿಷಮವಿದ್ದರೆ:—ವಮನ-ಪಾಚನಗಳನ್ನೂ ರುಕ್ಷವಾದ ಅನ್ನ, ಪಾನ, ಲಂಘನ ಹಾಗು ಒಗರು ಔಷಧಗಳನ್ನೂ ಕೊಡುವದು.

೪ ಕಹಿಪಡುವಲು, ಬೇವು, ಗುಕ್ಕದಬೇರು, ಕೋಡುಮುರುಕನಬೀಜ, ಅಮೃತಬಳ್ಳಿ ಇವುಗಳ ಕಷಾಯದಲ್ಲಿ ಜೇನತುಪ್ಪ, ಹಾಕಿ ಕೊಡುವದರಿಂದ ಬಹುದಿವಸಗಳ ವಿಷಮಜ್ವರದ ನಾಶವಾಗುತ್ತದೆ.

೫ ಗಂಟುಭಾರಂಗಿ, ಕಲ್ಲುಸಬ್ಬಸಿಗಿ, ಶುಂಠಿ, ಅಡಸಾಲ, ಹಿಪ್ಪಲಿ, ನೆಲಬೇವು, ಬೇವು, ನೆಲಗುಳ್ಳದೇರು, ಅಮೃತಬಳ್ಳಿ, ಜೇಕಿನಗಡ್ಡೆ, ನೆಲಿಂಗಳ ಇವುಗಳ ಕಷಾಯವು ಜೀರ್ಣಜ್ವರ, ಧಾತುಗತಜ್ವರ ಮತ್ತು ಅನೇಕ ಉಪದ್ರವಗಳಿಂದ ಕೂಡಿದ ವಿಷಮಜ್ವರ ಹಾಗು ಸರ್ವ ಜ್ವರಗಳನ್ನು ನಾಶಪಡಿಸುತ್ತದೆ. ಈ ಕಷಾಯವನ್ನು ೩ ಇಲ್ಲವೆ ೭ ದಿನ ತಕ್ಕೊಂಡರೆ ಯಮನ ದವಡೆಯೊಳಗೆ ಸಿಕ್ಕಂಥ ರೋಗಿಯೂ ಬದುಕುತ್ತಾನೆ.

೬ ಸೈಂಧಲವಣ, ಮಣಶೀಲ, ಹಿಪ್ಪಲಿಯೊಳಗಿನ ಕಾಳು ಇವನ್ನು ಎಣ್ಣೆಯೊಳಗೆ ಅರೆದು ಅಂಜನ ಮಾಡಬೇಕು.

೭ ಆಲದಹಣ್ಣುಎಲೆ ೧, ಪುನುಗು ೬ ಮಾಸಿ, ಕಡ್ಲಿಸಿಪ್ಪಿ ೬ ಮಾಸಿ, ಆಡಿನ ಹಿಕ್ಕಿ ೩, ಹುಚ್ಚಳಬ್ಬು ೬ ಮಾಸಿ, ಕಲ್ಲುಸಬ್ಬಸಿಗಿ ೬ ಮಾಸಿ, ಜೋಳದ ಅರಳಿಟ್ಟು ೬ ಮಾಸಿ, ಬೆಲ್ಲ ೧ ತೊಲಿ ಇವುಗಳ ಅಷ್ಟಮಾಂಶಕಷಾಯ ಮಾಡಿಕೊಟ್ಟರೆ ಬೆವರೊಡೆದು ಜ್ವರ ನಿಲ್ಲುತ್ತಾವೆ. ಇದು ಅನುಭವಿಕ ಔಷಧವು.

೮ ಜೋಳ ೧ ತೊಲಿ, ನೆಲ್ಲು ೧ ತೊಲಿ, ಲಾವಂಗ ೫, ತುಳಸಿ ಎಲೆ ೪, ಪುನಗಿನ ಎಲೆ ೪, ದಾಲಚಿನ್ನಿ ೧ ಮಾಸಿ ಇವುಗಳ ಅಷ್ಟಮಾಂಶ ಕಷಾಯ ಮಾಡಿಕೊಡುವದು. ಕಷಾಯವನ್ನು ಸಹಿಸುವಷ್ಟು ಹೆಚ್ಚು ಬಿಸಿಯಾದ್ದನ್ನು ಕುಡಿದು, ದಪ್ಪನ್ನ ಹೊದಿಕೆ ಹೊದ್ದುಕೊಂಡು ಮಲಗಬೇಕು. ಸಾಕಷ್ಟು ಬೆವರುಬಂದು ಒಂದೇ ಪ್ರಹರದಲ್ಲಿ ಜ್ವರ ನಿಲ್ಲುವವು.

೯ ಒಳ್ಳೆಳ್ಳಿಯ ೯ ಬೇಳೆಗಳನ್ನು ತುಪ ಬೆಚ್ಚಿ, ಅವುಗಳ ಅಷ್ಟಮಾಂಶ ಕಷಾಯದಲ್ಲಿ ಬೆಲ್ಲ ಹಾಕಿ ಕೊಡುವದು. ದಿವಸ ೩ ಇಲ್ಲವೆ ೭

೧೦ ಹೆಮ್ಮುಷ್ಟಿಯ ಬೀಜವನ್ನು ಕತ್ತರಿಸಿ, ತುಪ್ಪಹಚ್ಚಿ ಹೊತ್ತದಂತೆ ಹುರಿದು, ಪುಡಿ ಮಾಡಿ, ಆಕಾರ ಹಾಗು ಶಕ್ತಿಮಾನಕ್ಕನುಸರಿಸಿ ೧ ಇಲ್ಲವೆ ಅರ್ಧ ಗುಂಜಿಯಷ್ಟು ಪುಡಿಯನ್ನು ತಾಂಬೂಲದಲ್ಲಿ ಕೊಟ್ಟರೆ ಬೆವರು ಬಂದು ಜ್ವರ ನಿಲ್ಲುವವು.

೧೧ ಆಲದ ಹಣ್ಣು ಎಲೆ ೧ ಇಲ್ಲವೆ ಆಲದ ಹಣ್ಣೆಲೆಯ ೧೦ ತುಂಬುಗಳು, [illegible]ಪದ್ರಾಕ್ಷಿ, ಆಪಿನ ತೆನೆ, ಭತ್ತದ ಅರಳು, ಆಡಿನ ಹಿಕ್ಕಿ, ಅಮೃತಬಳ್ಳಿ, ಅರೀ[illegible]ಲೆ ಇವುಗಳ ಅಷ್ಟಮಾಂಶ ಕಷಾಯ ಕೊಡುವದರಿಂದ ಬೆವರು ಬಂದು ಜ್ವರ ನಿಲ್ಲುವವು.

೧೨ ವಿಷಮ ಹಾಗು ಮಹಾಜ್ವರನಾಶಕ ಕಷಾಯ:—ಟೆಕ್ಕರಿಕೆ, ಶಿವನಿಗಿಡ, ಬೆಲಪತ್ರಿ, ಪಾಪರೀ, ಲೋಧ್ರನ ಇವುಗಳ ಬೇರು, ಕೋಡುಮುರುಕನ ಬೀಜ, ಕಟುಕರೋಣಿ, ಜೇಕಿನ ಗಡ್ಡೆ, ಕಂಬಾರಿಕದ ಬೇರು, ಕಾಶ ಮೆಣಸಿನ ಬೇರು, ಚಿತ್ರಮೂಲ, ಹಿಪ್ಪಲಿ, ಹಿಪ್ಪಲಿ ಬೇರು, ಶುಂಠಿ ಇವುಗಳ ಕಷಾಯವನ್ನು ಆರಿದ ಬಳಿಕ ಜೇನುತುಪ್ಪ ಹಾಕಿ ಕೊಟ್ಟರೆ ಘೋರ ವಿಷಮಜ್ವರ, ಸನ್ನಿಪಾತಜ್ವರ, ಶೀತಪೂರ್ವಕ ಜ್ವರ, ಮರಳಿಸಿದ ಜ್ವರ ಇವೆಲ್ಲವುಗಳ ನಾಶವಾಗುತ್ತದೆ.

೧೩ ಸ್ವಯಂ ಭೈರವ ರಸ:—ಪಾರಜ, ಗಂಧಕ, ನೇಪಾಳದ ಬೇರು, ಇವು ೧-೧ ಭಾಗ, ಜಾಪಾಳದಬೀಜ ಅರ್ಧ ಭಾಗ ಇವನ್ನೆಲ್ಲ ಶುದ್ಧಮಾಡಿಕೊಂಡು

ಅವೆಲ್ಲವುಗಳ ಅರ್ಧದಷ್ಟು ಹಿಪ್ಪಲಿ ಹಾಕಿ ಪುಡಿಮಾಡಿಡಬೇಕು. ೧-೧|| ಗುಂಜಿ ಯಷ್ಟು ಚೂರ್ಣವನ್ನು ಶಕ್ತಿಮಾನಕ್ಕನುಸರಿಸಿ ವೀಳ್ಯದೆಲೆಯೊಳಗೆ ಕೊಟ್ಟರೆ ಜುಲಾಬಾಗಿ, ವಿಷಮಜ್ವರ, ಜೀರ್ಣಜ್ವರ, ಮಂದಾಗ್ನಿ ಮುಂತಾದವುಗಳ ನಾಶ ವಾಗುವದು. ಜುಲಾಬನ್ನು ನಿಲ್ಲಿಸುವದಕ್ಕೆ ತುಪ್ಪ ಅನ್ನ ಕೊಡುವದು.

೧೪ ರಾಮಬಾಣ ರಸ:—ಪಾರಜ ೧ ಭಾಗ, ಮನಶೀಲ ೨ ಭಾಗ, ಕಲ್ಲುಕಪ್ಪರಿಗೆ ೪ ಭಾಗ ಒಟ್ಟುಗೂಡಿಸಿ ಚೂರ್ಣ ಮಾಡಿ, ಅದಕ್ಕೆ ಹಾಗಲರಸದ ೭ ಭಾವನೆಗಳನ್ನು ಕೊಡುವದು. ಬಳಿಕ ಅವರೇಕಾಳಿನಷ್ಟು ಗುಳಿಗೇ ಕಟ್ಟಿ, ಸಕ್ಕರೆಯೊಳಗೆ ಇಲ್ಲವೆ ತಾಂಬೂಲದೊಳಗೆ ಬೆಳಗು-ಸಾಯಂಕಾಲಗಳಲ್ಲಿ ೧-೧ ಗುಳಿಗೆ ಕೊಟ್ಟರೆ ವಿಷಮಜ್ವರ ನಿಲ್ಲುತ್ತವೆ. ದಿವಸ ೭. ಪಥ್ಯ ಹಾಲು ಅನ್ನ. ಓಕರಿಕೆ ಬಂದರೆ ಹಾಲಿನಲ್ಲಿ ಸಕ್ಕರೆ ಹಾಕಿ ಕುಡಿಸಬೇಕು.

೧೫ ತುಳಸಿಯ ರಸದಲ್ಲಿ ಮೆಣಸಿನ ಪುಡಿಹಾಕಿ ಕೊಟ್ಟರೆ ೩ ದಿನಗಳಲ್ಲಿ ವಿಷಮಜ್ವರ ನಿಲ್ಲುತ್ತವೆ.

೧೬ ಕಿರಕಸಾಲಿಯ ಬೇರನ್ನು ಅರೆದು ತಲೆಗೆ ತಿಕ್ಕಿದರೆ ಕಲೆ ಶಾಂತ ವಾಗುವದು.

೧೭ ಬೇವಿನ ಎಲೆ (ಸೊಪ್ಪು,) ಒಜೆ, ಕೋಷ್ಟ, ಅಳಲೇಕಾಯಿ, ಬಿಳೀ ಸಾಸುವೆ, ತುಪ್ಪ ಮತ್ತು ಗುಗ್ಗುಳ ಇವುಗಳ ಧೂಪ ಕೊಡಬೇಕು. ಆ ಧೂಪ ದಲ್ಲಿ ತುಸ ರಾಳದ ಪುಡಿಯನ್ನು ಉದುರಿಸಬೇಕು; ಅಂದರೆ ಧೂಪವು ಚನ್ನಾಗಿ ಆಗುವದು.

೧೮ ಹಾವಿನಪರಿ, ಬಿಳೀಸಾಸುವೆ, ಇಂಗು, ಬೇವಿನಸೊಪ್ಪು ಸಮ ಭಾಗ ತಕ್ಕೊಂಡು ಚೂರ್ಣಮಾಡಿ ಧೂಪಕೊಟ್ಟರೆ ಜ್ವರ ಶಾಂತವಾಗುವವು.

೧೯ ವಿಷಮಜ್ವರ ಮತ್ತು ಚಳಿ-ಜ್ವರಗಳಿಗೆ:—ಬೇವಿನ ತೊಗಟಿಯ ಕಷಾಯದಲ್ಲಿ ಹವೀಜ ಮತ್ತು ಶುಂಠಿಯ ಚೂರ್ಣಹಾಕಿ ಕೊಡಬೇಕು.

೨೦ ವಿಷಮ ಸುಂದರ ರಸ:—ಶುದ್ಧ ಪಾರಜ, ಗಂಧಕ, ಕಲ್ಲುಕಪ್ಪರಿಗೆ, ಮನಶೀಲ, ಅರದಾಳ ಇವೆಲ್ಲ ಶುದ್ಧವಾದವುಗಳನ್ನು ಸಮಭಾಗ ತಕ್ಕೊಂಡು, ಒಟ್ಟುಗೂಡಿಸಿ, ಕಣಗಲ ರಸದಲ್ಲಿ ಒಂದು ದಿನ ಅರೆದು, ಬಳಿಕ ಮಣ್ಣಿನ ಕುಳ್ಳಿ ಯಲ್ಲಿ ತುಂಬಿ, ಬಾಯಿಗೆ ಪಣತಿಯನ್ನು ಮುಚ್ಚಿ, ಅರಲು ಅರಿವೆಗಳನ್ನು ಕಟ್ಟಿ, ಒಂದು ದೊಡ್ಡ ಬೋಕಿಯಲ್ಲಿ ಉಸುಕು ತುಂಬಿ ಅದರಲ್ಲಿ ಆ ಕುಳ್ಳಿಯನ್ನು ಉದರ ಕುತ್ತಿಗೆಯ ವರೆಗೆ ಉಸುಕು ಬರುವಹಾಗಿಟ್ಟು ಅದರ ಮೇಲೆ ಬತ್ತದ ಕೊಬ್ಬಟ್ಟು ಹಾಕಬೇಕು. ಬಳಿಕ ಆ ಬೋಕಿಯನ್ನು ಒಲಿಯ ಮೇಲಿಟ್ಟು ಒಂದು ಪ್ರಹ ರದ ವರೆಗೆ ಅದಕ್ಕೆ ಮಂದಾಗ್ನಿ ಕೊಡಬೇಕು. ಕೊಬ್ಬಟ್ಟು ಕಮರಿದ ನಂತರ

ಟೆಂಕಿಯನ್ನು ಆರಿಸಿ ಕುಳ್ಳಿಯು ತನ್ನಷ್ಟಕ್ಕೆ ತಾನೇ ಆರಿದ ಬಳಿಕ ಒಳಗಿನ ಔಷಧ ವನ್ನು ಹಾಗಲ ರಸದಲ್ಲಿ ಅರೆದು, ಅವರೇಕಾಳಷ್ಟು ಮಾತ್ರೆಗಳನ್ನು ಮಾಡಬೇಕು. ಅಂಥದೊಂದು ಮಾತ್ರೆಯನ್ನು ಬಾಳೇಹಣ್ಣಿನಲ್ಲಿ ಇಲ್ಲವೆ ಬೆಲ್ಲದಲ್ಲಿ ಕೊಟ್ಟರೆ ೧೯ ಪ್ರಕಾರದ ವಿಷಮಜ್ವರಗಳೂ, ದಿನಾಲು ಬರುವ, ದಿನ ಬಿಟ್ಟು ದಿನ ಬರುವ, ಮೂರು ದಿವಸಕ್ಕೊಮ್ಮೆ ಬರುವ, ನಾಲ್ಕು ದಿವಸಕ್ಕೊಮ್ಮೆ ಬರುವ ಜ್ವರಗಳೂ ಹಾಗು ದಾಹಪೂರ್ವಕ ಜ್ವರಗಳೂ ಖಂಡಿತವಾಗಿ ನಿಲ್ಲುತ್ತವೆ. ಪಥ್ಯ:—ಹೆಸರಿನ ಕಾಟಿ, ಹಾಲು, ಅನ್ನ, ಸಕ್ಕರಿ. ೩ ದಿವಸ ಇಲ್ಲವೆ ೭.

೨೧ ಶುದ್ಧವಾದ ಕುತ್ತಿ, ಅರದಾಳಗಳನ್ನು ಸಮಭಾಗ ತಕ್ಕೊಂಡು ಅದ ರಲ್ಲಿ ಅಷ್ಟೇ ಶಂಖಭಸ್ಮ, ಕವಡೀಭಸ್ಮ ಕೂಡಿಸಿ ಲವುಳಸರದ ರಸದಲ್ಲರೆದು ಹರಿ ವಾಣದಲ್ಲಿ ಹಾಕಿ ಮೇಲೊಂದು ಪರಿವಾಣ ಡಬ್ಬಾ ಹಾಕಿ, ಅರಲಕವಿ ಸುತ್ತಿ ಅದಕ್ಕೆ ಕುಕ್ಕುಟಪುಟಕೊಟ್ಟು ಸ್ವಾಂಗಶೀತವಾದ ಬಳಿಕ ಆ ಭಸ್ಮವನ್ನು ೧ ತೊಲಿ ಸಕ್ಕರಿಯಲ್ಲಿ ೨ ಗುಂಜೆಯಷ್ಟು ಹಾಕಿ ಕೊಡಬೇಕು; ಹಾಗು ಆ ಕೂಡಲೆ ಹಾಲು ಅನ್ನ ಉಣಿಸಬೇಕು. ಒಕರಿಕೆ ಒಂದರೆ ಅಮೃತಬಳ್ಳಿಯ ರಸ ಇಲ್ಲವೆ ಲವಂಗದ ಚೂರ್ಣವನ್ನು ಜೇನುತುಪ್ಪದೊಡನೆ ತಿನ್ನಿಸಬೇಕು. ಈ ಔಷಧವನ್ನು ೧-೨ ದಿನ ತಕ್ಕೊಳ್ಳುವಷ್ಟರಲ್ಲಿಯೇ ವಿಷಮ ಜ್ವರಗಳು ನಿಲ್ಲುತ್ತವೆ.

೨೨ ಪಾರಜ, ಗಂಧಕ, ನೇಪಾಳದ ಬೇರು ಇವು ಶುದ್ಧವಾದವನ್ನು ಸಮಭಾಗ ತಕ್ಕೊಂಡು ಆ ಮೂರರಷ್ಟು ಧತ್ತೂರಿಯ ಬೀಜಗಳನ್ನು ಶುದ್ಧಮಾಡಿ ಕೂಡಿಸಬೇಕು. ಇವೆಲ್ಲವುಗಳ ತ್ರಿರಷ್ಟು ಶುಂಠಿ, ಮೆಣಸು, ಹಿಪ್ಪಲಿಗಳ ಚೂರ್ಣ ವನ್ನು ಹಾಕಿ ಲಿಂಬೀ ಹಾಗು ಅಲ್ಲದ ರಸದಲ್ಲರೆದು, ಅವರೇ ಕಾಳಷ್ಟು ಗುಳಿಗೆ ಮಾಡಬೇಕು. ಇವುಗಳಿಗೆ ಮಹಾ ಜ್ವರಾಂಕುಶವೆನ್ನುತ್ತಾರೆ. ಈ ಮಾತ್ರೆಯು ಎಲ್ಲ ಜ್ವರಗಳಿಗೂ ಯಮಸದೃಶ್ಯವಾಗಿರುತ್ತದೆ ಇದರಿಂದ ದಿನಾಲು, ದಿನ ಬಿಟ್ಟು ದಿನ, ಮೂರು ದಿನ, ನಾಲ್ಕು ದಿನಗಳಿಗೆ ಬರುವ ಜ್ವರಗಳೂ ವಿಷಮ ಇಲ್ಲವೆ ಸನ್ನಿ ಪಾತಜ್ವರಗಳೂ ಒಂದೇ ದಿನದಲ್ಲಿ ನಿಲ್ಲುತ್ತವೆ. ಅನುಪಾನ:-ಗುಳಿಗೆಗಳನ್ನು ಸಕ್ಕರಿ, ಜೇನುತುಪ್ಪ ಇಲ್ಲವೆ ವೀಳ್ಯೆದೆಲಿಯ ರಸಗಳಲ್ಲಿ ಕೊಡತಕ್ಕದ್ದು.

೨೩ ವಿಷಮಜ್ವರದಲ್ಲಿ ತಾಮ್ರ ಭಸ್ಮದ ಮಾತ್ರೆಯು ಚೆನ್ನಾಗಿ ಉಪ ಯೋಗ ಬೀಳುತ್ತದೆ; ಆದರೆ ಆ ಭಸ್ಮವು ಉಚ್ಚತರಗತಿಯದಿರಬೇಕು; ಹಾಗು ಅದನ್ನು ಅಲ್ಪಪ್ರಮಾಣದಿಂದ ಕೊಡಬೇಕು.

೨೪ ಮನಶೀಲ, ಇಲಿಪಾಷಾಣ, ಕುತ್ಥಿ ಇವು ಶುದ್ಧವಾದವನ್ನು ಸಮಭಾಗ ತಕ್ಕೊಂಡು ನೀರೊಳಗರೆದು ಬಿಸಿಲೊಳಗೆ ಒಣಗಿಸಿ ಹಂಚಿನಲ್ಲಿ ಹಾಕಿ ಒಲೆಯ ಮೇಲಿಟ್ಟು ಕೆಳಗೆ ಉರಿ ಹಚ್ಚಿ ೪ ಗಳಿಗೆಯ ವರೆಗೆ ಕಬ್ಬಿಣದ ಸೌಟಿ

ನಿಂದ ಅಲ್ಲಾಡಿಸಿ ತಿಕ್ಕಿ ಹೊಗೆ ಹೊರಡದಂತಾದ ಬಳಿಕ ಮತ್ತೆ ೨ ಗಳಿಗೆಯು ವರೆಗೆ ಹಾಗೆಯೇ ಅಲ್ಲಾಡಿಸಬೇಕು. ನಂತರ ಸ್ವಾಂಗ ಶೀತವಾಯಿತೆಂದರೆ ಆ ಔಷಧವನ್ನು ತಕ್ಕೊಂಡು, ಸಶಕ್ತನಾದ ದೊಡ್ಡವನಿಗೆ ಅರ್ಧ ಗುಂಜಿಯಷ್ಟು ಸಕ್ಕರೆ ತುಪ್ಪಗಳೊಡನೆ ಕೊಡಬೇಕು. ಅಶಕ್ತ ಪ್ರಕೃತಿಯವನಿಗೆ ಕಾಲು ಗುಂಜಿಯಷ್ಟು, ೧೨ವರ್ಷದ ಒಳಗಿನ ವಯಸ್ಸಿನ ಹುಡುಗರಿಗೆ ಉದ್ದಿನ ಕಾಳಷ್ಟು ಕೊಡಬೇಕು. ಪಥ್ಯ:—ಬರೇ ಹಾಲು ಅನ್ನ. ಮೂರೇ ದಿನಗಳಲ್ಲಿ ಎಂಟು ಬಗೆಯ ಜ್ವರಗಳೂ ನಿಃಶೇಷವಾಗಿ ಹೋಗುತ್ತವೆ. ಜ್ವರವು ತಾತ್ಕಾಲದಲ್ಲಿ ನಿಲ್ಲಬೇಕೆಂದು ಇಚ್ಛೆಯಿದ್ದರೆ ಕಟುಕರೋಣಿಯ ೧॥ ಮಾಸಿ ಚೂರ್ಣ, ನೆಲ ಬೇವಿನ ಚೂರ್ಣ ೬ ಗುಂಜಿ ಅಳಲೆಕಾಯಿಪುಡಿ ೪ ಗುಂಜಿ ಇವನ್ನೆಲ್ಲ ಕೂಡಿಸಿ ಇವುಗಳಲ್ಲಿ ಮೇಲೆ ಹೇಳಿದ ಪ್ರಮಾಣದಂತೆ ಆ ಔಷಧವನ್ನು ಹಾಕಿಕೊಡಬೇಕು.

ನಿಂತ ಜ್ವರಗಳನ್ನು ಪುನಃ ತಂದು ಚಮತ್ಕಾರ ತೋರಿಸುವದಿದ್ದರೆ, ಹಿಪ್ಪಲಿ ಬೇರು ೬ ಗುಂಜಿ, ಆಕಳಕರಿ ೧೨ ಗುಂಜಿ ಇವುಗಳ ವಸ್ತ್ರದಲ್ಲಿ ಸೋಸಿದ ಚೂರ್ಣ ದಲ್ಲಿ ಮೇಲೆ ಹೇಳಿದ ಔಷಧವನ್ನು ಆ ಪ್ರಮಾಣದಲ್ಲಿ ಕೊಟ್ಟರೆ ಹೆಚ್ಚಾಗಿ ಜ್ವರ ಬರುತ್ತವೆ. ಮೈಗೆ ಹೆಚ್ಚಾಗಿ ದಾಹವಾದರೆ ತೀಗೀಕಾಯಿಯ ನೀರನ್ನು ಮೈಗೆ ಹಚ್ಚ ಬೇಕು; ಇಲ್ಲವೆ ಅಂಟಾಳಕಾಯಿಯ ಬುರುಗನ್ನು ಮೈಗೆ ಸವರಬೇಕು. ಅಂದರೆ ದಾಹವು ಕಡಿಮೆಯಾಗುತ್ತದೆ. ಬಳಿಕ ಜ್ವರ ನಿಲ್ಲಿಸುವ ಸಲುವಾಗಿ ತುಪ್ಪ, ಸಕ್ಕರೆ ಯಲ್ಲಿ ಮತ್ತೆ ಆ ಔಷಧವನ್ನು ಪ್ರಮಾಣಬದ್ಧವಾಗಿ ಕೊಡಬೇಕು. ಈ ರಸಾಯನ ವನ್ನು ಯಾವಾಗಲೂ ಗುಪ್ತವಾಗಿರಿಸಬೇಕು. ಇದಕ್ಕೆ ಜ್ವರಕೇಸರಿ ಎಂಬ ಸಂಜ್ಞೆ ಯು. ಇದರಲ್ಲಿ ಇಲಿಪಾಷಾಣವಿದೆಯೆಂದು ತಿಳಿಸುವ ಕಾರಣವಿಲ್ಲ. ರಸಾಯನ ಮಾಡುವ ಕಾಲಕ್ಕೆ ಇಲಿಪಾಷಾಣವು ಹಾರಿ ಹೋಗಿ, ಕಡೆಗೆ ತುತ್ಥದೊಳಗಿನ ತಾ- ಮ್ರವು ಮಾತ್ರ ಬಾಕಿ ಉಳಿಯುತ್ತದೆ. ಇದೇ ಈ ರಸಾಯನದೊಳಗಿನ ಸೂಕ್ಷ್ಮವು. ಸುಜ್ಞ ವೈದ್ಯರು ಇದರ ಅನುಭವವನ್ನು ಪಡೆಯತಕ್ಕದ್ದು. ಈ ರಸಾಯನ. ವನ್ನು ಸಿದ್ಧಗೊಳಿಸುವಾಗ ಅದರ ವಿಷಯುಕ್ತ ಹೊಗೆಯು ಕಣ್ಣು, ಮೂಗು, ಬಾಯಿಗಳಲ್ಲಿ ಸೇರದಂತೆ ಎಚ್ಚರಪಡತಕ್ಕದ್ದು.

---

## (೧) ಸಂತತ ಜ್ವರ.

ಲಕ್ಷಣ:—೭-೧೦ ಇಲ್ಲವೆ ೧೨ ದಿನಗಳ ವರೆಗೆ ಒಂದೇ ಸವನೆ ಜ್ವರ ಬಂದು, ಬೆವರು ಬಂದರೂ ಜ್ವರವಿದ್ದೇ ಇರುತ್ತವೆ. ಇದಕ್ಕೆ ಸಂತತಜ್ವರವೆನ್ನು ವರು. ಮೇಲೆ ಹೇಳಿದ ದಿನಗಳಲ್ಲಿ ಅನುಕ್ರಮವಾಗಿ ವಾತ, ಪಿತ್ಥ, ಕಫ, ಇವು ಗಳು ಅಧಿಕವಾಗಿರುತ್ತವೆ. ಈ ಜ್ವರಗಳು ತ್ರಿದೋಷಗಳಿಂದುಂಟಾಗಿರುತ್ತವೆ.

ಇದರಲ್ಲಿ ವಾತಾದಿ ೩ ದೋಷಗಳು, ಸಪ್ತಧಾತುಗಳ ೭ ದೋಷಗಳು, ಮೂತ್ರ ೧ ಮಲದೊಂದು ಹೀಗೆ ಒಟ್ಟಿಗೆ ೧೨ ದೋಷಗಳಿರುತ್ತವೆ. ಸಂತತ ಅಥವಾ ವಿಷಮಜ್ವರಗಳು ಕ್ಷೀಣ ಪುರುಷನಿಗೆ ಹೆಚ್ಚು ದಿವಸಗಳ ವರೆಗೆ ಬರುತ್ತವೆ.

ಸಂತತ ಜ್ವರಕ್ಕೆ ಉಪಾಯಗಳು :—

೧ ಕಹಿಪಡುವಲ, ಕೋಡುಮುರುಕನ ಬೀಜ, ದೇವದಾರು, ಅಮೃತ ಬಳ್ಳಿ, ಬೇವಿನ ತೊಗಟಿ ಇವುಗಳ ಕಾಢೆ-ನಿಕಾಢೆ ಕೊಡತಕ್ಕದ್ದು.

೨ ಕಹಿಪಡುವಲ, ಕೋಡುಮುರುಕನ ಬೀಜ, ನೆಲಿಇಂಗಳ, ಬಾಳಹಿ ರಡಾ, ಕಟುಕರೋಣಿ, ಅಮೃತಬಳ್ಳಿ ಇವುಗಳ ಕಷಾಯ ಕೊಡುವದು.

೩ ಕೋಡುಮುರುಕನ ಬೀಜ, ಲೋಧನ ಚಕ್ಕೆ, ಸಂಪೀಮರದ ಹೂ, ಜೇಕಿನಗಡ್ಡೆ, ಬೂರಲ ಅಂಟು ಇವುಗಳನ್ನು ಸಮಭಾಗ ತಕ್ಕೊಂಡು ಚೂರ್ಣ ಮಾಡಿ ೩ ಮಾಸಿ ಚೂರ್ಣವನ್ನು ಬಿಸಿನೀರಿನೊಡನೆ ಕೊಡಬೇಕು.

೪ ನೆಲ್ಲೀಚೆಟ್ಟು, ಜೇಕಿನಗಡ್ಡೆ, ಶುಂಠಿ, ನೆಲಗುಳ್ಳಬೇರು, ಅಮೃತಬಳ್ಳಿ ಇವುಗಳ ಕಷಾಯದಲ್ಲಿ ಜೇನುತುಪ್ಪ ಹಾಗು ಹಿಪ್ಪಲಿ ಪುಡಿ ಹಾಕಿ ಕೊಡಬೇಕು. ಇದರಿಂದ ಸಂತತಾಖ್ಯ ವಿಷಮಜ್ವರದ ನಾಶವಾಗುತ್ತದೆ.

೫ ಕಹಿಪಡುವಲ, ಕೋಡುಮುರುಕನ ಬೀಜ, ದೇವದಾರು, ಅಳಲೇ ಕಾಯಿ, ತಾರೀಕಾಯಿ, ನೆಲ್ಲೀಚೆಟ್ಟು, ಜೇಕಿನಗಡ್ಡೆ, ಕರೇದ್ರಾಕ್ಷಿ, ಜ್ಯೇಷ್ಠಮಧು ಅಮೃತಬಳ್ಳಿ, ಅಡಸಾಲ ಇವುಗಳ ಕಷಾಯವನ್ನು ಜೇನುತುಪ್ಪ ಹಾಕಿಕೊಟ್ಟರೆ ಸಂತತ ಜ್ವರ, ಸತತ ಜ್ವರ ಮೊದಲಾದ ೫ ಬಗೆಯ ವಿಷಮಗಳು ನಿಲ್ಲುತ್ತವೆ; ಅಲ್ಲದೆ ಇದರಿಂದ ದಾಹಪೂರ್ವಕ ಜ್ವರ, ನವಜ್ವರಗಳೂ ನಿಲ್ಲುತ್ತವೆ.

೬ ಕಹಿಪಡುವಲ, ಜೇಕಿನಗಡ್ಡೆ, ಅಡಸಾಲ, ಕಟುಕರೋಣಿ, ಕರಿಬಂಟ ಇವುಗಳ ಕಷಾಯವನ್ನು ಸಂತತ ಜ್ವರದಲ್ಲಿ ವಾತನಾಶಕ್ಕೆ ಕೊಡಬೇಕು.

೭ ಅತಿಬಜೆ, ನೆಲಬೇವು, ಕಟುಕರೋಣಿ ಇವನ್ನು ಪ್ರತಿಯೊಂದು ೨-೨ ತೊಲಿ ತಕ್ಕೊಂಡು, ಚೂರ್ಣ ಮಾಡಿ ೪೦ತೊಲಿ ಎಸರು ಬಂದ ನೀರಲ್ಲಿ ಹಾಕಿಡ ಬೇಕು. ದಿನದಲ್ಲಿ ೩-೩ ತೊಲಿಯಂತೆ ಮೂರು ಮೂರು ಸಾರೆ ಕೊಡಬೇಕು.

೮ ಜ್ವರಬ್ರಹ್ಮಾಸ್ತ್ರ:—ಶುದ್ಧ ಇಲಿಪಾಷಾಣ ೨ ತೊಲಿ ತಕ್ಕೊಂಡು ಗೋಮೂತ್ರದಲ್ಲಿ ೩ ದಿವಸ ನೆನೆ ಇಡಬೇಕು. ದಿನಾಲು ಹೊಸ ಗೋಮೂತ್ರ ಹಾಕಬೇಕು. ಬಳಿಕ ಅದನ್ನು ಸ್ವಚ್ಛವಾಗಿ ತೊಳೆದಿಡಬೇಕು. ಚಳಿಜ್ವರ ದಲ್ಲಿ ಚಳಿ ಬರುವ ಮೊದಲು ಒಂದು ಸಾಸುವೆ ಕಾಳಷ್ಟು ಆ ಪಾಷಾಣ ತಕ್ಕೊಂಡು ೨-೩ ಗುಂಜಿ ಸಕ್ಕರೆಯೊಡನೆ ಕೊಡುವದು. ದಿವಸ ೩. ಇದ ರಿಂದ ನವಜ್ವರಗಳೂ ಬಹುದಿವಸದ ಜ್ವರಗಳೂ ನಿಲ್ಲುವವು. ಸಂತತ ಜ್ವರಕ್ಕು

ಸತತ ಜ್ವರಗಳೂ ನಿಲ್ಲುವವು. ಪಥ್ಯ:—ಉಪ್ಪು-ಕಾರವಿಲ್ಲದ ಹಾಲು-ಅನ್ನ, ತುಪ್ಪ-ಅನ್ನ.

೯ ಚಂಡೇಶ್ವರರಸ:—ಶುದ್ಧ ಪಾರಜ, ಗಂಧಕ, ಮತ್ತು ನೇಪಾಳದ ಬೇರು, ತಾಮ್ರಭಸ್ಮ ಹಾಗು ಶುದ್ಧ ಇಲಿಪಾಷಾಣ ಇವುಗಳನ್ನು ಖಾರಗೆಣಸಿನ ರಸದಲ್ಲಿ ೬ ತಾಸುಗಳ ವರೆಗೆ ಅರೆಯತಕ್ಕದ್ದು; ಮತ್ತು ೭ ದಿನಗಳ ವರೆಗೆ ಅಲ್ಲದ ರಸದಲ್ಲಿಯೇ ಇರಗೊಡಬೇಕು. ಬಳಿಕ ಲಕ್ಕೀಸೊಪ್ಪಿನ ರಸದಲ್ಲಿ ೭ ದಿನ ನೆನೆಹಾಕಿ ನಂತರ ತೆಗೆದು ಅರ್ಧಗುಂಜಿ ಪ್ರಮಾಣದ ಗುಳಿಗೆ ಮಾಡಿಟ್ಟು, ಅಲ್ಲದ ರಸ ಜೇನುತುಪ್ಪಗಳಲ್ಲಿ ಇಲ್ಲವೆ ಸಕ್ಕರೆಯಲ್ಲಿ ೧ ಗುಳಿಗೆ ಕೊಡಬೇಕು. ಇದರಿಂದ ತೀವ್ರ ಜ್ವರಗಳ ನಾಶವಾಗುತ್ತದೆ. ಇದಕ್ಕೆ ಪಥ್ಯವಿಲ್ಲ.

೧೦ ದಾರುಬ್ರಹ್ಮರಸ:—ಇಲಿಪಾಷಾಣ, ಇಂಗಳೀಕ, ಮದ್ದುಗುಣಿಕೆ ಬೀಜ ಇವು ಶುದ್ಧವಾದವುಗಳನ್ನು ತಕ್ಕೊಂಡು ಅಷ್ಟೇ ಹಿಪ್ಪಲಿಯೊಡನೆ ಲಿಂಬೀಹುಳಿಯಲ್ಲರೆದು ಗುಲಗಂಜಿಯಷ್ಟು ಗುಳಿಗೆ ಮಾಡಬೇಕು. ದೊಡ್ಡವರಿಗೆ ಅಂಥದೊಂದು ಗುಳಿಗೆಯನ್ನು ತುಳಸೀ ರಸದಲ್ಲಿ ಕೊಡಬೇಕು. ೧೨ ವರ್ಷದೊಳಗಿನ ಹುಡುಗರಿಗೆ ಅರ್ಧ ಗುಳಿಗೆ ಕೊಡುವದು. ಚಳಿ-ಚಳಿಯಾಗಿ ಬರುವ ಸಂತತ ಜ್ವರದಲ್ಲಿ ಬಡಬಡಿಸಹತ್ತಿದರೆ ಇಲ್ಲವೆ ಹೆಚ್ಚು ಬೆವರು ಬರಹತ್ತಿದರೆ, ಅಥವಾ ಜ್ವರದ ಪ್ರಮಾಣವು ಹೆಚ್ಚಾದರೆ ಈ ಔಷಧದ ಉಪಯೋಗಮಾಡತಕ್ಕದ್ದು.

---

## (೨) ಸತತಜ್ವರ.

ಲಕ್ಷಣ:—ಈ ಜ್ವರಗಳು ರಾತ್ರಿಯಲ್ಲಿ ಎರಡುಸಾರೆ ಬರುತ್ತವೆ. ಇದಕ್ಕೆ ಈಶಾನದೇವರೆನ್ನುವರು. ಇದು ಹಗಲು ೨ ಸಾರೆ ಇಲ್ಲವೆ ರಾತ್ರಿ ೨ ಸಾರೆ ಅಥವಾ ಹಗಲು ೧ ಸಾರೆ ರಾತ್ರಿ ೧ ಸಾರೆ ಹೀಗೆ ಯಾವಾಗಾದರೂ ದಿನಾಲು ಎರಡು ಸಾರೆ ಬರುತ್ತದೆ. ಇಂಥ ಕಾಲಕ್ಕೆ ಜ್ವರ ಬರುವದೆಂಬದರ ನಿಯಮವಿಲ್ಲ. ಒಮ್ಮೊಮ್ಮೆ ಹಗಲು-ರಾತ್ರಿಯಲ್ಲಿ ಒಮ್ಮೆಯೇ ಬರುತ್ತವೆ.

### ಸತತಜ್ವರಕ್ಕೆ ಉಪಾಯಗಳು.

೧ ನಿರಾಮೆ ಬಳ್ಳಿ, ಕಟುಕರೋಹಿಣಿ, ನೆಲಿಂಗಳ, ಬಿಳೀ ಕರಿಬಂಟ ಇವುಗಳ ಕಷಾಯವು ಸತತ ಜ್ವರದೊಳಗಿನ ವಾತಾದಿ ದೋಷಗಳನ್ನು ನಿವಾರಿಸುತ್ತದೆ

೨ ಕಹಿಪಡುವಲ, ಬಾಳಹೀರೆ, ಬೇವು, ಕೋಡುಮುರುಕನ ಬೀಜ, ಅಮೃತಬಳ್ಳಿ, ನೆಲಿಇಂಗಳ ಇವುಗಳ ಕಷಾಯವು ಕೆಮ್ಮು ಮತ್ತು ಸತತಜ್ವರಗಳನ್ನು ನಿವಾರಿಸುತ್ತದೆ.

೩. ಕಹಿಪಡುವಲು, ತ್ರಿಫಳ, ಬೇವಿನ ಎಲೆ, ದ್ರಾಕ್ಷಿ, ಕಕ್ಕೀಕಾಯಿಯು ತಿಳಲು, ಅಡಸಾಲ ಇವುಗಳ ಕಷಾಯುವನ್ನು ಸಕ್ಕರಿ ಜೇನತುಪ್ಪಗಳೊಡನೆ ಕೊಟ್ಟರೆ ದಿನಾಲು ಬರುವ ಜ್ವರಗಳು ನಿಲ್ಲುತ್ತವೆ.

೪ ಕಾಕೀ ಬೇರನ್ನು ಕಿವಿಗೆ ಕಟ್ಟಿದರೆ ರಾತ್ರಿಯಲ್ಲಿ ಬರುವ ಜ್ವರಗಳ ನಾಶವಾಗುತ್ತದೆ.

---

## (೩) ಮಹೇಂದ್ರಜ್ವರ.

ಲಕ್ಷಣ:—ಯಾವ ಜ್ವರಗಳು ಹಗಲು ರಾತ್ರಿಯಲ್ಲಿ ೨-೩-೪ ಅಥವಾ ೫ ಸಾರೆ ಸಹ ಆರಿ ಆರಿ ಬರುತ್ತವೆಯೋ ಅವಕ್ಕೆ ಹಂಸರಾಜನಿದಾನದಲ್ಲಿ ಮಹೇಂದ್ರಜ್ವರವೆಂಬ ಸಂಜ್ಞೆಕೊಟ್ಟಿದೆ. ಇದರ ಲಕ್ಷಣಗಳು ವಿಷಮಜ್ವರದಂತೆಯೇ ಇರುತ್ತವೆ. ಆದ್ದರಿಂದ ಇವಕ್ಕೂ ವಿಷಮಜ್ವರದ ಉಪಾಯಗಳನ್ನೇ ಮಾಡಬೇಕು; ಮತ್ತು ಸತತಜ್ವರದ ಉಪಾಯಗಳನ್ನೂ ಮಾಡತಕ್ಕದ್ದು.

---

## (೪) ದಿನಾಲು ಬರುವ ಚಳಿಜ್ವರ.

ಲಕ್ಷಣ:—ಚಳಿಚಳಿಯಾಗಿ ಜ್ವರ ಬರುತ್ತವೆ. ಮೈ-ಕೈ ಒಡ್ಡಮುರಿದ ಹಾಗೆ ಆಗುವದು, ಆಕಳಿಕೆ ಬರುವವು, ಬೆನ್ನಹುರಿಯು ಬಿಗಿದಂತಾಗುವದು; ಹಾಗು ನೀರಡಿಕೆಯಾಗುವದು.

ಶರತ್ ಮತ್ತು ಹೇಮಂತ ಋತುಗಳಲ್ಲಿ ಶರದೃತು ತೀರಿ ಹೇಮಂತದ ಪ್ರಾರಂಭಕ್ಕೆ ಚಳಿಜ್ವರದ ಹಂಗಾಮವು. ಇದು ಕೆಸರೊಳಗಿನ ಸೂಕ್ಷ್ಮ ವಿಷ, ಜಂತುಗಳು ರಕ್ತದಲ್ಲಿ ನೇರುವದರಿಂದ ಬರಹತ್ತುತ್ತದೆಂದು ಪ್ರಾಚ್ಯ ಮತ್ತು ಅರ್ವಾಚೀನ ವೈದ್ಯರ ಅಭಿಪ್ರಾಯದಂತೆ ಸಿದ್ಧವಾಗಿರುತ್ತದೆ; ಆದರೆ ಈ ಜ್ವರಗಳು ಕೆಲಹೊತ್ತು ಇರುವವು. ಕೆಲ ಹೊತ್ತು ಇರುವದಿಲ್ಲ. ಜ್ವರವಿಲ್ಲದಾಗ ಆ ಸೂಕ್ಷ್ಮ ಜಂತುಗಳು ಎಲ್ಲಿಗೆ ಹೋಗಿರುತ್ತವೆ? ಅವು ಯಾವ ಸ್ಥಿತಿಯಲ್ಲಿರುವವು? ಶರೀರದಲ್ಲೇ ಅವು ಕಾಯಮವಾಗಿರುವದಾದರೆ ಕೆಲವು ಹೊತ್ತೇ ಜ್ವರವೇಕೆ ಬರುವದಿಲ್ಲ? ಅಷ್ಟೇ ಹೊತ್ತು ಕೇವಲ ಹಪಾರಿಯೇಕೆನಿಸುತ್ತದೆ? ಮುಂತಾದ ಪ್ರಶ್ನೆಗಳುಂಟಾಗುವವು. ಈ ಬಗ್ಗೆ ಆರ್ಯವೈದ್ಯರ ಮತವೇನಂದರೆ,--ಜ್ವರೋತ್ಪಾದಕದೋಷವು ಆಮಾಶಯದಲ್ಲಿ ಬರದ ಹೊರತು ಜ್ವರ ಬರುವದಿಲ್ಲ. ಆದ್ದರಿಂದ ಅನ್ಯಸ್ಥಳದೊಳಗಿನ ದೋಷವು ಆಮಾಶಯಕ್ಕೆ ಬಂದೊಡನೆಯೇ ಜ್ವರ ಬರುತ್ತವೆ. ಜ್ವರದ ಉಷ್ಣತೆಯಿಂದ ಅಲ್ಲಿಯ ದೋಷದ ಪಾಚನವಾಯಿತೆಂದರೆ ದೋಷವು ಹಗುರಾಗುತ್ತದೆ. ಹಗುರಾಯಿತೆಂದರೆ ಪುನಃ ತನ್ನ ಮೊದಲಿನ

ಸ್ಥಳಕ್ಕೆ ಹೋಗಲಿಕ್ಕೆ ಅದಕ್ಕೆ ಅವಕಾಶ ಹಿಡಿಯುವದಿಲ್ಲ. ಚಳಿಜ್ವರದಲ್ಲಿ ಕಾಲ ಭೇದದಿಂದ ೪ ಭೇದಗಳಿರುತ್ತವೆ. ದಿನಾಲು ಎರಡು ಸಾರೆ ಇಲ್ಲವೆ ಒಮ್ಮೆ ಬರುವ ಜ್ವರ, ದಿನಾಲು ಒಮ್ಮೆಯೇ ಬರುವ ಜ್ವರ, ದಿನಬಿಟ್ಟು ದಿನ ಬರುವ ಜ್ವರ (ಅಂದರೆ ೩ನೇ ದಿವಸ ಮೂರರ ಚಳಿ ಬರುವ ಜ್ವರ), ನಡುವೆ ೨ ದಿನ ಬಿಟ್ಟು ಬರುವ(೪ರ ಚಳಿಜ್ವರ)ಜ್ವರ. ಈ ನಾಲ್ಕರ ಸ್ಥಾನಗಳೂ ಬೇರೆ ಬೇರೆ ಯಾಗಿರಬೇಕು. ೧ ಆಮಾಶಯ, ೨ ಹೃದಯ, ೩ ಕಂಠ, ೪ ತಲೆ ಎಂದು ಆ ಸ್ಥಾನಗಳನ್ನು ಕಲ್ಪಿಸಬಹುದು. ದೋಷಗಳು ಕೋಪಗೊಳ್ಳುವ ಕಾಲವು ವಾಗ್ಭಟನ ವಾಕ್ಯದಂತೆ ಹಗಲು ೧ ಸಾರೆ, ರಾತ್ರಿ ೧ ಸಾರೆ ಎಂದು ೨ ಸಾರೆ ಇರುವದರಿಂದ ಆಮಾಶಯದಲ್ಲಿ ದೋಷವಿರುವವರೆಗೆ ದಿನಾಲು ೨ ಸಾರೆ ಜ್ವರ ಬರುತ್ತವೆ. ದೋಷವು ಹೃದಯದಲ್ಲಿದ್ದು, ಅದು ಆಮಾಶಯಕ್ಕೆ ಬಂದು ತಲುಪಲಿಕ್ಕೆ ಒಂದು ದಿನದ ಅವಕಾಶ ಬೇಕಾಗುವದೆಂದು ಕಲ್ಪಿಸಿದರೆ ಹೃದಯ ದೊಳಗಿನ ದೋಷಗಳಿಂದ ಬರುವ ಜ್ವರವು ೨ನೇ ದಿವಸ ಬರುತ್ತವೆ. ಕಂಠ ದೊಳಗಿನ ದೋಷವು ಆಮಾಶಯಕ್ಕೆ ಬರಲಿಕ್ಕೆ ೨ ದಿವಸ ಬೇಕಾಗುವವು. ಅಂದರೆ ಕಂಠದಲ್ಲಿ ದೋಷವಿದ್ದ ರೋಗಿಗೆ ಮೂರರ ಚಳಿಜ್ವರ ಬರುತ್ತವೆ. ತಲೆಯೊಳ ಗಿನ ದೋಷವು ಆಮಾಶಯಕ್ಕೆ ಇಳಿಯುವದಕ್ಕೆ ಮೂರು ದಿವಸ ಬೇಕಾಗುವವು; ಆದುದರಿಂದ ತಲೆಯೊಳಗೆ ದೋಷವಿದ್ದ ರೋಗಿಗೆ ನಾಲ್ಕರ ಚಳಿಜ್ವರಗಳು ಬರು ತ್ತಿರುತ್ತವೆ ಯಾವ ದಿವಸ ಜ್ವರ ಬರುತ್ತವೆಯೋ ಆ ದಿನವನ್ನು ಮೊದಲನೇ ದೆಂದು ಎಣಿಸಿದರೆ ಮೇಲಿನ ವಿವರಣವೆಲ್ಲವೂ ಮನಗಂಡು ಬರುತ್ತದೆ.

ದಿನಾಲು ಬರುವ ಜ್ವರಕ್ಕೆ ಉಪಾಯಗಳು:—

೧ ಕಹಿಪಡುವಲು, ತ್ರಿಫಳ, ಬೇವಿನ ಎಲೆ, ದೀಪದ್ರಾಕ್ಷಿ, ಕಕ್ಕೀಕಾಯಿ ತಿಳಲು ಮತ್ತು ಅಡಸಾಲ ಇವುಗಳ ಕಷಾಯದಲ್ಲಿ ಜೇನತುಪ್ಪ ಕಲ್ಲುಸಕ್ಕರಿಗ ಳನ್ನು ಹಾಕಿ ಕೊಟ್ಟರೆ ದಿನಾಲು ಬರುವ ಜ್ವರ ನಿಲ್ಲುತ್ತವೆ.

೨ ಲಗ್ನವಾಗದ ಹುಡಿಗಿಯು ನೂತ ನೂಲಿನಿಂದ ಉತ್ತರಾಣಿಯ ಬೇರಿಗೆ ಕಟ್ಟಿ ಅದನ್ನು ಚಂಡಿಕೆಗೆ ಇಲ್ಲವೆ ಹೇಲಿಗೆ ಕಟ್ಟಬೇಕು. ಇದರಿಂದಲೂ ಪ್ರತಿ ದಿನ ಬರುವ ಜ್ವರಗಳು ನಿಲ್ಲುತ್ತವೆ.

೩ ಗೂಗಿಯ ಬಲಭಾಗದ ರೆಕ್ಕೆಯನ್ನು ಬಿಳೇ ನೂಲಿನಿಂದ ರೋಗಿಯ ಎಡಗಿವಿಗೆ ಕಟ್ಟಿದರೆ ದಿನಾಲು ಬರುವ ಜ್ವರಗಳು ನಿಲ್ಲುತ್ತವೆ.

೪ ಗೋರಖ ಕಾಕಡೆ, ಗಾಯದ ತೊಪ್ಪಲು, ಕಲ್ಲುಕಡಲೆ, ಹಕ್ಕರಿಕೆ, ಭಂಗಿ ಇವುಗಳಲ್ಲಿ ಯಾವುದೊಂದರ ಬೇರನ್ನು ಕೊರಳಲ್ಲಿ ಕಟ್ಟಿದರೆ ದಿನಾಲು ಬರುವ ಜ್ವರ ನಿಲ್ಲುತ್ತವೆ.

೫ ದ್ರಾಕ್ಷಿ, ಕಹಿಪಡುವಲು, ಬೇವು, ಜೇಕಿನಗಡ್ಡೆ, ಕೋಡುಮುರುಕನ ಬೀಜ, ತ್ರಿಫಳ ಇವುಗಳ ಕಷಾಯವು ದಿನಾಲು ಬರುವಜ್ವರಕ್ಕೆ ಕಟ್ಟಿನ ಉಪಾಯವಾಗಿವೆ.

೬ ಶಿರಿಲೋಲದ ಗಿಡ, ಬ್ರಹ್ಮದಂಡಿ ಇವುಗಳ ರಸವನ್ನು ಮೂಗಿನಲ್ಲಿ ಹಿಂಡಿದರೆ ದಿನಾಲು ಬರುವ ಜ್ವರ ನಿಲ್ಲುತ್ತವೆ.

೭ ಅವರೇಕಾಳಷ್ಟು ನವಸಾಗರದ ಪುಡಿ ತಕ್ಕೊಂಡು ಸಕ್ಕರೆಯೊಡನೆ ದಿನಕ್ಕೆರಡುಸಾರೆಯಂತೆ ೩ ದಿನ ಕೊಡಬೇಕು. ಖಂಡಿತವಾಗಿ ಈ ಜ್ವರ ನಿಲ್ಲುತ್ತವೆ.

೮ ಕಟುಕರೋಣಿ, ಬಾಳದಬೇರು, ಹಪೀಜ, ದೀಪದ್ರಾಕ್ಷಿ ಇವುಗಳ ಕಷಾಯದಿಂದ ಸರತಿಯಿಂದ ಬರುವ ಜ್ವರಗಳ ನಿವಾರಣವಾಗುತ್ತವೆ.

೯ ಮ.ದ್ಗಿಣಿಕೆಯಲೆಯ ರಸವನ್ನು ಶಕ್ತಿಮಾನಕ್ಕನುಸರಿಸಿ ಒಂದೂಕಾಲು ತೊಲೆಯ ವರೆಗೆ ಮೊಸರಿನೊಳಗೆ ಕೊಟ್ಟರೆ ದಿನಾಲು ಬರುವ ಜ್ವರ ನಿಲ್ಲುತ್ತವೆ.

೧೦ ಗಂಡೆಕ್ಕಿಯ ೫ ಹೂವುಗಳನ್ನು ಬೆಲ್ಲದೊಡನೆ ಅರೆದು ಕೊಟ್ಟರೆ, ಈ ಜ್ವರ ನಿಲ್ಲುತ್ತವೆ.

## (೫) ಎರಡು ದಿನಗಳಿಗೊಮ್ಮೆ ಬರುವ ಜ್ವರ.

ಲಕ್ಷಣ:—ಈ ಜ್ವರಗಳ ವೇಗವು ಟೊಂಕದೊಳಗಿಂದಲೂ, ಬೆನ್ನಹುರಿಯಿಂದಲೂ ಪ್ರಾರಂಭವಾಗುತ್ತದೆ. ಉಳಿದ ಲಕ್ಷಣಗಳೆಲ್ಲ ದಿನಾಲು ಬರುವ ಜ್ವರದಂತೆಯೇ ಇರುತ್ತವೆ.

### ಉಪಾಯಗಳು

೧ ಜಾಡಿನಬಲೆಯ ನೂಲಿನ ಬತ್ತೀಮಾಡಿ ಎಳ್ಳೆಣ್ಣೆಯಲ್ಲಿ ತೊಯ್ಸಿ ದೀಪ ಹಚ್ಚಿ ಅದರ ಕಾಡಿಗೆ ಹಿಡಿದು ಅದೆರ ಅಂಜನವನ್ನು ರೋಗಿಗೆ ಹಚ್ಚಿದರೆ ಈ ಜ್ವರ ನಿಲ್ಲುತ್ತವೆ.

೨ ಶುದ್ಧ ಇಂಗಳೀಕ ಮತ್ತು ನೇಪಾಳದ ಬೇರು ಇವುಗಳ ೧ ಗುಂಜಿತೂಕ ಚೂರ್ಣವನ್ನು ವಿಳ್ಯೇದೆಲೆಯಲ್ಲಿ ಇಲ್ಲವೆ ಜೇನತುಪ್ಪದಲ್ಲಿ ಕೊಟ್ಟರೆ ದಿನಾಲು ಬರುವ ಜ್ವರ, ಎರಡು ದಿನಕ್ಕೊಮ್ಮೆ, ಮೂರು ದಿನಕ್ಕೊಮ್ಮೆ, ನಾಲ್ಕು ದಿನಕ್ಕೊಮ್ಮೆ ಬರುವ ಚಳಿಜ್ವರಗಳ ನಾಶವಾಗುತ್ತದೆ.

೩ ಲೆಕ್ಕಿ ಹಾಗು ಗಾಯದ ಬೇರುಗಳು ರವಿವಾರ ಬೆಳಿಗ್ಗೆ ಶುಚಿರ್ಭೂತವಾಗಿ ತಂದು ನಡಕ್ಕೆ ಕಟ್ಟಿದರೆ ಈ ಜ್ವರ ನಿಲ್ಲುತ್ತವೆ. ಬಿಳೇಕಣಗಲ ಅಥವಾ ಗಂಡೆಕ್ಕಿಯ ಬೇರನ್ನು ಕಟ್ಟಿದರೂ ನಿಲ್ಲುತ್ತವೆ.

೪ ಅಡಸಾಲ, ಕಹಿಪಡುವಲು, ತ್ರಿಫಳ, ದ್ರಾಕ್ಷಿ, ಬೇವು, ಕಕ್ಕೇಕಾಯಿ

ತಿಳಲು ಇವುಗಳ ಕಷಾಯದಲ್ಲಿ ಜೇನತುಪ್ಪ ಮತ್ತು ಸಕ್ಕರಿ ಹಾಕಿ ಕೊಡುವದರಿಂದ ಎರಡು ದಿನಕ್ಕೊಮ್ಮೆ ಬರುವ ಜ್ವರಗಳ ನಿವಾರಣವಾಗುತ್ತದೆ.

೫ ಲಿಂಬೀಹೋಳುಗಳನ್ನು ನೀರಲ್ಲಿ ಹಾಕಿ ಕಷಾಯ ಮಾಡಿ, ೩ ಇಲ್ಲವೆ ೭ ದಿನ ಕೊಟ್ಟರೆ ಉತ್ತಮ ಗುಣ ಬರುತ್ತದೆ.

೬ ಎಲ್ಲ ಸರತಿಯ ಚಳಿಜ್ವರಗಳಲ್ಲಿಯೂ ವಾಂತಿಯ ಔಷಧಕೊಟ್ಟು ಕಾರಿಸಬೇಕು. ಇದರಿಂದ ಹಿತವಾಗುತ್ತದೆ.

೭ ಬಿಲಪತ್ರಿ ಬೇರಿನ ಮೇಲಿನ ತೊಗಟಿಯ ಕಷಾಯದಲ್ಲಿ ಜೇನುತುಪ್ಪ ಹಾಕಿ ಕೊಟ್ಟರೆ ಚೆನ್ನಾಗಿ ಗುಣಕಂಡು ಬರುತ್ತದೆ.

---

## (೬) ಮೂರರ ಚಳಿಜ್ವರ.

ಲಕ್ಷಣ:—ಇದರಲ್ಲಿ ಮೂರು ಪ್ರಭೇದಗಳುಂಟು. ಕಫ, ಪಿತ್ತಾತ್ಮಕ ಮೂರರ ಚಳಿಜ್ವರಗಳಿದ್ದರೆ ಅವು ನಡ ಹಾಗು ಬೆನ್ನಿನ ಎಲವುಗಳಲ್ಲಿ ಹುಟ್ಟಿ ಬಳಿಕ ಶರೀರವನ್ನೆಲ್ಲ ವ್ಯಾಪಿಸುತ್ತವೆ. ವಾತ-ಕಫಾತ್ಮಕವಾಗಿದ್ದರೆ ಬರೇ ಬೆನ್ನಿನಲ್ಲಿಯೇ ಹುಟ್ಟುತ್ತದೆ. ವಾತ-ಪಿತ್ತಜನ್ಯವಾಗಿದ್ದರೆ ತಲೆಯೊಳಗಿಂದ ಉತ್ಪನ್ನವಾಗುತ್ತವೆ.

### ಉಪಾಯಗಳು.

೧ ಅಮೃತಬಳ್ಳಿ, ಜೇಕಿನಗಡ್ಡೆ, ಚಂದನ, ಬಾಳದಬೇರು, ಹವೀಜ, ಶುಂಠಿ ಇವುಗಳ ಕಷಾಯದಲ್ಲಿ ಜೇನತುಪ್ಪ ಸಕ್ಕರಿ ಹಾಕಿ ಕೊಡಬೇಕು. ಇದು ಅತ್ಯುತ್ತಮ ಔಷಧವಾಗಿದೆ.

೨ ರಕ್ತಚಂದನ, ಹವೀಜ, ಶುಂಠಿ, ಬಾಳದಬೇರು, ಹಿಪ್ಪಲಿ, ಜೇಕಿನಗಡ್ಡೆ ಇವುಗಳ ಕಷಾಯದಲ್ಲಿ ಜೇನತುಪ್ಪ ಕಲ್ಲುಸಕ್ಕರಿ ಹಾಕಿಕೊಟ್ಟರೆ ಮೂರರ ಚಳಿಜ್ವರ ನಿಲ್ಲುತ್ತವೆ.

೩ ರವಿವಾರ ದಿವಸ ಉತ್ತರಾಣೀ ಬೇರುತಂದು ಕೆಂಪು ನೂಲಿನಿಂದ ಟೊಂಕಕ್ಕೆ ಕಟ್ಟಬೇಕು. ಮೂರರ ಚಳಿಜ್ವರ ನಿಲ್ಲುತ್ತವೆ; ಆದರೆ ಈ ಉಪಾಯವನ್ನು ಬಸರು ಹೆಂಗಸರಿಗೆ ಮಾಡಕೂಡದು.

೪ ಚಳಿ ಬರುವದಕ್ಕಿಂತ ಮೊದಲು ೩ರಿಂದ ೬ ಗುಂಜಿಯ ವರೆಗೆ ಶಕ್ತಿಮಾನದಂತೆ ಪಟಕದ ಅರಳಿನ ಪುಡಿಯನ್ನು ನಾಲ್ಕುಪಟ್ಟು ಸಕ್ಕರಿಯೊಡನೆ ಕೊಡಬೇಕು. ಮೇಲೆ ನೀರು ಕುಡಿಯ.ಬಾರದು. ಬಹಳ ನೀರಡಿಕೆಯಾದರೆ ಹಾಲು ಕುಡಿಯತಕ್ಕದ್ದು. ಇದರಿಂದ ಪ್ರತಿಯೊಂದು ಪ್ರಕಾರದ ಚಳಿಜ್ವರಗಳೂ ಖಾತ್ರಿ ಪೂರ್ವಕ ನಿಲ್ಲುತ್ತವೆ. ಕೆಲಕೆಲವು ರೋಗಿಗಳಿಗಂತೂ ಈ ಔಷಧವನ್ನು

ಒಂದೇ ಸಾರೆ ಕೊಟ್ಟರೂ ಗುಣ ಬರುತ್ತದೆ. ಈ ಜ್ವರಕ್ಕೆ ಇದು ಎಲ್ಲಕ್ಕೂ ಹಗುರಾದ ಉಪಾಯವಾಗಿರುತ್ತದೆ.

೫ ಪಾರಿವಾಳದ ಮಲವನ್ನು ಒಂದು ಮಾಸಿಯಷ್ಟು ವೀಳ್ಯದೆಲೆಯೊಡನೆ ಕೊಡಬೇಕು.

೬ ಬೇವಿನ ೨॥ ಎಲೆ ಹಾಗು ೬ ಮಾಸಿ ಬೆಲ್ಲ ಇವೆರಡೂ ಕುಟ್ಟಿ ಗುಳಿಗೆ ಮಾಡಿ ಕೊಡಬೇಕು. ಇಲ್ಲವೆ ಅಷ್ಟೇ ಎಲೆಗಳ ಅಷ್ಟಮಾಂಶ ಕಷಾಯ ಮಾಡಿ ಅದರಲ್ಲಿ ಬೆಲ್ಲ ಹಾಕಿಕೊಟ್ಟರೆ ಮೂರರ ಚಳಿಜ್ವರ ಮತ್ತು ನಾರಹುಣ್ಣು ಇವುಗಳ ನಾಶವಾಗುತ್ತದೆ.

೭ ಕಟುಕರೋಣಿಯ ಚೂರ್ಣಕ್ಕೆ ಎಕ್ಕೀಹಾಲಿನ ಭಾವನೆ ಕೊಟ್ಟು ಅವರೇಕಾಳಷ್ಟು ಗುಳಿಗೆ ಮಾಡಿ, ಜ್ವರ ಬರುವ ಮುಂಚೆ ೧ ತಾಸು ೧ ಗುಳಿಗೆಯನ್ನು ವೀಳ್ಯದೆಲೆಯೊಡನೆ ಕೊಡಬೇಕು.

---

## (೭) ನಾಲ್ಕರ(ನಾಲ್ಕುದಿನಕ್ಕೊಮ್ಮೆ ಬರುವ)ಚಳಿಜ್ವರಗಳು.

ಲಕ್ಷಣ:—ಕಫಜನ್ಯ ಚಾತುರ್ಥಿಕ ಜ್ವರವಿದ್ದರೆ ಕಾಲೊಳಗಿನ ಮೊನಗಂಡದೊಳಗೆ ಹುಟ್ಟಿ ಮೈತುಂಬ ವ್ಯಾಪಿಸುತ್ತವೆ. ವಾತಜನ್ಯವಾಗಿದ್ದರೆ ತಲೆಯಲ್ಲಿ ಹುಟ್ಟಿ ಶರೀರವನ್ನು ವ್ಯಾಪಿಸುತ್ತವೆ. ಈ ಜ್ವರದ ಮಧ್ಯಾವಸ್ಥೆಯಲ್ಲಿ ದಾಹವುಂಟಾಗುತ್ತದೆ. ಜ್ವರ ಬರುವ ಮೊದಲು ಅಥವಾ ಜ್ವರ ನಿಲ್ಲುವ ಕಾಲಕ್ಕೆ ದಾಹವುಂಟಾಗುವದಿಲ್ಲ. ಮೂರರ ಹಾಗು ನಾಲ್ಕರ ಚಳಿಜ್ವರಗಳು ರೋಗಿಗಳ ಚಿಂತನ ಇಲ್ಲವೆ ಅಂಜಿಕೆಯಿಂದ ಬರುತ್ತವೆ ಆದುದರಿಂದ ಜ್ವರಬರುವ ಕಾಲಕ್ಕೆ ರೋಗಿಯ ಮನಸ್ಸಿಗೆ ಆನಂದ, ಭಯ ಇಲ್ಲವೆ ದುಃಖವುಂಟಾಗುವ ಯಾವುದೊಂದು ಉಪಾಯ ಮಾಡಿ, ಜ್ವರದ ಅಂಜಿಕೆಯ ಆ ಕಾಲವನ್ನು ತಪ್ಪಿಸಬೇಕು. ಚಳಿಜ್ವರದ ಸರತಿಯ ದಿವಸ ವಾಂತಿ ಮಾಡಿಸುವದು ವಿಹಿತವಾಗಿರುತ್ತದೆ

ಉಪಾಯಗಳು.:—

೧ ಅಳಲೇಕಾಯಿ, ನೆಲಗುಳ್ಳದೇರು, ಬಾಳದಬೇರು, ಗುಳ್ಕದಬೇರು, ಹಿರೇಮದ್ದಿನ ಬೇರು, ಇಪ್ಪೀ ಹೂವು, ಜೇಕಿನಗಡ್ಡೆ, ಶುಂಠಿ, ಅಡಸಾಲ, ಅಮೃತಬಳ್ಳಿ, ಕಲ್ಲುಸಬ್ಬಸಿಗಿ ಇವುಗಳ ಕಷಾಯವು ಆರಿದ ಒಳಿಕ ಅದರಲ್ಲಿ ಜೇನತುಪ್ಪ ಮತ್ತು ಹಿಪ್ಪಲಿ ಚೂರ್ಣಗಳನ್ನು ಹಾಕಿ ಕೊಡಬೇಕು. ದಿವಸ ೭ ಇಲ್ಲವೆ ೧೪. ಇವುಗಳಿಂದ ದಾಹ, ಬೆವರು, ನೀರಡಿಕೆ, ಜಂತು, ರಕ್ತಪಿತ್ತ, ಶೀತ, ಶ್ವಾಸ, ಭ್ರಾಂತಿ, ಶೂಲಿ, ಹಗಲು ಬರುವ ಜ್ವರ, ನಾಲ್ಕರ ಚಳಿಜ್ವರ, ಇವೆಲ್ಲ ಹೋಗುತ್ತವೆ.

೨ ಜೇಕಿನಗಡ್ಡೆ, ಅಗಳಶುಂಠಿ, ನೆಲ್ಲೀಚಟ್ಟು ಇವುಗಳ ಕಾಢೆ ಇಲ್ಲವೆ ತ್ರಿಫಳ ಗಳ ಚೂರ್ಣ ಹಾಲಿನಲ್ಲಿ ಕುಡಿದರೆ ನಾಲ್ಕರ ಚಳಿಜ್ವರಗಳು ನಾಶಹೊಂದುತ್ತವೆ.

೩ ಬಿಳೇಗಣಜಲಿಬೇರಿನ ಪುಡಿ ಮಾಡಿ ಇಲ್ಲವೆ ಹಾಲಲ್ಲಿ ತೆಯ್ದು ಕೊಡ ಬೇಕು; ಅಥವಾ ತಾಂಬೂಲದೊಡನೆ ತಿನ್ನಬೇಕು. ಅಂದರೆ ಇದರಿಂದ ಬಹು ದಿನಗಳ ನಾಲ್ಕರ ಚಳಿಜ್ವರ ಸಹ ನಿಲ್ಲುತ್ತವೆ.

೪ ಚಳಿಜ್ವರ ಬರುವ ಮೊದಲು ಹಳೇ ತುಪ್ಪದಲ್ಲಿ ಇಂಗು ತೆಯ್ದು ಮೂಗಿನಲ್ಲಿ ಹಾಕಬೇಕು; ಇಲ್ಲವೆ ಜೊಗಚೆಯ ಸೊಪ್ಪಿನ ರಸವನ್ನು ಮೂಗಿ ನಲ್ಲಿ ಹಿಂಡಬೇಕು.

೫ ಪುಷ್ಯನಕ್ಷತ್ರದ ದಿವಸ ಸಣ್ಣ ಕಾಕಿ, ಕಲ್ಲಕಡಲೆ, ಹಿಪ್ಪಲಿ, ಕಾಡಿಗ್ಗ ರಗು ಇಲ್ಲವೆ ಉತ್ರಾಣಿ ಇವುಗಳಲ್ಲಿ ಯಾವುದೊಂದರ ಬೇರನ್ನು ಕೈಗೆ ಕಟ್ಟಿದರೆ ಚಾತುರ್ಥಿಕ ಜ್ವರದ ನಾಶವಾಗುತ್ತದೆ.

೬ ನೀರಗೊಳಗೊಳಕೆಯ ಸೊಪ್ಪು ೧ ತೊಲಿ, ಶುಂಠಿ ೧ ಮಾಸಿ, ಮೆಣಸಿನ ಕಾಳು ೩ ಇವುಗಳನ್ನರೆದು ಗುಳಿಗೆ ಮಾಡಿ ಅದನ್ನು ಜ್ವರ ಬರುವ ಮುಂಚೆ ೧ ತಾಸು ಕೊಡಬೇಕು. ಇದರಿಂದ ನಾಲ್ಕರ ಚಳಿಜ್ವರ, ಮಧುರಾಜ್ವರ, ಚಳಿ ಜ್ವರ ಮತ್ತು ವಿಷಮಜ್ವರಗಳ ನಾಶವಾಗುತ್ತದೆ.

೭ ಇಂಗು ಮತ್ತು ಉಪ್ಪು, ೧-೧ಮಾಸಿ ತಕ್ಕೊಂಡು ಪುಡಿಮಾಡಿ ಅದನ್ನು ೨೦ ತೊಲಿ ನೀರಲ್ಲಿ ಹಾಕಿ ಕುದಿಸಿ ೫ ತೊಲಿ ಉಳಿಸಿ ಕೊಡತಕ್ಕದ್ದು. ದಿವಸ ೭.

೮ ೩ ಗುಂಜಿ ನವಸಾಗರ ಮತ್ತು ೨ ಕರೇ ಮೆಣಸು ಇವನ್ನು ಸಣ್ಣಾಗಿ ಅರೆದು ಜ್ವರದ ಸರತಿಯಿದ್ದ ದಿವಸ ಜ್ವರ ಬರುವ ಮುಂಚೆ ೧ ತಾಸು ೧ ವೀಳ್ಯೆ ದೆಲೆಯಲ್ಲಿ ಕೊಡುವದು. ಇದನ್ನು ೩ ಸಾರೆ ಕೊಡುವಷ್ಟರಲ್ಲಿ ಚಾತುರ್ಥಿಕ ಜ್ವರ ನಿಲ್ಲುವದು.

೯ ಕರೇಮದ್ದುಗುಣಿಕೆಯ ಎಲೆ, ವೀಳ್ಯೆದೆಲೆ, ಮೆಣಸು ಇವನ್ನು ಸಮಭಾಗ ತಕ್ಕೊಂಡು ಅರೆದು ೨ ಗುಂಜಿಯಷ್ಟು ಗುಳಿಗೆ ಮಾಡಬೇಕು. ಆ ಗುಳಿಗೆಗಳನ್ನು ಮುಂಜಾನೆ ಸಂಜೆಗೆ ಬಿಸಿನೀರಲ್ಲಿ ೧-೧ರಂತೆ ತಕ್ಕೊಂಡರೆ ೪-೫ ಸರತಿಗಳಲ್ಲಿ ನಾಲ್ಕರ ಚಳಿಜ್ವರ ನಿಲ್ಲುತ್ತವೆ.

೧೦ ೩-೪ ಮಾಸಿ ಸುಣ್ಣವನ್ನು ನೀರಲ್ಲಿ ಕದಡಿ, ಅದರಲ್ಲಿ ಲಿಂಬೀಹುಳಿ ಹಿಂಡಿದರೆ ಅದು ಗಟ್ಟಿಯಾಗುತ್ತದೆ. ಜ್ವರ ಬರುವ ಮೊದಲು ಅದರಲ್ಲಿ ಮತ್ತೆ ತುಸ ನೀರು ಹಾಕಿ ಅದನ್ನು ಕುಡಿಯಬೇಕು. ಇದರಿಂದ ಅಂದೇ ಜ್ವರ ಬರ ಲಿಕ್ಕಿಲ್ಲ. ಒಂದು ವೇಳೆ ಅಂದು ಬಂದರೆ ಮತ್ತೆ ಬರುವ ದಿವಸ ಮೇಲಿನಂತೆ ತಕ್ಕೊಂಡರೆ ಚಳಿಜ್ವರ ಬರಲಿಕ್ಕಿಲ್ಲವೆಂಬದು ಖಂಡಿತವು.

೧೧ ಲವೃಳಸರದ ರಸದಲ್ಲಿ || ಗುಂಜಿ ಅಘು ಮತ್ತು ಅರಿಷಿಣ ಹಾಕಿ ಕುಟ್ಟಿ ಜಳಜಳವಾದ ಅರಿವೆಯಲ್ಲಿ ಸೋಸಿ ಜ್ವರ ಬರುವ ಮೊದಲು ಕುಡಿಯಬೇಕು. ಇದರಂತೆ ೨-೩ ಸಾರೆ ತಕ್ಕೊಳ್ಳಬೇಕು. ಇದರಿಂದ ಹಳೇ ಹಾಗು ಬಹಳ ದಿವಸ ಶರೀರದಲ್ಲಿ ಮನೆಮಾಡಿದ್ದ ನಾಲ್ಕರ ಛಳಿಜ್ವರಗಳು ನಾಶಹೊಂದುತ್ತವೆಂಬದಕ್ಕೆ ಸಂಶಯುವಿಲ್ಲ. ಮೇಲಿನ ಔಷಧದಲ್ಲಿ ತುಸ ಸಕ್ಕರೆ ಹಾಕಿಕೊಂಡರೆ ಕುಡಿಯುಲಿಕ್ಕೆ ಬೇಸರ ಬರಲಿಕ್ಕಿಲ್ಲ.

೧೨ ಬೇವಿನ ಮರದ ಒಳದೊಗಟೆ ೫ ತೊಲಿ ತಕ್ಕೊಂಡು ಜಜ್ಜಿ, ೨೦ ತೊಲಿ ನೀರಲ್ಲಿ ಹಾಕಿ ಕುದಿಸಿ ೫ ತೊಲಿಯುಳಿಸಿ ಸೋಸಿ ಕುಡಿಸಬೇಕು. ದಿವಸ ೩ ಇಲ್ಲವೆ ೭. ಇದರಿಂದ ನಾಲ್ಕರ ಛಳಿಜ್ವರಗಳು ಖಂಡಿತವಾಗಿ ನಿಲ್ಲುತ್ತವೆ.

೧೩ ಬೇವಿನಎಲೆ ೨೧, ಮೆಣಸು ೨೧ ಇವುಗಳನ್ನು ಕುಟ್ಟಿ ಜಳಜಳವಾದ ಅರಿವೆಯಲ್ಲಿ ಕಟ್ಟಿ ಆ ಗಂಟನ್ನು ೪೦ ತೊಲಿ ನೀರಲ್ಲಿ ಹಾಕಿ ಕುದಿಸಿ ೫ ತೊಲಿ ಉಳಿಯುತ್ತಲೆ ಇಳಿಸಿ ಕುಡಿಯುತಕ್ಕದ್ದು. ದಿವಸ ೩ ಇಲ್ಲವೆ ೭. ದಿನಕ್ಕೆರಡು ಸಾರೆ ಕೊಡುವದು. ಇದರಿಂದ ಎಲ್ಲ ಬಗೆಯ ಜ್ವರಗಳ ನಾಶವಾಗುತ್ತದೆ. ಇದೊಳ್ಳೇ ಯೋಗವಿರುವದರಿಂದ ಅವಶ್ಯವಾಗಿ ಅನುಭವಪಡೆಯತಕ್ಕದ್ದಾಗಿದೆ.

---

## (೮) ಐದು ದಿನಗಳ ಜ್ವರ.

ಲಕ್ಷಣ:—ಮದ್ರಾಸ ಪಟ್ಟಣದಲ್ಲಿ ಇತ್ತೀಚೆಗೆ ಈ ಜ್ವರಗಳು ಬರಹತ್ತಿವೆ. ಈ ಜ್ವರಗಳು ಐದು ದಿವಸಗಳ ವರೆಗೆ ಬರುತ್ತವೆ. ೫ನೇದಿವಸ ಕಾಲಮೇಲೆ ಬಕ್ಕೆಗಳೇಳುತ್ತವೆ. ಬಳಿಕ ಜ್ವರ ಆರುತ್ತವೆ ೧ನೇ ೨ನೇ ದಿವಸ ೧೦೪ ಡಿಗ್ರಿಯ ವರೆಗೆ ಜ್ವರವಿರುತ್ತವೆ; ಆದರೆ ೪ನೇ ೫ನೇ ದಿವಸ ಕಾಲಮೇಲೆ ಬಕ್ಕೆಗಳೇಳುತ್ತಲೆ ಆ ಜ್ವರಗಳು ಹೆಚ್ಚುತ್ತವೆ. ಹಾಗು ಒಮ್ಮೆಲೆ ಕಡಿಮೆಯಾಗುತ್ತವೆ. ಇವಾದರೂ ವಿಷಮಜ್ವರಗಳ ಒಂದು ಪ್ರಕಾರವಾಗಿರುತ್ತವೆ. ಈ ಜ್ವರದಿಂದ ಒಹುಶಃ ಮನುಷ್ಯನು ಸಾಯುವದಿಲ್ಲ. ಇವು ಸೌಮ್ಯಜ್ವರಗಳು.

ಉಪಾಯಗಳು:—

೧ ಬೇವಿನ ತೊಗಟೆ ೧ ತೊಲಿ, ಶುಂಠಿ ಕಾಲು ತೊಲಿ, ಮೆಣಸು ಚವಲಿ ತೂಕ ತಕ್ಕೊಂಡು ಜಜ್ಜಿ ಅವುಗಳ ಕಷಾಯ ಮಾಡಿ ಬೆಲ್ಲ ಹಾಕಿ ಕೊಡಬೇಕು.

೨ ನೆಲಬೇವು, ಜೇಕಿನ ಗಡ್ಡೆ, ಶುಂಠಿ, ನೆಲಿಂಗಳ, ಕಲ್ಲುಸಬ್ಬಸಿಗಿ ಇವುಗಳ ಕಷಾಯ ಕೊಡತಕ್ಕದ್ದು.

೩ ಲಿಂಬೀಹಣ್ಣಿನ ಪಾನಕದಲ್ಲಿ ಕ್ವಿನಾಯಿನ್ ಹಾಕಿ ಕೊಡಬೇಕು.

---

## (೯) ಪಾಕ್ಷಿಕ, ಮಾಸಿಕ, ಹಾಗು ವಾರ್ಷಿಕ ವಿಷಮಜ್ವರಗಳು.

ಲಕ್ಷಣ:—ನಾಲ್ಕರ ಚಳಿಜ್ವರಗಳು ಹೇಗೆ ತಪ್ಪದೆ ನಾಲ್ಕನೇ ದಿವಸ ಬರುವವೋ, ಆದರಂತೆಯೇ ಶರೀರದಲ್ಲಿ ಮನೆ ಮಾಡಿಕೊಂಡ ಕೆಲ ಕೆಲವು ಜ್ವರ ಗಳು ೧೫ ದಿನಗಳಿಗೊಮ್ಮೆ, ತಿಂಗಳಿಗೊಮ್ಮೆ ಇಲ್ಲವೆ ವರ್ಷಕ್ಕೊಂದಾವರ್ತಿ ತಪ್ಪದೆ ಬರುತ್ತಿರುತ್ತವೆ. ಇದರ ಲಕ್ಷಣಗಳಾದರೂ ನಾಲ್ಕರ ಜ್ವರದಂತೆಯೇ. (ಹಂಸರಾಜ ನಿದಾನ ನೋಡಿರಿ.)

### ಉಪಾಯಗಳು.

೧ ನಾಲ್ಕರ ಜ್ವರದ ಉಪಾಯಗಳನ್ನು ಮಾಡತಕ್ಕದ್ದು.

೨ ಜ್ವರ ಬರುವ ಮೊದಲು ಏಳು ದಿವಸ ಸುವರ್ಣಮಾಲಿನೀವಸಂತ ಕಪಾಯ ಇಲ್ಲವೆ ಮೂರರ ಅಥವಾ ನಾಲ್ಕರ ಚಳಿಜ್ವರದ ಕಪಾಯಗಳನ್ನು ಕೊಡತಕ್ಕದ್ದು; ಇಲ್ಲವೆ ಬೇವು, ನೆಲಗುಳ್ಳಬೇರು, ಅಮೃತಬಳ್ಳಿ, ಶುಂಠಿ ಇವು ಗಳ ಕಾಢೆ-ನಿಕಾಢೆ ಕೊಡುತ್ತಿರಬೇಕು.

೩ ಭೂತ-ಭೈರವ ರಸವನ್ನು ಕೊಡಬೇಕು.

---

## (೧೦) ಏಕಾಂಗ ಜ್ವರ.

ಲಕ್ಷಣ:—ಯಾವ ಜ್ವರವು ದೇಹದ ಒಂದೇ ಮಗ್ಗಲಿಗೆ(ಎಡಕ್ಕೆ ಇಲ್ಲವೆ ಬಲಕ್ಕೆ)ಬರುವದೋ ಅದಕ್ಕೆ ಏಕಾಂಗಜ್ವರವೆನ್ನುವರು. ಯಾವ ಮಗ್ಗಲು ಜ್ವರ ಬರುವದೋ ಆ ಭಾಗದ ಹೆಸರು ಅದಕ್ಕೆ ಬರುವದು; ಅಂದರೆ ಎಡಭಾಗಕ್ಕೆ ಜ್ವರ ಬಂದರೆ ವಾಮಾಂಗಜ್ವರ, ಬಲಭಾಗಕ್ಕೆ ಬಂದರೆ ಸವ್ಯಾಂಗಜ್ವರವೆನ್ನುತ್ತಾರೆ. ಇದಾದರೂ ವಿಷಮದ ಒಂದು ಪ್ರಕಾರವು.

### ಏಕಾಂಗ ಜ್ವರಕ್ಕೆ ಉಪಾಯಗಳು.

೧ ಪ್ರಸಿದ್ಧ ವೈದ್ಯರಲ್ಲಿ ದೊರೆಯುವ ಏಕಾಂಗವೀರವೆಂಬ ಮಾತ್ರೆಯನ್ನು ಅನುಪಾನದೊಡನೆ ಕೊಡತಕ್ಕದ್ದು; ಇಲ್ಲವೆ ಹೇಮಗರ್ಭ ಮಾತ್ರೆಯಾನ್ನಾಗಲಿ ಹೇಮಗರ್ಭ ಪೋಟಳಿ ರಸವನ್ನಾಗಲಿ ಕೊಡಬೇಕು.

೨ ೧ ಮಾಸಿ ಕಸ್ತೂರಿ, ೧ ಮಾಸಿ ಅಂಬರ, ೧ ಮಾಸಿ ಬಂಗಾರದ ವರ್ಖ, ೧ ಮಾಸಿ ಬೆಳ್ಳೀ ವರ್ಖ ಇವನ್ನು ಜೇನುತುಪ್ಪದಲ್ಲಿ ತೆಯ್ದಿಟ್ಟು ಮೂರು ಮೂರು ತಾಸಿಗೊಮ್ಮೆ ಗುಂಜಿ ಗುಂಜಿಯಷ್ಟು ನೆಕ್ಕಿಸತಕ್ಕದ್ದು. (ಮೇಲಿನ ಪ್ರಮಾಣವನ್ನು ಮಾಸಿಯ ಬದಲು ಗುಂಜಿಯಂತೆ ಹಿಡಿದರೂ ಹಿಡಿಯ ಬಹುದು.)

೩ ರಾಸನೆ, ಅಮೃತಬಳ್ಳಿ, ಔಡಲಬೇರು, ದೇವದಾರು, ಬಜೆ, ಶುಂಠಿ, ನೆಲಿಂಗಳ, ಬಾಳೆಹಿರಡಾ, ಅತಿಬಜೆ, ಜೇಕಿನಗಡ್ಡೆ, ಹಲವು ಮಕ್ಕಳ ಗಿಡ, ಅಡಸಾಲ ಇವುಗಳ ಕಷಾಯವನ್ನು ಜೇನತುಪ್ಪಹಾಕಿ ಕೊಡುವದರಿಂದ ಈ ಜ್ವರ ನಿಲ್ಲುತ್ತವೆ. ದಿವಸ ೭ ಇಲ್ಲವೆ ೧೪.

೪ ರಾಸನೆ, ಗಣಜಲಿ, ಶುಂಠಿ, ಅಮೃತಬಳ್ಳಿ, ಔಡಲಬೇರು ಇವುಗಳ ಕಷಾಯದಲ್ಲಿ ಜೇನತುಪ್ಪ ಹಾಕಿ ಕೊಡುವದು.

೫ ಶುದ್ಧಪಾರಜ, ಗಂಧಕ, ನೇಪಾಳದಬೇರು ಇವನ್ನು ೧-೧ ತೊಲಿ, ಲವಂಗ ೩ ತೊಲಿ, ಜಾಪೇಕಾಯಿ ಅರ್ಧ ತೊಲಿ, ಶುದ್ಧ ಜಾಪಾಳಬೀಜ ೨ ತೊಲಿ ಇವನ್ನೆಲ್ಲ ಪುಡಿಮಾಡಿ, ಮೊದಲು ಪಾರಜ ಮತ್ತು ಗಂಧಕಗಳ ಕಾಡಿಗೆ ಮಾಡಿ ಅದರಲ್ಲಿ ಉಳಿದ ಜಿನಸುಗಳನ್ನು ಕೂಡಿಸಿ, ೩ ದಿನಗಳವರೆಗೆ ಲಿಂಬೀ ಹುಳಿಯಲ್ಲಿ ಅರೆದು, ಬಳಿಕ ಗುಲಗಂಜಿಯಷ್ಟು ಗುಳಿಗೆ ಮಾಡಬೇಕು. ಅವನ್ನು ನೆರಳೊಳಗೆ ಒಣಗಿಸತಕ್ಕದ್ದು. ಅಂಥ ೧ ಇಲ್ಲವೆ ೨ ಗುಳಿಗೆಗಳನ್ನು ಬಿಸಿನೀರಿನೊಡನೆ ಕೊಡಬೇಕು. ಇಲ್ಲವೆ ಬೆಲ್ಲದೊಡನೆ ಆ ಗುಳಿಗೆ ಕೊಟ್ಟು ಮೇಲೆ ಬಿಸಿನೀರು ಕೊಡಬೇಕು. ಇದರಿಂದ ಎಲ್ಲ ಬಗೆಯ ಶೀತಜ್ವರಗಳೂ, ವಿಷಮಜ್ವರಗಳೂ, ವಿಕಾಂಗಜ್ವರಗಳೂ ನಾಶವಾಗುತ್ತವೆ; ಮತ್ತು ಅನ್ನಾಶಯವು ಶುದ್ಧವಾಗಿ, ಚೆನ್ನಾಗಿ ಹೊಟ್ಟೆ ಹಸಿವೆಯಾಗುತ್ತದೆ. ದಿವಸ ೩ ಇಲ್ಲವೆ ೭. ಔಷಧವನ್ನು ದಿನಾಲು ಕೊಡದೆ ದಿನ ಬಿಟ್ಟು ದಿನ ಕೊಡತಕ್ಕದ್ದು.

೬ ಅರ್ಧನಾರೀ ನಟೇಶ್ವರ:—ಇದರ ವಿವರಣವನ್ನು ಸನ್ನಿಪಾತದ ಉಪಾಯುಗಳಲ್ಲಿ ೪೩ನೇ ಕಲಮಿನಲ್ಲಿ ಕೊಟ್ಟಿದೆ. ಅದನ್ನು ಮೂಗಿನಲ್ಲಿ ಹಾಕಿಸಿಕೊಂಡು ೮ ದಿನಗಳ ವರೆಗೆ ರೋಗಿಯು ಸ್ವಸ್ಥವಾಗಿ ಮಲಗಬೇಕು.

---

## ೩೨ ವಿಷಮಜ್ವರಗಳ ವಿಶೇಷ ಭೇದಗಳು.

ಶರೀರದೊಳಗೆ ಅನ್ನದ ರಸವು ದುಷ್ಟವಾದರೆ ಇಲ್ಲವೆ ಕಫ-ಪಿತ್ತಗಳು ಕೋಪಗೊಂಡರೆ ಅರ್ಧ ದೇಹವು ಕಫದಿಂದ ತಣ್ಣಗಾಗುವದು; ಮತ್ತು ಉಳಿದರ್ಧ ದೇಹವು ಪಿತ್ತದಿಂದ ಕಾಯುವದು. ಯಾವಾಗ ಪಿತ್ತವು ಅನ್ನಾಶಯದಲ್ಲಿಯೂ, ಕಫವು ಕೈ-ಕಾಲುಗಳಲ್ಲಿಯೂ ದುಷ್ಟವಾಗುವವೋ ಆಗ ಟೊಂಕದ ಮೇಲಿನ ದೇಹವು ಕಾಯುತ್ತದೆ; ಮತ್ತು ಕೈ ಕಾಲು ಮೊದಲಾದ ಅಧೋಭಾಗಗಳು ತಣ್ಣಗಾಗುತ್ತವೆ. ಯಾವಾಗ ಕೈ-ಕಾಲುಗಳಲ್ಲಿ ಪಿತ್ತವೂ, ಅನ್ನಾಶಯದಲ್ಲಿ ಕಫವೂ ದುಷ್ಟವಾಗುವವೋ ಆಗ ಟೊಂಕದ ಮೇಲಿನ ಶರೀರವು ತಣ್ಣಗಾಗಿ, ಕೈ ಕಾಲು ಮೊದಲಾದವುಗಳು ಕಾಯ್ದಿರುತ್ತವೆ. ಇದರ ವಿನಃ ವಿಷಮಜ್ವರ

ಗಳುಂಟಾಗುವದಿಲ್ಲ. ಕಫ-ಪಿತ್ತಗಳು ನಷ್ಟವಾದರೆ ಶರೀರದಲ್ಲಿ ವಾಯುವು ಹೆಚ್ಚಾಗಿ ಸಂಚರಿಸುತ್ತದೆ. ಯಾವ ಕಾಲಕ್ಕೆ ಆಮಾಶಯದಲ್ಲಿ ಇಲ್ಲವೆ ನಾಭಿಯಲ್ಲಿ ಪಿತ್ತವು ದುಷ್ಟವಾಗಿರುತ್ತದೋ ಕಫ ವಾಯುಗಳು ತ್ವಚೆಯಲ್ಲಿ ದುಷ್ಟವಾಗುವವೋ ಆ ಕಾಲಕ್ಕೆ ಅಂತರ್ದಾಹ ಹಾಗು ಬಾಹ್ಯತ್ವಚೆಯು ಶೀತವಾಗಿ ಪರಿಣಮಿಸುತ್ತವೆ. ಯಾವಾಗ ತ್ವಚೆಯಲ್ಲಿ ಕಫ-ವಾಯುಗಳಿರುವವೋ, ಆವಾಗಲೇ ಚಳಿ ಚಳಿಯೆನಿಸಿ ಜ್ವರ ಬರುತ್ತವೆ. ಬಳಿಕ ಅದರಲ್ಲಿಯೇ ಪಿತ್ತವು ಜಾಗ್ರತವಾಗಿ ಶರೀರದ ದಾಹವಾಗುತ್ತದೆ ಅದರ ಶಮನಕ್ಕಾಗಿ ಕಫ, ವಾಯುಗಳು ಜಾಗೃತಗಳಾಗಿ ಶೀತ ಉತ್ಪನ್ನವಾಗುತ್ತದೆ. ಇವೆರಡರಲ್ಲಿ ದಾಹಪೂರ್ವಕ ಜ್ವರಗಳು ದುಃಖದಾಯಕವೂ,ಕಷ್ಟಸಾಧ್ಯವೂ ಆಗಿವೆ; ಮತ್ತು ಶೀತಪೂರ್ವಕ ಜ್ವರಗಳು ಅಲ್ಪ ಕಷ್ಟಸಾಧ್ಯವಾಗಿರುತ್ತವೆ.

### ವಿಷಮಜ್ವರದ ಅಸಾಧ್ಯ ಲಕ್ಷಣಗಳು.

ಯಾವ ಜ್ವರಗಳು ಅನೇಕ ಕಾರಣಗಳಿಂದ ಉತ್ಪನ್ನವಾಗುವವೋ ಮತ್ತು ಅದರಲ್ಲಿ ತ್ರಿದೋಷಗಳ ಸಂಪೂರ್ಣ ಲಕ್ಷಣಗಳಿರುವವೋ ಹಾಗು ಯಾವ ರೋಗದಿಂದ ರಸಾದಿ ಸಪ್ತಧಾತು ಮತ್ತು ಇಂದ್ರಿಯಗಳು ಕ್ಷೀಣವಾಗುತ್ತವೋ, ಬೆವರು ಬರುತ್ತಿದ್ದರೂ ಒಳಗೆ ದಾಹ, ಹೊರಗೆ ಶೀತ ಈ ಲಕ್ಷಣಗಳು ಯಾವ ಜ್ವರದಲ್ಲಿ ಆಗುವವೋ ಆ ವಿಷಮಜ್ವರಗಳು ಅಸಾಧ್ಯ ಇಲ್ಲವೆ ಘಾತುಕಗಳೆಂದೇ ಹೇಳಬೇಕು.

## (೧) ವಾತಬಲಾಸಕ ಜ್ವರ.

ಲಕ್ಷಣ:—ರೋಗಿಯು ಜ್ವರದಿಂದ ಶೋಷಯುಕ್ತನಾಗಿ ಗ್ಲಾನಿ ಹೊಂದುತ್ತಾನೆ ಮೈ ನೆಟೆಯುತ್ತದೆ. ದೇಹಕ್ಕೆ ರುಕ್ಷತೆ, ಬಾವು, ಬಿಂದು, ಯಾವಾಗಲೂ ಅಲ್ಪ ಜ್ವರ, ಸ್ತಬ್ಧತೆ, ಅತಿಶಯ ಕಫ ಇದ್ದರೆ ಆ ಜ್ವರಕ್ಕೆ ವಾತ ಕಫಾತ್ಮಕ ಜ್ವರವೆನ್ನಬೇಕು. ಇದರಲ್ಲಿ ಕಫದ ಹೆಚ್ಚಳದ ಮೂಲಕ ಬಹು ಸಾಯಾಸದಿಂದ ಇದು ಸಾಧ್ಯವಾಗುತ್ತದೆ.

ಉಪಾಯ:—ಇದಕ್ಕೆ ವಿಶೇಷವಾಗಿ ವಾತ ಕಫ ಜ್ವರದ ಉಪಾಯಗಳನ್ನೇ ಮಾಡತಕ್ಕದ್ದು.

## (೨) ಪ್ರಲೇಪಕಜ್ವರ

ಲಕ್ಷಣ:—ಅವಯವಗಳು ಯಾವಾಗಲೂ ಬೆವರಿನಿಂದ ಜಿಗುಟಾಗಿರುತ್ತವೆ. ಸಾಧಾರಣ ಜ್ವರವಿರುತ್ತವೆ. ಚಳಿಚಳಿಯಾಗುತ್ತದೆ. ಈ ಜ್ವರವು ಕಫಪಿತ್ತಜನ್ಯವಾಗಿರುವದು. ಈ ಜ್ವರಗಳು ಬಹುಶಃ ಕ್ಷಯರೋಗದಲ್ಲಿ ಬರುತ್ತಿರುತ್ತವೆ ಕೆಲವರು ಇದಕ್ಕೆ ತ್ರಿದೋಷಜನ್ಯಜ್ವರವೆಂದೂ ಅನ್ನುತ್ತಾರೆ.

ಉಪಾಯ:—ಇವಕ್ಕೆ ಕಫಜ್ವರನಾಶಕ ಇಲ್ಲವೆ ಪಿತ್ಥನಾಶಕ ಉಪಾಯ ಮಾಡಬೇಕು.

———

## (೩) ಶೀತಪೂರ್ವಕ ಜ್ವರ.

ಲಕ್ಷಣ:—ಕಫ ಮತ್ತು ವಾತಗಳು ರಸ-ಧಾತುಗಳನ್ನು ಆಶ್ರಯಿಸಿ ಕೊಂಡು ಮೊದಲು ಶೀತಜ್ವರವನ್ನು ಹುಟ್ಟಿಸುತ್ತವೆ; ಅದರ ವೇಗವು ಕಡಿಮೆ ಯಾಯಿತೆಂದರೆ ಕಡೆಗೆ ಪಿತ್ಥವು ದಾಹವನ್ನುಂಟು ಮಾಡುತ್ತದೆ. ಮುಂಚೆ ಹೆಚ್ಚಾಗಿ ಚಳಿಚಳಿಯಾಗಿ ಬಳಿಕ ಮೈಯಲ್ಲಿ ಜ್ವರ ತುಂಬುತ್ತವೆ. ಟೊಂಕ, ಕೈ ಕಾಲು, ಮೈ ಮತ್ತು ಸಂದುಗಳಲ್ಲಿ ನೋವು, ಓಕರಿಕೆ, ಬಡಬಡಿಕೆ, ಅರುಚಿ ಮುಂತಾದ ಲಕ್ಷಣಗಳಾಗುತ್ತವೆ. ಈ ಜ್ವರಗಳು ಮಳೆಗಾಲ ತೀರಿದ ಬಳಿಕ ಋತು ಬದಲಾಗುವ ಕಾಲಕ್ಕೆ ಬರುತ್ತಿರುತ್ತವೆ. (ಈ ಬಗ್ಗೆ ವಿಶೇಷ ವಿವರಣ ವನ್ನು ವಿಷಮಜ್ವರದೊಳಗಿನ ದಿನಾಲು ಬರುವ ಜ್ವರದಲ್ಲಿ ಮಾಡಿದೆ)

ಉಪಾಯ:—೧ ಸುದರ್ಶನ ಚೂರ್ಣವನ್ನು ತಣ್ಣೀರಿನೊಡನೆ ಕೊಡ ಬೇಕು. (ಇದರ ವಿವರಣವು ಸರ್ವಜ್ವರಗಳ ಉಪಾಯದ ೩೨ನೇ ಕಲಮಿನಲ್ಲಿ ಮಾಡಿದೆ ನೋಡಿರಿ)

೨ ಶೀತಜ್ವರಕ್ಕೆ ಇಸ್ಬಂದವೆಂದು ಔಷಧಿಗಳ ಅಂಗಡಿಗಳಲ್ಲಿ ಸಣ್ಣ ಕರೇ ಬೀಜ ಸಿಗುತ್ತವೆ. ಅವನ್ನು ೪ ಗುಂಜಿತೂಕ ಬಿಸಿನೀರಲ್ಲಿ ಕೊಡತಕ್ಕದ್ದು. ದಿನದಲ್ಲಿ ೩ ಸಾರೆ ಕೊಟ್ಟರೆ ನಿಂಡಿತವಾಗಿ ಗುಣ ಬರುತ್ತದೆ.

೩ ಚಿಂತಾಮಣಿರಸ:—ಇಂಗಳೀಕದೊಳಗಿಂದ ತೆಗೆದ ಶುದ್ಧ ಪಾರಜ, ಗಂಧಕ, ಅಭ್ರಕ, ಸೋಮನಾಥೀ ತಾಮ್ರಭಸ್ಮ, ತ್ರಿಕಟು, ತ್ರಿಫಳ, ಶುದ್ಧ ಜಾಪಾಳಬೀಜ ಇವನ್ನೆಲ್ಲ ಸರಿಯಾಗಿ ತಕ್ಕೊಂಡು ಬಾರಗೆಣಸಿನ ರಸದಲ್ಲಿ ಅರೆದು ಗುಲಗಂಜಿಯಷ್ಟು ಗುಳಿಗೆ ಕಟ್ಟಿಡಬೇಕು. ಪ್ರತಿಸಾರೆ ೧ ಗುಳಿಗೆಯನ್ನು ಅಲ್ಲದ ರಸದಲ್ಲಿ ಇಲ್ಲವೆ ಬಿಸಿನೀರಿನೊಡನೆ ಕೊಡತಕ್ಕದ್ದು. ಶೀತಜ್ವರದ ಮೇಲೆ ಈ ರಸಾಯನವು ಬಹುಗುಣಕಾರಿಯಾಗಿದೆ. ಮುಂಜಾವು ಸಂಜೆಗಳಲ್ಲಿ ೧-೧ ಗುಳಿಗೆ ಕೊಡತಕ್ಕದ್ದು. ಬುಲಾಬಾಗಿ ಅನ್ನಾಶಯವು ಶುದ್ಧವಾಗುವದು. ಈ ಔಷಧ ವನ್ನು ಕಫಜ್ವರದ ಮೇಲೂ ಕೊಡಬಹುದು. ಗುಲ್ಮ, ಹೊಟ್ಟೆಶೂಲಿ, ಮಿಶ್ರ ಸಾಧಾರಣ ಜ್ವರ, ಶೀತ, ನೆಗಡಿ, ಕೆಮ್ಮು ಇವುಗಳಿಗೂ ಈ ಔಷಧದಿಂದ ಗುಣವಾಗುತ್ತದೆ.

೪ ನೆಲಬೇವಿನ ಇಲ್ಲವೆ ಬೇವಿನ ಕಷಾಯ ಕೊಡತಕ್ಕದ್ದು.

೫ ಬಿಳೇ ಶಿರಿಲೊಳಲದ ಗಿಡದ ಬೇರನ್ನು ಲಿಂಬೀಹುಳಿಯಲ್ಲಿ ತೇಯು ಅಂಜನ ಮಾಡುವದು.

೭ ಸೈಂಧಲವಣ, ಹಿಪ್ಪಲಿ, ಆಳಲೇಕಾಯಿ, ಚಿತ್ರಮೂಲ ಇವುಗಳ ೧ ತೊ॥ ಚೂರ್ಣವನ್ನು ಪ್ರತಿಸಾರೆ ಬಿಸಿನೀರಲ್ಲಿ ಕೊಡುವದು.

೮ ಶುದ್ಧ ಪರದಾಳ ೧ ತೊಲಿ, ಶುದ್ಧ ತುತ್ಥ ೨ ತೊಲಿ, ಕಪ್ಪೇಚಿಪ್ಪಿನ ಭಸ್ಮ (ಶಿಂಪಿನ ಭಸ್ಮ) ೬ ತೊಲಿ ಮೂರೂ ಒಟ್ಟುಗೂಡಿಸಿ ಕಬ್ಬಿಣ ಹಂಚಿನಲ್ಲಿ ಹಾಕಿ ಅದರಲ್ಲಿ ಕರೇ ಮದ್ದಗುಣಿಕೆಯ ರಸ ಹಾಕಿ ಮೂರು ತಾಸುಗಳ ವರೆಗೆ ಅರೆದು ಒಲೆಯ ಮೇಲಿಟ್ಟು ಮಂದಾಗ್ನಿಯಿಂದ ಆ ರಸವನ್ನೆಲ್ಲ ಆಟ್ಟಿಸಬೇಕು; ಬಳಿಕ ಮತ್ತೆ ಅದನ್ನು ಮದ್ದಗುಣಿಕೆಯ ಬೇರಿನ ರಸದಲ್ಲಿ ಅರೆದು ಅವರೇಕಾಳಷ್ಟು ಗುಳಿಗೇ ಕಟ್ಟಿಡಬೇಕು. ಪ್ರತಿ ಸಾರೆ ೧ ಗುಳಿಗೆಯನ್ನು ಸಕ್ಕರೆಯೊಡನೆ ಕೊಡತಕ್ಕದ್ದು. ಇದಕ್ಕೆ ಭೂತಭೈರವ ರಸವೆನ್ನುತ್ತಾರೆ. ಇದರಿಂದ ಎಲ್ಲ ಶೀತಜ್ವರಗಳೂ ತಾತ್ಕಾಲದಲ್ಲಿಯೇ ನಾಶ ಹೊಂದುತ್ತವೆ. ಇತರ ಜ್ವರಗಳಿಗೆ ಈ ಗುಳಿಗೆಯನ್ನು ವೀಳ್ಯದೆಲೆಯೊಡನೆ ಕೊಡಬೇಕು. ಓಕರಿಕೆ ಬರುತ್ತಿದ್ದರೆ ಅಮೃತಬಳ್ಳಿಯ ರಸದಲ್ಲಿ ಜೇನತುಪ್ಪ ಹಾಕಿ ಅದರೊಡನೆ ಕೊಡತಕ್ಕದ್ದು.

೮ ಬಾಳಹಿರಡಾ, ಕೋಡುಮುರುಕನ ಬೀಜ ಇವುಗಳ ೧ ತೊಲಿ ಚೂರ್ಣವನ್ನು ಬೆಲ್ಲದೊಳಗೆ ಹಾಕಿ ಕೊಡಬೇಕು.

೯ ಕಟುಕರೋಣಿಯ ಪುಡಿಯನ್ನು ಎಕ್ಕೆಯ ಹಾಲಿನಲ್ಲಿ ತೊಯ್ಸಿ ಅರೆದು ಗುಲಗಂಜಿಯಷ್ಟು ಗುಳಿಗೆ ಮಾಡಿಟ್ಟು ಶೀತಜ್ವರ ಬರುವ ಮುಂಚೆ ತಾಂಬೂಲದೊಡನೆ ೧-೧ ಗುಳಿಗೆ ಕೊಡಬೇಕು.

೧೦ ಸಜ್ಜೀಖಾರವನ್ನು ಎಕ್ಕೀ ಹಾಲಲ್ಲಿ ೭ ದಿನ ನೆನೆಸಿ ಬಳಿಕ ಉಂಡೆ ಮಾಡಿ, ಹುಣಸೇ ಎಲೆ ಅರೆದು ರಾಡಿ ಮಾಡಿ ಅದರಲ್ಲಿ ಆ ಉಂಡೇಹಾಕಿ ಅದರ ಮೇಲೆ ಪಟಕವನ್ನಿಟ್ಟು ಅದರ ಮೇಲೆ ಅರಿವೆಯನ್ನು ಸುತ್ತಿ ಹಗ್ಗ ಕಟ್ಟಿ ೧ ಮೊಳ ತಗ್ಗು ತೆಗೆದಿಟ್ಟು ಅಗ್ನಿಪುಟ ಕೊಡಬೇಕು. ಅದು ಭಸ್ಮವಾಗುವದು. ಶೀತಜ್ವರಕ್ಕೆ ೩ ಗ.ಂಜಿ ಭಸ್ಮವನ್ನು ಸಕ್ಕರೆಯೊಡನೆ ದಿನಾಲು ಮೂರುಸಾರೆ ಯಂತೆ ೩ ದಿನ ಕೊಡಬೇಕು.

೧೧ ೩ ತೊಲಿ ಬೆಲ್ಲದಲ್ಲಿ ಒಂದು ಎಕ್ಕೀ ಎಲೆ ಕುಟ್ಟಿ ಚತುರ್ಥಾಂಶ ಕಷಾಯ ಮಾಡಿ ಕೊಡತಕ್ಕದ್ದು.

೧೨ ಬಿಳೇ ಗಣಜಲೀ ಸೊಪ್ಪಿನ ರಸ ಇಲ್ಲವೆ ಹೊಗಚಿ ಸೊಪ್ಪಿನ ರಸವನ್ನು ಶೀತಜ್ವರ ಬರುವ ಮೊದಲು ಮೂಗಿನ ಹೊರಳೆಯಲ್ಲಿ ಹಿಂಡತಕ್ಕದ್ದು. ೩-೪ ಹನಿ ಹಿಂಡುವದರಿಂದ ದಿನಾಲು ಬರುವ ಚಳಿಜ್ವರವೊದಲಾದ ಜ್ವರಗಳು ನಿಲ್ಲುತ್ತವೆ.

೧೩ ದಿನಬಿಟ್ಟು ದಿನ ಬರುವ ಜ್ವರಕ್ಕೆ:—೨೧ ಕಾಡಿಗ್ಗರಗಿನ ಎಲೆಗಳನ್ನು ೧॥ ಮಾಸಿ ಉಪ್ಪಿನೊಡನೆ ಅರೆದು ಗುಳಿಗೆ ಮಾಡಿ ಕೊಡತಕ್ಕದ್ದು.

೧೪ ಹೊಸ ಗಡಿಗೆಯಲ್ಲಿ ರಾತ್ರಿ ಹೊತ್ತಿನಲ್ಲಿ ೧೦ ತೊಲೆ ನೀರು, ೫ ತೊಲೆ ಬೆಲ್ಲಾ ಹಾಕಿಟ್ಟು ಬೆಳಿಗ್ಗೆ ಎದ್ದು ಕುಡಿದರೆ ಪಿತ್ತಾಧಿಕ ಶೀತ ಜ್ವರಗಳು ನಿಲ್ಲುವವು.

೧೫ ಅಂಡೇಹಳದಿ, ಕಾಡ-ಜೀರಿಗೆ, ಡಿಕ್ಕೇಮಲಿ, ಕಟುಕರೋಣಿ ಇವು ಪ್ರತಿಯೊಂದು ೧-೧ ಮಾಸಿ ತಕ್ಕೊಂಡು ಚೂರ್ಣ ಮಾಡಿ ಅದನ್ನು ೨ ಚೀಟು ಕಟ್ಟಬೇಕು. ಒಂದು ಚೀಟನ್ನು ಬೆಳಿಗ್ಗೆ ೫ ತೊಲಿ ಗೋಮೂತ್ರದಲ್ಲಿ ಹಾಕಿ ಕೊಡಬೇಕು. ರಾತ್ರಿ ಇನ್ನೊಂದು ಚೀಟನ್ನು ಸಕ್ಕರೆಯೊಡನೆ ಕೊಡಬೇಕು. ಗೋಮೂತ್ರವು ನೇರದಿದ್ದರೆ ಲವುಳಸರದ ರಸದಲ್ಲಿ ಇಲ್ಲವೆ ಬೆಲ್ಲದ ನೀರಿನಲ್ಲಿ ಕೊಟ್ಟರೆ ಒಂದೇ ದಿನದಲ್ಲಿ ಚಳಿಜ್ವರ ನಿಲ್ಲುತ್ತನೆ.

೧೬ ಶೀತ ಜ್ವರಾಂಕುಶ:—ತ.ತ್ಥ್ಯ, ಪಾರಜ, ಗಂಧಕ, ಹರದಾಳ, ಕಲ್ಲು ಕೊಪ್ಪರಿಗೆ, ಬಳಿಗಾರ, ನೇಪಾಳದ ಬೇರು ಇವು ಶುದ್ಧವಾದವುಗಳನ್ನು ಸಮ ಭಾಗ ತಕ್ಕೊಂಡು ಹಾಗಲ ರಸದಲ್ಲಿ ಅರೆದು ಗುಲಗಂಜಿಯಷ್ಟು ಗುಳಿಗೆ ಮಾಡ ಬೇಕು. ಒಂದೊಂದು ಗುಳಿಗೆಯನ್ನು ಅಲ್ಲದ ರಸ, ಕಲ್ಲುಸಕ್ಕರಿ, ಜೀರಿಗೆ, ಸಕ್ಕರಿ ಇಲ್ಲವೆ ವೀಳ್ಯದೆಲೆಯೊಡನೆ ಕೊಡತಕ್ಕದ್ದು. ದಿವಸ ೩ ಇಲ್ಲವೆ ೭. ಇದರಿಂದ ಎಲ್ಲ ಬಗೆಯ ಚಳಿಜ್ವರ, ಶೀತಜ್ವರ, ಸರತಿಯ ಜ್ವರ ಮತ್ತು ವಿಷಮ ಜ್ವರಗಳು ನಿಲ್ಲುತ್ತವೆ. ಪಥ್ಯ:—ಒಂದು ತಿಂಗಳ ವರೆಗೆ ಉಪ್ಪು ಮತ್ತು ಬೆಲ್ಲ ವರ್ಜ್ಯ. ಹಾಲು, ಅನ್ನ, ಸಕ್ಕರಿ, ತುಪ್ಪ ಉಪ್ಪು-ಖಾರವಿಲ್ಲದ ತೊವ್ವೆ ತಿನ್ನ ತಕ್ಕದ್ದು.

೧೭ ಕರೇತಿಗಡಿ ಬೀಜ ೨ ಮಾಸಿ, ೨ ಮಾಸಿ ಅತಿಬಜೆ, ೨ ಮಾಸಿ ಮೆಣಸು ಇವುಗಳನ್ನು ಪುಡಿ ಮಾಡಿ ೬ ಚೀಟು ಕಟ್ಟಬೇಕು. ದಿನಾಲು ೩ ಸಾರೆ ೧-೧ ಚೀಟನ್ನು ೨ ದಿವಸ ಬಿಸಿನೀರೊಡನೆ ಕೊಡತಕ್ಕದ್ದು.

೧೮ ವಿಳೆಲೆಜಾಳಿಯ ತೊಗಟೆಯ ಸತ್ವವನ್ನು ಕ್ವಿನಾಯಿನ್‌ದಂತೆ ತೆಗೆದು ಕೊಟ್ಟರೆ ಚೆನ್ನಾಗಿ ಗುಣ ಬರುತ್ತದೆ. ಕ್ವಿನಾಯಿನ್‌ದ ದೋಷಗಳು ಇದರಲ್ಲಿ ಕೊಂಚವೂ ಬರುವದಿಲ್ಲ; ಅಂದರೆ ಬವಳಿ ಬರುವದು, ಕಿವಿ ಮಂದಾಗು ವದು, ಕಿವಿಯಲ್ಲಿ ಒಂದು ಬಗೆಯ ಸಪ್ಪಳವಾಗುವದು, ಪಿತ್ತವಿಕಾರ ಮುಂತಾ ದವು ಆಗುವದಿಲ್ಲ.

೧೯ ಶೀತಜ್ವರಕ್ಕೆ ಧೂಪ:—ಕೋಷ್ಟ, ಬೇವು, ಬಜೆ, ಅಳಲೇಕಾಯಿ, ಕೋಡುಮುರುಕನ ಬೀಜ, ಗುಗ್ಗುಳ, ಬಿಳೇಸಾಸಿವೆ, ರಾಳ, ತುಪ್ಪ ಇವನ್ನು ಸರಿಯಾಗಿ ತಕ್ಕೊಂಡು ಅವುಗಳ ಧೂಪವನ್ನು ರೋಗಿಗೆ ಕೊಡುವದು; ಈ ಧೂಪವು ಪ್ರತಿಯೊಂದು ಬಗೆಯ ಜ್ವರಕ್ಕೂ ಹಿತಾವಹವಾಗುತ್ತದೆ.

೨೦ ಕೋಡುಮುರುಕನಬೀಜದ ಪಾವಲಿ ತೂಕ ಚೂರ್ಣವನ್ನು ನೀ ಸಕ್ಕರೆ, ಇಲ್ಲವೆ ಬೆಲ್ಲ ಇವುಗಳೊಡನೆ ೩ ದಿನ ಕೊಡತಕ್ಕದ್ದು.

೨೧ ಅಮೃತಬಳ್ಳಿಯ ರಸವನ್ನು ೩ ದಿನ ಕೊಡತಕ್ಕದ್ದು; ಇ ಶುದ್ಧ ಹರದಾಳ ಸುಣ್ಣಗಳನ್ನು ಅರೆದು ಗುಂಜಿ ತೂಕದ ಗುಳಿಗೆ ಮಾಡಿ ದಿನಾಲು ಬೆಳಿಗ್ಗೆ ಒಂದು ಗುಳಿಗೆಯನ್ನು ತಾಂಬೂಲದೊಡನೆ ಕೊಡಬೇ ಶೀತಜ್ವರ (ಚಳಿ ಚಳಿಯಾಗುವ) ಬರುವ ಮೊದಲು ೧ ಗುಳಿಗೆ ಕೊಡಬೇ ದಿವಸ ೩. ಪಥ್ಯ:—ಹಾಲು ಅನ್ನ. ಒಂದು ತಿಂಗಳ ವರೆಗೆ ಬೆಲ್ಲವನ್ನು ಕೊಡದು.

೨೨ ಸುಣ್ಣ ೬ ಭಾಗ, ಶುದ್ಧ ಹರದಾಳ ೩ ಭಾಗ, ಲವುಳಸರದ ೧೨ ತೊಲಿ ಕೂಡಿಸಿ ಅರೆದು ಉದ್ದಿನ ಕಾಳಷ್ಟು ಗುಳಿಗೆ ಮಾಡಿಡಬೇ ಬೆಳಿಗ್ಗೆ ಒಂದು ಗುಳಿಗೆಯನ್ನು ಸಕ್ಕರೆಯೊಡನೆ ಕೊಡಬೇಕು. ಚಳಿಜ್ವರ ವಾಗ ಒಂದು ಗುಳಿಗೆಯನ್ನು ವೀಳ್ಯದೆಲೆಯಲ್ಲಿ ೨ ಮೆಣಸು, ೨ ಲವಂಗ ಹ ಕೊಟ್ಟರೆ ಈ ಜ್ವರ ನಿಲ್ಲುತ್ತವೆ. ಒಂದು ತಿಂಗಳ ವರೆಗೆ ಬೆಲ್ಲ ವರ್ಜ್ಯ.

೨೩ ೧ ಮಾಸಿ ಶುಂಠಿ, ೧ ಮಾಸಿ ಬೆಲ್ಲ, ಸುಣ್ಣ ೧ ಮಾಸಿ ಅ ಚಳಿಜ್ವರ ಬರುವ ಮುಂಚೆ ಕೊಡತಕ್ಕದ್ದು.

೨೪ ೨೦ ಕೇರುಗಳನ್ನು ಕತ್ತರಿಸಿ ಹಂಚಿನಲ್ಲಿ ಹಾಕಿ ಅದರಲ್ಲಿ ಶುಂಠಿ ಚೂರುಗಳನ್ನು ಹಾಕಿ ಕರಿದು, ಶುಂಠಿಯ ಚೂರುಗಳನ್ನು ಬೇರೆ ತೆಗೆದುಕೊಂ ಪುಡಿಮಾಡಿ ಕಾಲು ತೊಲಿ ಪುಡಿಯನ್ನು ಸಕ್ಕರಿಯೊಡನೆ ಕೊಟ್ಟರೆ ಈ ಜ್ವರ ಗಳು ನಿಲ್ಲುತ್ತವೆ.

೨೫ ೧ ತೊಲಿ ಉಪ್ಪನ್ನು ೪ ತೊಲಿ ನೀರಲ್ಲಿ ಹಾಕಿ ಕೊಡಬೇ ಇದರಿಂದ ಜ್ವರ ನಿಂತು ಜ್ವರಗಷ್ಟೆಯೂ ಹೋಗುತ್ತದೆ.

೨೬ ೧॥ ಮಾಸಿ ಹಿಪ್ಪಲಿ ಪುಡಿಯನ್ನು ೫ ತೊಲಿ ನೀರಲ್ಲಿ ಕೂಡಿಸಿ ಜ್ವರ ಬರುವ ಮೊದಲು ಕುಡಿಸಬೇಕು. ದಿವಸ ೩.

೨೭ ಕಾಫಿಯ ಕಷಾಯದಲ್ಲಿ ಲಿಂಬೀಹುಳಿ ಹಿಂಡಿ ೩ ದಿವಸ ಕೊ ಈ ಜ್ವರಗಳು ನಿಲ್ಲುವದು ಖಂಡಿತವು.

೨೮ ಬಳ್ಳೊಳ್ಳಿ ಸುಟ್ಟು ೧೦–೧೫ ಬೀಜಗಳನ್ನು ಶಕ್ತಿಮಾನದಂತೆ ದೊಡನೆ ತಿನ್ನತಕ್ಕದ್ದು. ದಿನಕ್ಕೆರಡುಸಾರೆಯಂತೆ ೩ ಇಲ್ಲವೆ ೬ ದಿವಸ. ರಿಂದ ಜೀರ್ಣಜ್ವರ, ಪ್ಲೀಹ, ಕ್ಷಯಗಳೂ ಹೋಗುತ್ತವೆ. ಇದಕ್ಕೆ ಪಥ್ಯ: ಹೆಚ್ಚಾಗಿ ತುಪ್ಪ ತಿನ್ನಬೇಕು,

೨೯ ನೆಲಬೇವು, ಶುಂಠಿ, ಒಣನೆಲ್ಲಿ ಇವನ್ನು ೧-೧ ಬಿಲ್ಲಿ ತ

ತಕ್ಕೊಂಡು ಅಷ್ಟಮಾಂಶ ಕಷಾಯ ಮಾಡಿ, ದಿನಕ್ಕೆ ಮೂರು ಸಾರೆ ಕೊಡಬೇಕು. ಇದರಿಂದ ಸಾವಕಾಶವಾದರೂ ಚೆನ್ನಾಗಿ ಗುಣ ಬರುತ್ತದೆ. ದಿವಸ ೩-೫-೭.

೩೦ ಬೇವಿನಎಲೆ, ಹೂ, ತೊಗಟೆ, ಬೇರು ಇವು ಪ್ರತಿಯೊಂದು ೩-೩ ತೊಲಿ, ೯ ತೊಲಿ ಶುಂಠಿ, ೩ ತೊಲಿ ಮೆಣಸು, ೩ ತೊಲಿ ಹಿಪ್ಪಲಿ, ಅಳಲೇ ಕಾಯಿ, ತಾರೀಕಾಯಿ, ನೆಲ್ಲೀಚೆಟ್ಟು, ಪಾದೇಲವಣ, ಅಜ್ವಾನ, ಜವಖಾರ, ಇವು ಪ್ರತ್ಯೇಕ ೩ ೩ ತೊಲಿ ಇವೆಲ್ಲವುಗಳ ವಸ್ತ್ರಗಾಳ ಚೂರ್ಣ ಮಾಡಬೇಕು. ಪ್ರತಿಸಾರೆ ೧ ತೊಲಿ ಚೂರ್ಣವನ್ನು ಬಿಸಿನೀರಿನೊಡನೆ ಕೊಡಬೇಕು. ಇದ ರಿಂದ ಶೀತಜ್ವರ, ದಿನಾಲು ಬರುವ ಜ್ವರ, ಎರಡು ದಿನಗಳಿಗೆ ಬರುವ ಜ್ವರ, ಮೂರರ ಚಳಿಜ್ವರ, ನಾಲ್ಕರ ಚಳಿಜ್ವರ, ದಾಹಪೂರ್ವಕ ಜ್ವರ ಮುಂತಾದ ಎಲ್ಲ ಜ್ವರಗಳೂ ನಾಶವಾಗುತ್ತವೆ. ದಿವಸ ೩-೭ ೧೪.

೩೧ ಹುಣಿಗುಲಿಬೀಜ, ಹಿಪ್ಪಲಿ, ಜೀರಿಗೆ, ಜಾಲಿಎಲೆ ಇವನ್ನು ಸಮಭಾಗ ತಕ್ಕೊಂಡು ಅರೆದು, ಅವರೇಕಾಳಷ್ಟು ಗುಳಿಗೆ ಮಾಡಿ ಪ್ರತಿಸಾರೆ ಒಂದು ಗುಳಿಗೆಯಂತೆ ಸಕ್ಕರೆಯೊಡನೆ ದಿವಸಕ್ಕೆ ೩ ಸಾರೆ ತಕ್ಕೊಳ್ಳಬೇಕು. ದಿವಸ ೭.

೩೨ ೧ ಗುಂಜಿತೂಕ ಅಫು, ೨|| ಬೇವಿನಎಲೆ, ೧ ಬಿಲ್ಲಿ ತೂಕ ಬೆಲ್ಲ ಇವು ಗಳನ್ನು ಕೂಡಿಸಿ ಚೆನ್ನಾಗಿ ಅರೆದು ೨ ಗುಳಿಗೆ ಮಾಡಿ ಜ್ವರ ಬರುವ ಮೊದಲು ಒಂದು, ಚಳಿ ಬರುವ ಕಾಲಕ್ಕೆ ಒಂದು ಹೀಗೆ ಆವೆರಡೂ ತಕ್ಕೊಳ್ಳುವದು. ಒಂದೇ ದಿನದಲ್ಲಿ ಚಳಿಜ್ವರ ನಿಲ್ಲುತ್ತವೆ. ನಿಲ್ಲದಿದ್ದರೆ ಮರುದಿವಸ ಅದರಂತೆಯೇ ಕೊಟ್ಟರಂತೂ ಖಂಡಿತವಾಗಿ ನಿಲ್ಲುತ್ತವೆ.

೩೩ ಮಾವಳ್ಳಿ ಸೊಪ್ಪು ಅರೆದು ಗಜಗದಷ್ಟು ಗುಳಿಗೆ ಮಾಡಿ ಬಲಮುಂ ಗೈಯ ಹತ್ತರ ನಾಡಿಯ ಬಳಿಗೆ ಇರುವ ದೊಡ್ಡ ಶಿರದ ಮೇಲಿಟ್ಟು, ಅದರ ಮೇಲೆ ಹಂಚಿನ ಬಿಲ್ಲಿ ಇಲ್ಲವೆ ತಾಮ್ರದ ದೊಡ್ಡ ಬಿಲ್ಲಿ ಇಟ್ಟು ಅರಿವೆಯಿಂದ ಗಟ್ಟಿಯಾಗಿ ಬಿಗಿಯಬೇಕು. ಈ ಔಷಧವನ್ನು ಚಳಿಬರುವ ಮೊದಲು ೨ ಗಳಿಗೆ ಕಟ್ಟ ತಕ್ಕದ್ದು; ಅಂದರೆ ಚಳಿಬರುವದೇ ಇಲ್ಲ. ಎರಡನೇ ದಿನ ಆ ಔಷಧವನ್ನು ಬಿಚ್ಚಿ ತೆಗೆದು, ಗುಳ್ಳಿ ಎದ್ದಲ್ಲಿ ಆ ಗಾಯಕ್ಕೆ ಜೊಬ್ಬರಿ ಸುಟ್ಟು ತೆಯ್ದು ಹಚ್ಚಬೇಕು.

೩೪ ಪಟಕದ ಅರಳು ಮಾಡಿ, ಅದರಷ್ಟೇ ಸಕ್ಕರಿ ಹಾಕಿ ಅರೆದಿಡಬೇಕು. ರೋಗಿಯ ಶಕ್ತಿಮಾನಕ್ಕನುಸರಿಸಿ ೪ ಗುಂಜೆಯಿಂದ ೧೦ ಗುಂಜೆಯ ವರೆಗೆ ಕೊಡಬೇಕು. ಇದರಿಂದ ಜ್ವರ, ಕೆಮ್ಮು, ಕಫಗಳ ನಿವಾರಣವಾಗುತ್ತದೆ.

೩೫ ಪತ್ರೀಹರದಾಳ ಭಸ್ಮವನ್ನು ಕಾಲು ಇಲ್ಲವೆ ಅರ್ಧಗುಂಜೆಯಷ್ಟು ವಿಳ್ಯದೆಲೆಯೊಳಗೆ ಕೊಡಬೇಕು. ಒಂದೇ ದಿನದಲ್ಲಿ ಚಳಿ ನಿಲ್ಲುತ್ತವೆ. (ಭಸ್ಮ ಮಾಡುವ ಕ್ರಿಯೆಯನ್ನು ಚಿಕಿತ್ಸಾ ಪ್ರಭಾಕರದೊಳಗಿನ ರಸಾಯನ ಪ್ರಕರಣ

ದಲ್ಲಿ ನೋಡಿರಿ.) ಆದರೆ ಒಂದು ಸಪ್ತಕ ಹಾಲು ಅನ್ನ, ತುಪ್ಪ ರೊಟ್ಟಿ, ಸಕ್ಕರಿ, ಬೆಕ್ಕರಿ ಇವುಗಳ ವಿನಃ ಏನನ್ನೂ ತಿನ್ನಬಾರದು. ೧ ತಿಂಗಳ ವರೆಗೆ ಬೆಲ್ಲ ವರ್ಜ್ಯ. ತಿಂದರೆ ಅಂದೇ ಚಳಿ ಚಳಿಯಾಗಿ ಜ್ವರ ಬರುತ್ತವೆ.

೩೬ ಶುದ್ಧ ನೇಪಾಳದ ಬೇರು, ಶುದ್ಧ ಇಂಗಳೀಕ, ಮೆಣಸು, ಹಿಪ್ಪಲಿ, ಬಳಿಗಾರದ ಅರಳು, ಸಮುದ್ರ ಶೋಕನಬೀಜ, ಅಕಳಕರಿ, ಶುಂಠಿ ಇವನ್ನೆಲ್ಲ ಸರಿಯಾಗಿ ತಕ್ಕೊಂಡು ವೀಳ್ಯೆದೆಲೆಯ ರಸದಲ್ಲಿ ೭ ದಿವಸ ಅರೆಯಬೇಕು. ಬಳಿಕ ಗುಲಗಂಜಿಯಷ್ಟು ಗುಳಿಗೆ ಮಾಡಿಟ್ಟು, ಶಕ್ತಿಮಾನದಂತೆ ೧ ಇಲ್ಲವೆ ೨ ಗುಳಿಗೆ ಗಳನ್ನು ವೀಳ್ಯೆದೆಲೆಯ ರಸದಲ್ಲಿ ಕೊಡಬೇಕು; ಅಂದರೆ ಪ್ರತಿದಿನ ಬರುವ ಜ್ವರ ಮುಂತಾದ ಎಲ್ಲ ಜ್ವರಗಳೂ ನಾಶ ಹೊಂದುತ್ತವೆ.

೩೭ ನ್ಯಾಬಳ್ಳಿಯ ಎಲೆ, ಮೆಣಸು ಇವನ್ನು ಸಮಭಾಗ ತಕ್ಕೊಂಡು ಅರೆದು, ಅವರೇಕಾಳಷ್ಟು ಗುಳಿಗೇ ಮಾಡಿಡಬೇಕು. ಮುಂಜಾವು ಸಂಜೆಗಳಲ್ಲಿ ೧-೧ ಗುಳಿಗೆಯನ್ನು ವೀಳ್ಯೆದೆಲೆಯ ರಸದಲ್ಲಿ ಕೊಟ್ಟರೆ ಎಲ್ಲ ಬಗೆಯ ಶೀತಜ್ವರ ಗಳೂ ನಾಶಹೊಂದುತ್ತವೆ.

೩೮ ೨-೩ ತೊಲಿ ಹಾಗಲ ಎಲೆಯ ರಸದಲ್ಲಿ ೨-೩ ಗುಂಜಿ ಬಳಿಗಾರದ ಅರಳಿನ ಪುಡಿ ಹಾಕಿ ಶಕ್ತಿಮಾನದಂತೆ ಕೊಡಬೇಕು. ಇದರಿಂದ ವಾಂತಿ ಇಲ್ಲವೆ ಜುಲಾಬು ಆಗಿ ಜ್ವರ ನಿಲ್ಲುತ್ತವೆ.

೩೯ ಎಳೆ ಎಕ್ಕೀಎಲೆಯನ್ನು ತಾಂಬೂಲದಲ್ಲಿ ಹಾಕಿ ಕೊಡಬೇಕು.

೪೦ ಕೋಡುಮುರುಕನ ತೊಗಟೆ, ಅಮೃತಬಳ್ಳಿ, ಅಡಸಾಲ, ಬಳ್ಳಿಹರಿವೆ (ಇಲಿಕಿವಿಪಲ್ಯ) ಲೆಕ್ಕಿ, ಕಾಡಿಗ್ಗರುಗು, ಶುಂಠಿ ಇವುಗಳ ಕಾಢೆ-ನಿಕಾಢೆ ಕೊಡ ತಕ್ಕದ್ದು. ದಿವಸ ೩-೭. ಇದರಿಂದ ಶೀತಜ್ವರಗಳ ನಿವಾರಣವಾಗುತ್ತದೆ.

೪೧ ಪಾರಿಜಾತದ ಎಳೇಎಲೆ ಹಾಗು ಬೆಲ್ಲ ಇವುಗಳನ್ನು ಕೂಡಿಸಿ ಅರೆದು ಅಡಿಕೆಯಷ್ಟು ಗುಳಿಗೆ ಮಾಡಿ ತಿನ್ನಬೇಕು. ಅದರ ಮೇಲೆ ನೀರು ಕುಡಿಯ ಬಾರದು. ಜ್ವರಬರುವ ಮೊದಲು ೨ ತಾಸು ಈ ಔಷಧವನ್ನು ಕೊಡತಕ್ಕದ್ದು.

೪೨ ಡಬಗಳ್ಳಿ, ಹವೀಜ, ಶುಂಠಿ, ಅಮೃತಬಳ್ಳಿ, ಜೇಕಿನಗಡ್ಡೆ ಪದ್ಮ ಕಾಷ್ಠ, ರಕ್ತಚಂದನ, ನೆಲಬೇವು, ಕಹಿಪಡುವಲು, ಅಡಸಾಲ, ತಾವರೆಗಡ್ಡೆ, ಕಟುಕರೋಣಿ. ಕೋಡುಮುರುಕನಬೀಜ, ಕಲ್ಲುಸಬ್ಬಸಿಗಿ, ಬೇವು, ಗಂಟು ಭಾರಂಗಿ ಇವನ್ನು ಸರಿಭಾಗ ತಕ್ಕೊಂಡು ಕಾಢೆ-ನಿಕಾಢೆ ಮಾಡಿ ಕೊಟ್ಟರೆ ಎಲ್ಲ ಬಗೆಯ ಶೀತಜ್ವರಗಳ ನಿವಾರಣವಾಗುತ್ತದೆ.

೪೩ ಅಂತರಿತ ಜ್ವರಗಳಿಗೆ ೧-೧॥ಮಾಸಿ ಅತಿಬಜೆಯ ಚೂರ್ಣವನ್ನು ಜೇನ ತುಪ್ಪದೊಡನೆ ಇಲ್ಲವೆ ತಣ್ಣೀರಿನೊಡನೆ ಕೊಡತಕ್ಕದ್ದು.

೪೪ ೨ ಮಾಸಿ, ಹುಲುಗುಲಿ ಬೀಜದ ಪುಡಿಯನ್ನು ದಿನಕ್ಕೆ ೨-೩ ಸಾರೆ ಕೊಟ್ಟರೆ ಶೀತಜ್ವರಗಳು ನಿಲ್ಲುತ್ತವೆ.

೪೫ ಕ್ವಿನಾಯಿನದ ಕೂಡ ಅಜ್ವಾನದ ಅರ್ಕವನ್ನು ಕೊಟ್ಟರೆ ಜ್ವರಗಳು ಮರಳಿಸಿ ಬರುವದಿಲ್ಲ. ಇಲ್ಲವೆ ಗಜಗದೊಳಗಿನ ಬೀಜ ಮತ್ತು ಮೆಣಸುಗಳನ್ನು ಪುಡಿಮಾಡಿ ಕೊಡಬೇಕು. ಕ್ವಿನಾಯಿನಕ್ಕಿಂತಲೂ ಚೆನ್ನಾಗಿ ಗುಣ ಕಂಡು ಬರುವದು.

೪೬ ಪಾರಜ, ಗಂಧಕ, ನೇಪಾಳದ ಬೇರು ಇವು ಶುದ್ಧವಾದವನ್ನು ತಕ್ಕೊಂಡು ಬಳೆಗಾರದ ಅರಳು, ಸೈಂಧಲವಣ, ಮೆಣಸು, ಹುಣಸೀಕಾಯಿ ಸಿಪ್ಪೆಯ ಬೂದಿ ಇವನ್ನೆಲ್ಲ ಕೂಡಿಸಿ ಸಕ್ಕರೆಗಂಚಿಯ ರಸದಲ್ಲಿ ಅರೆದು ೨ ಗುಂಜಿ ಪ್ರಮಾಣ ಗುಳಿಗೆ ಮಾಡಬೇಕು. ಅಂಥ ಒಂದು ಮಾತ್ರೆಯನ್ನು ಉಷ್ಣೋದಕದೊಡನೆ ಕೊಟ್ಟರೆ ಒಂದೇ ದಿನದಲ್ಲಿ ಶೀತಪೂರ್ವಕ ಜ್ವರಗಳು ನಿಲ್ಲುತ್ತವೆ.

೪೭ ಬೇವಿನ ಒಳದೊಗಟೆ ೨ ತೊಲಿ, ೨ ಮಾಸಿ ಮೆಣಸು ಇವುಗಳ ಕಷಾಯ ಮಾಡಿ ದಿನದಲ್ಲಿ ೩ ಸಾರೆ ಕೊಡಬೇಕು. ಮೂರೇ ದಿನಗಳಲ್ಲಿ ಚಳಿ-ಜ್ವರಗಳು ಖಂಡಿತವಾಗಿ ನಿಲ್ಲುತ್ತವೆ. ಅಲ್ಲದೆ ಚಳಿ-ಜ್ವರದ ಇತರ ಉಪದ್ರವಗಳ ನಿವಾರಣವೂ ಆಗುತ್ತದೆ.

೪೮ ಜ್ವರದೊಳಗೆ ತಲೆನೋವಿದ್ದರೆ:—ಕೆಂಪು ಕಣಗಿಲ ಹೂವು, ನೆಲ್ಲೀಚೆಟ್ಟು, ಹವೀಜ, ಬಜೆ, ಕೋಷ್ಟ ಇವುಗಳ ಚೂರ್ಣವನ್ನು ಬಿಸನೀರಿನಲ್ಲಿ ಕಲಿಸಿ ತಲೆಗೆ ಬಡಿಯಬೇಕು. ತಲೆಶೂಲಿಯು ಕಟ್ಟುಕೊಟ್ಟ ಹಾಗೆ ನಿಂತು ಬಿಡುತ್ತದೆ.

---

## (೪) ಅಂತರ್ವೇಗ ಜ್ವರ.

ಲಕ್ಷಣ:—ದೇಹದೊಳಗೆ ದಾಹ, ಅತಿ ನೀರಡಿಕೆ, ಒದರಬಡಿಸುವದು, ಉಬ್ಬಸ, ಭ್ರಮ, ಸಂದುಗಳಲ್ಲಿಯೂ ಎಲುಗಳಲ್ಲಿಯೂ ನೋವು, ಬೆವರು ಬಾರದಿರುವದು, ವಾಯು-ಮಲಗಳು ಕಟ್ಟಾಗುವದು ಮುಂತಾದ ಲಕ್ಷಣಗಳಾಗುತ್ತಿದ್ದು, ಇದು ದುಃಸಾಧ್ಯವೇ ಸರಿ.

ಉಪಾಯ:—ಇದಕ್ಕೆ ಪಿತ್ತಶಾಮಕವಾದ ವಿಷಮ ಜ್ವರದೊಳಗಿನ ಉಪಾಯ ಮಾಡತಕ್ಕದ್ದು.

---

## (೫) ಬಹಿರ್ವೇಗ ಜ್ವರ.

ಲಕ್ಷಣ:—ಹೊರಗಿನಿಂದ ಶರೀರಕ್ಕೆ ಉರಿ-ಉರಿಯಾಗುವದು, ನೀರಡಿಕೆ, ಭ್ರಮ, ಉಬ್ಬಸ, ಒಣಕೆಮ್ಮು ಮುಂತಾದ ಅಲ್ಪ ದೋಷಗಳಿರುತ್ತವೆ. ಈ ಜ್ವರಗಳು ಸುಖಸಾಧ್ಯಗಳಾಗಿರುತ್ತವೆ.

ಉಪಾಯ:—ಇದಕ್ಕೆ ಸಾದಾ ಜ್ವರದೊಳಗಿನ ಉಪಾಯಗಳನ್ನು ಮಾಡುವದು.

## (೬) ದಾಹಯುಕ್ತ ಜ್ವರ.

ಕಾರಣ ಮತ್ತು ಲಕ್ಷಣ: ಮೊದಲು ರಸ ಧಾತುಗತ ಪಿತ್ತವಾಗಿ ಬಹಳ ದಾಹವನ್ನುಂಟು ಮಾಡುತ್ತದೆ ಬಳಿಕ ಅದರ ವೇಗವು ಶಾಂತವಾಯಿತೆಂದರೆ ವಾತ, ಕಫಗಳ ಸಂಯೋಗದಿಂದ ಶೀತವನ್ನುಂಟು ಮಾಡುತ್ತದೆ. ದಾಹಪೂರ್ವಕ ಮತ್ತು ಶೀತಪೂರ್ವಕ ಇವೆರಡು ಜ್ವರಗಳು ತ್ರಿದೋಷಗಳಿಂದಲೇ ಉಂಟಾಗುತ್ತವೆ. ಅದರಲ್ಲಿ ದಾಹಪೂರ್ವಕ ಜ್ವರವು ದುಃಖಪ್ರದವೂ, ಕಷ್ಟಸಾಧ್ಯವೂ; ಶೀತಪೂರ್ವಕ ಜ್ವರವು ಸುಖಸಾಧ್ಯವೂ ಆಗಿವೆ. ಯಾಕೆಂದರೆ ಶೀತಜ್ವರಗಳಿಗೆ ಎಷ್ಟೋ ಉಪಚಾರಗಳನ್ನು ಮಾಡ ಬರುತ್ತದೆ; ಆದರೆ ದಾಹಪೂರ್ವಕ ಜ್ವರಗಳಿಗೆ ಅತಿ ಶೀತೋಪಚಾರ ಮಾಡಲಿಕ್ಕೆ ಬರಲಾರದು. ದಾಹಪೂರ್ವಕ ಜ್ವರದಲ್ಲಿ ದೇಹದಾಹ, ಮನಸ್ಸಿಗೆ ಅಸ್ವಸ್ಥ್ಯ, ನಿದ್ರಾಭಂಗ, ಹೆಚ್ಚು ಜ್ವರ ಬರುವದು, ತಲೆಶೂಲಿ ಮುಂತಾದ ಲಕ್ಷಣಗಳಿರುತ್ತವೆ

ಉಪಾಯ:—೧ ಕಾರೀಕಾಯಿ, ಕಕ್ಕೀಕಾಯ ತಿಳಲು, ಕಟುಕರೋಣಿ, ತಿಗಡಿ, ಬಾಳಹಿರಡಾ ಇವುಗಳ ಕಷಾಯದಿಂದ ನೀರಡಿಕೆ, ದಾಹ ಮತ್ತು ಎಲ್ಲ ವಿಷಮಜ್ವರಗಳ ನಾಶವಾಗುತ್ತದೆ. ದಾಹದ ಶಮನವಾಗುತ್ತದೆ.

೨ ಔಡಲ ಎಲೆಗಳನ್ನು ನೆಲದ ಮೇಲೆ ಹಾಸಿ ಅದರ ಮೇಲೆ ರೋಗಿಯನ್ನು ಮಲಗಿಸಿ, ಅವನ ಶರೀರದ ಮೇಲೆ ಪತ್ತೆ ಆ ಔಡಲಲೆಲೆಗಳನ್ನು ಹೊಚ್ಚಿ, ಅದರ ಮೇಲೆ ತಿಳುವನ್ನ ಹೊದಿಕೆ ಹೊಚ್ಚಬೇಕು. ಒಂದು ಗಳಿಗೆಯನಂತರ ತೆಗೆದು ಶೀತಜ್ವರದೊಳಗಿನ ಉಪಾಯ ಮಾಡಬೇಕು.

೩ ದಾಹಜ್ವರಿತ ರೋಗಿಯನ್ನು ಅಂಗಾತ ಮಲಗಿಸಿ, ಅವನ ಹೊಕ್ಕಳದ ಮೇಲೆ ತಾಮ್ರದ ಇಲ್ಲವೆ ಕಂಚಿನ ಪಾತ್ರೆಯನ್ನಿಟ್ಟು ಅದರೊಳಗೆ ಎತ್ತರದಿಂದ ತಣ್ಣೀರನ್ನು ಸುರುವಬೇಕು. ಈ ಪ್ರಯೋಗದಿಂದ ದಾಹ ಶಾಂತವಾಗಿ ರೋಗಿಗೆ ಹಿತವಾಗುವದು.

೪ ಜ್ವರದೊಳಗಿನ ಪ್ರತಿಯೊಂದು ಬಗೆಯ ದಾಹಕ್ಕೆ:—ಯಾವ ಪಾತ್ರೆಗಳಲ್ಲಿ ನೇಪಾಳದ ಬೇರು ಇರುತ್ತದೆಯೋ ಆ ಪಾತ್ರೆಯನ್ನು ರೋಗಿಗೆ ಕೊಟ್ಟರೆ ದಾಹವು ನಿಶ್ಚಯಪೂರ್ವಕ ಶಮನವಾಗುತ್ತದೆ.

೫ ಹವೀಜ ಕುಟ್ಟಿ ರಾತ್ರಿ ನೀರಲ್ಲಿ ನೆನೆಹಾಕಿ, ಬೆಳಿಗ್ಗೆ ಸೋಸಿ, ಅದರಲ್ಲಿ ಅಮೃತಬಳ್ಳಿಯ ಸತ್ವ ಕಲ್ಲುಸಕ್ಕರಿ ಇವುಗಳನ್ನು ಹಾಕಿ ಕೊಡಬೇಕು.

೬ ಅಳಲೆಕಾಯಿ, ತೆರೇದ ಕೊಗಟಿ, ಮಂಜಿಷ್ಟ, ಅಳಲೇಕೊಗಟಿ, ನೆಲ್ಲೀ ಚೆಟ್ಟು, ತಾರೀಕಾಯಿ, ಕಕ್ಕೀಕಾಯಿ ತಿಳುಲು, ಆಲದ ತೊಗಟೆ ಇವುಗಳ ಕಷಾಯ ಮಾಡಿ ೫ ತೊಲಿ ಇಳಿಸಿ ಆರಿದ ಮೇಲೆ ಜೇನುತುಪ್ಪ ಹಾಕಿ ಕೊಡ ಬೇಕು. ರಾತ್ರಿಯಲ್ಲಿ ಅದನ್ನೇ ಹಿಕಾಫೆ ಮಾಡಿ ಕೊಡುವದು.

೭ ೧ ತೊಲಿ ಕೃಷ್ಣಾಗರು ಚಂದನವನ್ನು ೫ ತೊಲಿ ನೀರಲ್ಲಿ ತೆಯ್ದು ಕೊಡತಕ್ಕದ್ದು.

೮ ಜ್ವರದೊಳಗಿನ ಅಂತರ್ದಾಹಕ್ಕೆ:— ೨ ತೊಲಿ ಕರೇ ಅತ್ತೀಬೇರು, ೨ ತೊಲಿ ದೀಪದ್ರಾಕ್ಷಿ ಇವುಗಳ ಕಷಾಯ ಮಾಡಿ ೨-೨ ತಾಸಿಗೊಮ್ಮೆಯಂತೆ ಕುಡಿಸಬೇಕು. ಇದರಿಂದ ಅಂತರ್ದಾಹ, ಪಿತ್ಥ, ಶೋಷ ಇವುಗಳ ಶಮನವಾಗುತ್ತದೆ.

೯ ಹವೀಜ, ಜೀರಿಗಿ, ಕಪ್ಪೂರಚಿನ್ನಿ (ಕಂಕೋಳ)ಯಾಲಕ್ಕಿ, ಶಾಬೇರಿಗೆ, ಬಡೇಸೊಪ್ಪು, ಬಾಳದಬೇರು ಇವನ್ನು ಸಮಭಾಗ ತಕ್ಕೊಂಡು ವಸ್ತ್ರಗಾಳ ಚೂರ್ಣಮಾಡಿ ಗುಲಾಬಿನ ನೀರಲ್ಲಿ ತೊಯಿಸಿ ಅರೆದು ಕಡಲೇಕಾಳಷ್ಟು ಗುಳಿಗೆ ಮಾಡಬೇಕು ಆ ಗುಳಿಗೆಯನ್ನು ಕಲ್ಲುಸ್ಸಬಿಗಿ, ದೀಪದ್ರಾಕ್ಷಿ ಇವುಗಳ ಕಷಾಯದಲ್ಲಿ ಕೊಟ್ಟರೆ ದಾಹಪೂರ್ವಕ ಜ್ವರಗಳ ನಿವಾರಣವಾಗುತ್ತದೆ. ಇದೇ ಗುಳಿಗೆಯನ್ನು ಅಕ್ಕೀ ಕಚ್ಚಿನಲ್ಲಿ ಕೊಟ್ಟರೆ ಮೂತ್ರದಾಹವು ಶಮನವಾಗುತ್ತದೆ.

---

## (೭) ಗಂಭೀರ ಜ್ವರ.

ಲಕ್ಷಣ:—ಅಂತರ್ದಾಹ, ನೀರಡಿಕೆ, ಪ್ರಬಲದೋಷ, ಉಬ್ಬಸ, ಒಣ ಕೆಮ್ಮು ಮುಂತಾದ ಲಕ್ಷಣಗಳು ಯಾವ ಜ್ವರಗಳಲ್ಲಿರುತ್ತವೋ ಅವಕ್ಕೆ ಗಂಭೀರ ಜ್ವರವೆನ್ನುತ್ತಾರೆ.

### ಉಪಾಯಗಳು.

೧ ಈ ಜ್ವರಗಳಿಗೆ ಎಲ್ಲ ಪಿತ್ಥಶಾಮಕ ಉಪಾಯ ಮಾಡಬೇಕು.

೨ ೨ ಗುಂಜಿ ಸುವರ್ಣಮಾಕ್ಷಿಕಭಸ್ಮವನ್ನು ಖಾರಗೆಣಸಿನ ರಸ, ಜೇನುತುಪ್ಪಗಳೊಡನೆ ಕೊಡುವದು.

೩ ಸೂತಶೇಖರ ಮಾತ್ರೆಯನ್ನು ಅಲ್ಲದ ರಸದಲ್ಲಿ ಕಲ್ಲುಸಕ್ಕರೆಯ ಪುಡಿ ಹಾಕಿ ಕೊಡಬೇಕು. ಪ್ರಮಾಣ:— ೧-೨ ಗುಂಜಿ ಮಾತ್ರೆಯನ್ನು ತೆಗೆಯ್ಯ ತಕ್ಕದ್ದು. ಜೇನತುಪ್ಪ, ನೆಲ್ಲೀಕಾಯಿ ಪಾಕ ಇವುಗಳನ್ನಾದರೂ ಪ್ರಸಂಗೋಚಿತವಾಗಿ ಉಪಯೋಗಿಸತಕ್ಕದ್ದು.

೪ ಪಿತ್ತಜ್ವರದೊಳಗಿನ ಕಷಾಯುಗಳನ್ನು ಕೊಡತಕ್ಕದ್ದು. ನೆಲ್ಲೀಕಾಯಿ ಪಾಕದೊಳಗೆ ಸುವರ್ಣವಾಕ್ಷಿಕ ಭಸ್ಮವನ್ನು ಕೊಡುವದು.

---

## ೩೩ ಸಪ್ತಧಾತುಗತ ಜ್ವರ.

ಲಕ್ಷಣ:-ರಸಧಾತುಗತ ಜ್ವರ ಬಂದರೆ ಮೈ ಜಾಡ್ಯ, ಹೃದಯ ದೋಷ, ಓಕರಿಕೆ, ಇಂದ್ರಿಯಗಳಿಗೆ ಗ್ಲಾನಿ, ಅರುಚಿ, ಔದಾಸೀನ್ಯ ಮುಂತಾದ ಲಕ್ಷಣಗಳಾಗುತ್ತಿರುತ್ತವೆ.

೧ ರಸಧಾತುಗತ ಜ್ವರಗಳಿಗೆ ಉಪಾಯ:—

೧ ಜ್ವರ ಬಂದರೆ ವಾಂತಿ, ಲಂಘನಗಳನ್ನು ಮಾಡಬೇಕು. ಬೆವರು ಬರಿಸಬೇಕು.

೨ ತ್ರಿಫಳ, ಅಜ್ವಾನ, ನೆಲಗುಳ್ಳಬೇರು, ಅರಿಷಿಣ, ಬಿದರಬೀಜ, ಅಡಸಾಲ ಇವುಗಳ ಕಷಾಯುದಲ್ಲಿ ಜೇನತುಪ್ಪ ಹಾಕಿ ಕೊಟ್ಟರೆ ರಸಧಾತುಗತಜ್ವರ ನಿಲ್ಲುತ್ತವೆ.

---

## ೨ ರಕ್ತ ಧಾತುಗತ ಜ್ವರ.

ಲಕ್ಷಣ:—ರಕ್ತಮಿಶ್ರ ಉಗುಳು, ಓಕರಿಕೆ, ಶರೀರದಾಹ, ಮೋಹ, ಭ್ರಮೆ, ಅಸಂಬದ್ಧ ಮಾತುಗಳು, ಮೈ ಮೇಲೆ ಗುಳ್ಳೆಗಳೇಳುವದು, ನೀರಡಿಕೆ ಇವೇ ಮುಂತಾದವುಗಳು ರಕ್ತಧಾತುಗತಜ್ವರದ ಲಕ್ಷಣಗಳಾಗಿವೆ.

ಉಪಾಯಗಳು.

೧ ತೆರೇದ ಕೊಗಟಿ, ತ್ರಿಫಳ, ಕಹಿಪಡುವಲ, ಬೇವು, ಅಡಸಾಲ, ಅಮೃತಬಳ್ಳಿ ಇವುಗಳ ಕಷಾಯದಲ್ಲಿ ಜೇನತುಪ್ಪ ಹಾಕಿ ಕೊಡುವದು. ಇದು ರಕ್ತಧಾತುಗತಜ್ವರಕ್ಕೆ ಅಪ್ರತಿಮ ಔಷಧವಾಗಿರುತ್ತದೆ.

೨ ತ್ರಿಫಳ, ಅಜ್ವಾನ, ಅರಿಷಿಣ, ನೆಲಗುಳ್ಳಬೇರು, ಬಿದರಬೀಜ, ಅಡಸಾಲ ಇವುಗಳ ಕಷಾಯದಲ್ಲಿ ಜೇನತುಪ್ಪ ಹಾಕಿ ಕೊಟ್ಟರೆ ರಸರಕ್ತಧಾತುಗತ ಜ್ವರದಿಂದಾದ ದಾರುಣದ ಶಮನವಾಗುತ್ತದೆ.

೩ ಅಡಸಾಲ, ನೆಲಿಂಗಳ, ಹಿಪ್ಪಲಿ, ಕಲ್ಲಸಪ್ಪಸಿಗಿ, ನೆಲಬೇವು, ಕಟುಕರೋಣಿ ಇವುಗಳ ಕಷಾಯುವನ್ನು ಜೇನತುಪ್ಪ ಹಾಕಿ ಕೊಟ್ಟರೆ ರಕ್ತಮಿಶ್ರಿತ ಜ್ವರ, ದಾಹ, ತೃಷೆ, ಮೂರ್ಛೆ, ಮತಿಭ್ರಂಶ ಮತ್ತು ಪಿತ್ತಜ್ವರ ಇವುಗಳ ನಿವಾರಣವಾಗುತ್ತದೆ.

೪ ರಕ್ತಧಾತುಗತ ಜ್ವರಕ್ಕೆ ಮೈ ಮೇಲೆ ನೀರು ಸಿಂಪಡಿಸುವದು, ಜ್ವರ

ಪಾಚಕ ಔಷಧ ಕೊಡುವದು, ಲೇಪ ಮಾಡುವದು, ರಕ್ತ ತೆಗೆಯುವದು ಮುಂತಾದ ಉಪಚಾರಗಳನ್ನು ಹೆಚ್ಚಾಗಿ ಮಾಡತಕ್ಕದ್ದು.

---

## (೩) ಮಾಂಸಗತ ಜ್ವರ.

ಲಕ್ಷಣ:—ಮೊಳಕಾಲ ಕೆಳಗಿನ ಮೀನಗಂಡದಲ್ಲಿ ಮಾಂಸದ ಕರಣಿಗಳಾಗುತ್ತವೆ. ನೀರಡಿಕೆ ಮತ್ತು ಮಲ-ಮೂತ್ರಗಳು ಹೆಚ್ಚಾಗುವಿಕೆ ಹಾಗು ಅಂತರ್ದಾಹಗಳಾಗುವದು, ಕೈ ಕಾಲುಗಳನ್ನು ಅಸ್ತವ್ಯಸ್ತವಾಗಿ ಅಲ್ಲಾಡಿಸುವದು, ಶರೀರಕ್ಕೆ ಗ್ಲಾನಿಯುಂಟಾಗುವದು. ಮುಂತಾದ ಲಕ್ಷಣಗಳು ಈ ಜ್ವರದಲ್ಲಿ ಆಗುತ್ತವೆ.

ಉಪಾಯಗಳು:—

೧ ಮಾಂಸಗತ ಜ್ವರ ಬಂದರೆ, ತೀಕ್ಷ್ಣವಾದ ರೇಚಕವನ್ನು ಕೊಡಬೇಕು.

---

## (೪) ಮೇದಗತಜ್ವರ.

ಲಕ್ಷಣ:-ಶರೀರಕ್ಕೆ ಹೆಚ್ಚಾಗಿ ಬೆವರು ಬರುವದು, ನೀರಡಿಕೆ, ಮೂರ್ಛೆ, ಬಡಬಡಿಕೆ, ಓಕರಿಕೆ, ಮೈ ಮೇಲೆ ಬಕ್ಕೆಗಳೇಳುವದು, ಅರುಚಿ, ಗ್ಲಾನಿ, ಸ್ವಲ್ಪ ನೆವಕ್ಕಾಗಿ ಅತಿ ಸಿಟ್ಟು ಬರೋಣ ಮುಂತಾದ ಲಕ್ಷಣಗಳು ಮೇದಗತ ಜ್ವರದಲ್ಲಿ ಆಗುತ್ತವೆ.

ಉಪಾಯ:—ಹೆಚ್ಚು ಬೆವರು ತರಿಸಬೇಕು. ಲಂಘನ ಮಾಡಿಸಬೇಕು.

---

## (೫) ಅಸ್ಥಿಗತ ಜ್ವರ.

ಲಕ್ಷಣಗಳು:—ಎಲುವು ನೋವು, ಉಗುಳುವುದು, ದಮ್ಮು, ಓಕರಿಕೆ, ಜುಲಾಬು, ಕೈ ಕಾಲುಗಳನ್ನು ಅಸ್ತವ್ಯಸ್ತವಾಗಿ ಮಾಡುವದು ಮುಂತಾದವುಗಳು ಅಸ್ಥಿಗತಜ್ವರದ ಲಕ್ಷಣಗಳಾಗಿರುತ್ತವೆ.

ಉಪಾಯಗಳು.:—

೧ ವಾಂತಿನಾಶಕ ಔಷಧಗಳನ್ನು ಕೊಡತಕ್ಕದ್ದು. ಬಸ್ತಿಶೋಧಕ ಔಷಧಗಳನ್ನು ಕೊಡುವದು. ಅಭ್ಯಂಗನ ಸ್ನಾನ ಮಾಡಿಸುವದು. (ಔಷಧ ಯುಕ್ತ ಎಣ್ಣೆ-ತುಪ್ಪಗಳನ್ನು ಹಚ್ಚತಕ್ಕದ್ದು.) ಉದ್ವರ್ತನ ಮುಂತಾದ ಉಪಾಯಗಳನ್ನು ಮಾಡುವದು.

೨ ಹಳದಿ ಹೊನ್ನರಿಕೆಯ ಎಲೆಯ ರಸ ಇಲ್ಲವೆ ಕಷಾಯದಲ್ಲಿ ಅಮೃತ ಬಳ್ಳಿಯಸತ್ವವನ್ನು ೪ ಗುಂಜೆಯಷ್ಟು ಹಾಕಿ, ೪-೪ ತಾಸಿಗೊಂತೆ ಎರಡು ಸಾರೆ

ಕೊಡಬೇಕು. ಇದರಿಂದ ಅಸ್ಥಿಗತ ಜ್ವರಗಳ ನಿವಾರಣವಾಗುತ್ತದೆ.

೩ ಅಮೃತಬಳ್ಳಿಯ ೧ ಮಾಸಿ ಸತ್ವವನ್ನು ಹಾಲು-ಸಕ್ಕರೆಯೊಡನೆ ೨೧ ದಿವಸ ಕೊಡುವದು.

೪ ಲವಂಗ, ಹಿಪ್ಪಲಿ, ಬಿಳೇಗಣಜಲಿ ಇವುಗಳ ಅಷ್ಟಮಾಂಶ ಕಷಾಯವನ್ನು ೨೧ ದಿವಸ ಕೊಡುವದು.

೫ ಸೋನಾಮುಖಿ(ನೆಲವರಿ)ಯ ಎಲೆ, ಶುಂಠಿ, ಜೀರಿಗಿ, ವಾಯುವಡಂಗ ಸಮಭಾಗ ತಕ್ಕೊಂಡು ಚೂರ್ಣ ಮಾಡಿ, ಅರ್ಧ ಇಲ್ಲವೆ ೧ ತೊಲಿ ಚೂರ್ಣವನ್ನು ಅಷ್ಟೇ ಸಕ್ಕರಿ ಹಾಕಿ ತಕ್ಕೊಳ್ಳತಕ್ಕದ್ದು. ಇದರಿಂದ ವಾತ, ಪಿತ್ತಾಧಿಕ ಅಸ್ಥಿಗತ ಜ್ವರ, ಹೊಟ್ಟೆಯುಬ್ಬುವಿಕೆ, ಬಿಕ್ಕು, ವಾಂತಿ, ಅಂಗದಾಹ, ಶ್ವಾಸ, ಒಣಕೆಮ್ಮು ಮುಂತಾದವುಗಳ ನಾಶವಾಗುತ್ತದೆ.

---

## (೬) ಮಜ್ಜಾಗತ ಜ್ವರ.

ಲಕ್ಷಣ:—ಕಾರ್ಗತ್ತಲೆಯಲ್ಲಿ ಪ್ರವೇಶಿಸಿದಂತಾಗೋಣ, ಬಿಕ್ಕು, ಕೆಮ್ಮು ಅತಿ ಶೀತ, ಓಕರಿಕೆ, ಅಂತರ್ದಾಹ, ಮಹಾಶ್ವಾಸ ಮತ್ತು ವೃಷಣ, ಹಣೆ, ಹೃದಯ, ಕಣ್ಣು ಕುಣಿಕೆ ಮುಂತಾದ ಮರ್ಮಸ್ಥಳಗಳಲ್ಲಿ ಹೆಚ್ಚಾಗಿ ವ್ಯಥೆಯಾಗುವದು.

ಉಪಾಯ:—ಇದಕ್ಕೆ ಚಲೋ ಔಷಧ ಸಿಗದಿದ್ದರೆ ಇದು ಅಸಾಧ್ಯವೇ ಸರಿ. ದೈವಬಲದಿಂದ ಬದುಕಿದರೇ ಬದುಕಬೇಕು.

---

## (೭) ಶುಕ್ರ ಧಾತುಗತ ಜ್ವರ.

ಲಕ್ಷಣ:—ಶುಕ್ರಸ್ಥಾನಕ್ಕೆ ಜ್ವರಗಳು ಹೋದರೆ, ಶಿಶ್ನವು ಆಗಾಗ್ಗೆ ಸ್ಫೂರ್ತಿಗೊಳ್ಳುವದು; ವೀರ್ಯವು ಮೇಲಿಂದ ಮೇಲೆ ಹೆಚ್ಚಾಗಿ ಸ್ರವಿಸುವದು ಈ ರೋಗದ ಮನುಷ್ಯನು ಬಹುಶಃ ಬದುಕುವದಿಲ್ಲ.

### ಉಪಾಯಗಳು.

೧ ಮಜ್ಜಾಧಾತುಗತ ಜ್ವರಗಳಿಗೆ ಯಾವ ವೈದ್ಯಕೀಯ ಗ್ರಂಥದಲ್ಲಿಯೂ ಉಪಾಯವನ್ನೇ ಹೇಳಿಲ್ಲ; ಯಾಕಂದರೆ ಆ ಜ್ವರದಿಂದ ರೋಗಿಯು ಬದುಕುವದೇ ಇಲ್ಲ. ಅವನ ದೈವಪರೀಕ್ಷೆಗಾಗಿ ಈ ಉಪಾಯಗಳನ್ನು ಮಾಡತಕ್ಕದ್ದು:

೨ ನೆಲ್ಲೀಚೆಟ್ಟು, ಅಮೃತಬಳ್ಳಿ ಇವುಗಳ ಕಷಾಯದಲ್ಲಿ ಇಲ್ಲವೆ, ಹಸೀನೆಲ್ಲೀಕಾಯಿ ರಸದಲ್ಲಿ ಮಾಕ್ಷಿಕಭಸ್ಮ, ಜೇನತುಪ್ಪ ಹಾಕಿ ಕೊಡತಕ್ಕದ್ದು.

೩ ಅರ್ಧ ತೊಲಿ ಇಸಮಗೋಲು ತಕ್ಕೊಂಡು, ಅದನ್ನು ರಾತ್ರಿ ನೀರಲ್ಲಿ

ನೆನೆಹಾಕಿ ಬೆಳಿಗ್ಗೆ ಅದರಲ್ಲಿ ಒಂದು ತೊಲಿ ಕಲ್ಲುಸಕ್ಕರಿ, ಅರ್ಧತೊಲಿ ಜೇನತುಪ್ಪ ಬೆರಸಿ ಕೊಟ್ಟರೆ ಧಾತುಸ್ರಾವವು ಕಟ್ಟಾಗುತ್ತದೆ.

---

## ಸಪ್ತಧಾತುಗತ ಜ್ವರಗಳ ಸಾಧ್ಯಾಸಾಧ್ಯ ವಿಚಾರವು.

ರಸ, ರಕ್ತ, ಮಾಂಸ, ಮೇದ ಈ ಧಾತುಗತ ಜ್ವರಗಳು ಔಷಧದಿಂದ ಗುಣವಾಗುತ್ತವೆ; ಅಸ್ಥಿ ಮಜ್ಜಾಗತ ಜ್ವರಗಳು ದುಸ್ಸಾಧ್ಯಗಳು; ಮತ್ತು ಶುಕ್ರ ಧಾತುಗತ ಜ್ವರ ಬಂದರೆ ಮರಣ ಬರುವದು ಖಂಡಿತವು.

---

## ೩೪ ಜೀರ್ಣಜ್ವರ (ಅಸ್ಥಿಜ್ವರ.)

ಲಕ್ಷಣ:— ಮೊದಲು ತೀವ್ರ ಜ್ವರ ಒಂದು ೨೧ ದಿನಗಳಾದನಂತರ, ಸಣ್ಣಾಗಿ ಮೈಯಲ್ಲಿ ಉಳಿಯುತ್ತದೆ ಅದರಿಂದ ಹೊಟ್ಟೆಯೊಳಗೆ ನೀರು ಗಂಟು, ನೀರು ಬಿಲ್ಲೆಗಳಾಗಿ ಜಠರಾಗ್ನಿಯು ಮಂದವಾಗುತ್ತದೆ. ಇಂಥ ಜ್ವರ ಗಳಿಗೆ ಜೀರ್ಣಜ್ವರವೆಂಬ ಹೆಸರು. ಈ ಜ್ವರಗಳ ಬಗ್ಗೆ ಮನಸರಿ ಮಾಡಿದರೆ ಮುಂದೆ ಪಾಂಡು, ಕ್ಷಯ, ಉದರ ಮುಂತಾದ ಮಹಾ ರೋಗಗಳಾಗುತ್ತವೆ. ಜೀರ್ಣಜ್ವರದಲ್ಲಿ ದಿನದಿನಕ್ಕೆ ಆಹಾರವು ಕಡಿಮೆಯಾಗಹತ್ತುತ್ತದೆ. ಅನ್ನವು ಜೀರ್ಣಸದಾಗುತ್ತದೆ ಮಲಾವರೋಧವಾಗುತ್ತದೆ. ಎಲುವುಗಳು ಜಡ್ಡಗಾ ಗುತ್ತವೆ. ಬಾಯಿಗೆ ನೀರೊಡೆಯುತ್ತದೆ. ಶುಕ್ರ ಇಲ್ಲವೆ ರಜ ಧಾತುಗಳು ನೀರಾಗಿ ಕ್ಷೀಣವಾಗುತ್ತವೆ. ಜೀರ್ಣಜ್ವರದಿಂದ ಒಮ್ಮೆಲೆ ಹೆಚ್ಚಾಗಿ ತ್ರಾಸವಾ ಗದಿದ್ದರೂ, ಒರ ಬರುತ್ತ ಹೆಚ್ಚೆಚ್ಚು ಪೀಡೆಗಳನ್ನುಂಟುಮಾಡುತ್ತಾ ಕಡೆಗೆ ಪ್ರಾಣನಾಶಕ ರೋಗವುಂಟಾಗಲಿಕ್ಕೆ ಕಾರಣವಾಗುತ್ತದೆ ಜೀರ್ಣಜ್ವರದ ರೋಗಿಯು ಉಪವಾಸ-ಲಂಘನಗಳನ್ನು ಮಾಡಕೂಡದು; ಮತ್ತು ಅವನಿಗೆ ವಮನ-ವಿರೇಚನಾದಿ ಉಪಾಯಗಳನ್ನು ಮಾಡಿಸಬಾರದು.

### ಉಪಾಯಗಳು.

೧ ೧೦ತೊಲಿ ಶಾಜೀರಿಗಿ, ೨೦ತೊಲಿ ಬೀಜತೆಗೆದಉತ್ತತ್ತಿ, ೫ತೊಲಿ ಜೀರಿಗಿ ಕೂಡಿಸಿ ಕುಟ್ಟಿ ಅಡಿಕೆಯಷ್ಟು ಗುಳಿಗೆ ಮಾಡಿ ದಿನಾಲು ಬೆಳಗು-ಸಾಯಂಕಾಲ ಗಳಲ್ಲಿ ೧-೧ ಗುಳಿಗೆಯಂತೆ ೨೧ ದಿನ ತಕ್ಕೊಳ್ಳತಕ್ಕದ್ದು.

೨ ಪತ್ರಿಬೇರು ಇಲ್ಲವೆ ಜಾಜೀಬಳ್ಳಿಯ ಬೇರುಗಳ ಕಷಾಯವನು ಹಾಲಲ್ಲಿ ಕದಡಿ ೨೧ ದಿನ ತಕ್ಕೊಂಡರೆ, ಅಪಕ್ವ ಹಾಗು ಕಠಿಣವಾದ ಜೀರ್ಣಜ್ವರಗಳ ನಿವಾರಣವಾಗುತ್ತದೆ.

೩ ಕಟುಕರೋಣಿಯ ಪುಡಿಯನ್ನು ಮುಂಜಾವು-ಸಂಜೆಗಳಲ್ಲಿ ಜೇನತುಪ್ಪ

ದೊಡನೆ ೭ ಇಲ್ಲವೆ ೧೪ ದಿನ ಸೇವಿಸತಕ್ಕದ್ದು.

೪ ೧||ಮಾಸಿ ಜೀರಿಗಿಪುಡಿ ಮತ್ತು ಅರ್ಧ ತೊಲಿ ಹಳೇಬೆಲ್ಲ ಇವುಗಳನ್ನು ಕೂಡಿಸಿ ಗುಳಿಗೆ ಮಾಡಿ ಎರಡೂ ಹೊತ್ತು ತಿನ್ನಬೇಕು. ಮೇಲೆ ನೀರು ಕುಡಿಸಲಾಗದು. ೧೪ ಇಲ್ಲವೆ ೨೧ ದಿವಸ.

೫ ಎಳೇ ಪತ್ರೀಕಾಯಿ, ಕುರೇಸಾನಿ ಅಜ್ವಾನ, ಟಕ್ಕರಿಕೆ, ಅಗಳತುಂಬಿ, ಲೋಧನಚಕ್ಕಿ ಇವುಗಳ ಕಾಢೆ-ನಿಕಾಢೆಗಳಿಂದ ಜೀರ್ಣಜ್ವರ, ಹೊಟ್ಟಿಶೂಲಿ, ತಲೆಶೂಲಿ, ಉಚ್ಛ್ವಾಸ, ಒಣಕೆಮ್ಮು ಮುಂತಾದವುಗಳ ನಾಶವಾಗುತ್ತದೆ. ದಿವಸ ೧೪.

೬ ೧ಪಾಲು ಹಿಪ್ಪಲಿ, ೨ಪಾಲು ಹಳೇಬೆಲ್ಲ ಕೂಡಿಸಿ ಕುಟ್ಟಿ ಅಡಿಕೆಯಷ್ಟು ಗುಳಿಗೆ ಮಾಡಿ ಬೆಳಗು-ಸಾಯಂಕಾಲಗಳಲ್ಲಿ ೧-೧ ಗುಳಿಗೆಯನ್ನು ತಿನ್ನಬೇಕು. ದಿವಸ ೧೪-೨೧. ಇದರಿಂದ ಜೀರ್ಣಜ್ವರ, ಅಗ್ನಿಮಾಂದ್ಯ, ಅಜೀರ್ಣ, ಕೆಮ್ಮು, ಅರುಚಿ, ಕೃಮಿ, ಶ್ವಾಸ ಮುಂತಾದವುಗಳ ನಾಶವಾಗುತ್ತದೆ.

೭ ಅಮೃತಬಳ್ಳಿಯ ಕಷಾಯದಲ್ಲಿ ಹಿಪ್ಪಲಿಪುಡಿ ಹಾಕಿ ೧೪ ಇಲ್ಲವೆ ೨೧ ದಿವಸ ಕೊಟ್ಟರೆ ಕಫಯುಕ್ತ ಜ್ವರದ ನಿವಾರಣವಾಗುವದು.

೮ ಅಮೃತಬಳ್ಳಿ, ನೆಗ್ಗಿಲಮುಳ್ಳು, ಸುಂಠಿ ಇವುಗಳ ಕಷಾಯದಲ್ಲಿ ಜೇನತುಪ್ಪ, ಸಕ್ಕರೆ ಹಾಕಿ ೭ ಇಲ್ಲವೆ ೧೪ ದಿವಸ ಕೊಟ್ಟರೆ ಜೀರ್ಣಜ್ವರಗಳ ನಿವಾರಣವಾಗಿ ಧಾತುವೃದ್ಧಿಯಾಗುತ್ತದೆ. ಹಸಿವೆ ಹೆಚ್ಚುತ್ತದೆ.

೯ ಸೈಂಧಲವಣ, ಪಾದೇಲವಣ, ಡಿಕ್ಕಾಮಲಿ, ಕಟುಕರೋಣಿ ಇವನ್ನು ೩|೩ ಮಾಸಿ, ಇಂಗು ೧ ಮಾಸಿ, ಪಿಂಡಖರ್ಜೂರ ೬ ಮಾಸಿ, ಉತ್ತುತ್ತಿ ೧, ಲವಂಗ ೭ ಇವುಗಳ ಪುಡಿ ಮಾಡಿ, ಅದರಲ್ಲಿಯ ಅರ್ಧಪುಡಿಯನ್ನು ಹುರಿದು, ಇನ್ನರ್ಧ ಹಾಗೆ ಇಟ್ಟು ಕೂಡಿಸಿಡಬೇಕು. ಈ ಚೂರ್ಣವನ್ನು ಶಕ್ತಿಮಾನದಂತೆ ೧ ತೊಲಿಯ ವರೆಗೆ ನೀರಲ್ಲಿ ಕಲಿಸಿ ಅದರಲ್ಲಿ ಕಾದಹಂಚಿನಬಿಲ್ಲಿ ಎದ್ದಿ ತಕ್ಕೊಳ್ಳತಕ್ಕದ್ದು. ದಿವಸ ೭.

೧೦ ಚಿಲೋ ಅಮೃತಬಳ್ಳಿಯ ೪ ತೊಲಿ ಕಡ್ಡಿಗಳನ್ನು ಜಜ್ಜಿ ರಾತ್ರಿ ನೀರಲ್ಲಿ ನೆನೆಹಾಕಿ ಬೆಳಿಗ್ಗೆ ಆ ನೀರನ್ನು ಸೋಸಿ ಕುಡಿದರೆ ಜೀರ್ಣಜ್ವರ ನಿಲ್ಲುವವು.

೧೧ ಸಂಡಿಗ್ಗುಂಬಳದ ಪಾಕ, ಜೀರಿಗಿ ಪಾಕ, ಖರ್ಜೂರಪಾಕ, ಬಾದಾಮಿ ಪಾಕ ಇವುಗಳಲ್ಲಿಯ ಯಾವುದೊಂದು ಪಾಕವನ್ನು ೨೧ ದಿವಸ ತೆಗೆದುಕೋಬೇಕು. (ಪಾಕಮಾಡುವ ಕೃತಿಯನ್ನು ಚಿ. ಪ್ರ. ಗ್ರಂಥದ ಪಾಕಪ್ರಕರಣದಲ್ಲಿ ನೋಡಿರಿ.)

೧೨ ಜೀರಿಗೆ ಹಾಗು ಹಿಪ್ಪಲಿಗಳನ್ನು ಸಮನಾಗಿ ತಕ್ಕೊಂಡು ಪುಡಿ ಮಾಡಿ, ಕಾಲು ತೊಲಿ ಪುಡಿಯನ್ನು ಕಾಸಿದ ಹಾಲಿನಲ್ಲಿ ಹಾಕಿ ಅದರಲ್ಲಿ ಅರ್ಧ ತೊಲಿ ಕಲ್ಲುಸಕ್ಕರೆ ಬೆರಸಿ ಕುಡಿಸಬೇಕು ದಿವಸ ೨೧-೨೮ ಈ ಔಷಧವು ಜೀರ್ಣಜ್ವರಕ್ಕೆ ಉತ್ತಮವು.

೧೩ ತುಳಸಿಯ ಎಲೆಯ ಕಷಾಯದಲ್ಲಿ ಕಲ್ಲುಸಕ್ಕರೆಯ ಪುಡಿ ಹಾಕಿ ೭ ಇಲ್ಲವೆ ೧೪ ದಿನ ಕುಡಿಯಬೇಕು.

೧೪ ದೀಪದ್ರಾಕ್ಷಿ, ಅಮೃತಬಳ್ಳಿ, ಕಷೋರ, ದುಷ್ಟಪುಚೆಟ್ಟು, ಜೇಕಿನ ಗಡ್ಡೆ, ರಕ್ತಚಂದನ, ಶುಂಠಿ, ಕಟುಕರೋಣಿ, ಪಾದರೀಬೇರು, ನೆಲಬೇವು, ನೆಲಿಂಗಳ, ಬಾಳದಬೇರು, ಹಪೀಜ, ಪದ್ಮಕಾಷ್ಠ, ಕರೇಬಾಳದಬೇರು, ನೆಲಗುಳ್ಳ ಬೇರು, ಕೊಳಂಜನ, ಬೇವು ಇವುಗಳ ಕಾಢೆ-ನಿಕಾಢೆ ಕೊಟ್ಟರೆ ಜೀರ್ಣಜ್ವರ, ಅರುಚಿ, ಉಬ್ಬಸ, ಒಣಕೆಮ್ಮು ಮತ್ತು ಬಾವುಗಳ ನಿವಾರಣವಾಗುತ್ತದೆ.

೧೫ ಲಘುಮಾಲಿನಿ ವಸಂತ:—ಕುದುರೆಯ ಮೂತ್ರದಲ್ಲಿ ಕಲ್ಲುಕಪ್ಪರಿಗೆಯ ಪುಡಿಯನ್ನು ಹಾಕಿ ೨೧ ದಿವಸ ಬಿಡಬೇಕು. ಅದರಲ್ಲಿ ಪ್ರತಿನಿತ್ಯ ಹೊಸ ಮೂತ್ರವನ್ನು ಹಾಕಿ, ಬಿಸಿಲಲ್ಲಿಟ್ಟು ಒಣಗಿಸಬೇಕು. ನಂತರ ಅದರ ವಸ್ತ್ರಗಾಳ ಚೂರ್ಣಮಾಡಿ, ೮ ತೊಲಿ ಆ ಚೂರ್ಣ, ೪ ತೊಲಿ ಬಿಳೇಮೆಣಸಿನಕಾಳ ಪುಡಿ, ಇಂಗಳಾರ ೮ ತೊಲಿ ಇವನ್ನೆಲ್ಲ ಕೂಡಿಸಿ ಅರೆದು ಅದರಲ್ಲಿ ೨ ತೊಲೆ ಆಕಳ ಬೆಣ್ಣೆ ಹಾಕಿ, ಚನ್ನಾಗಿ ಕೂಡುವಂತೆ ಅರೆಯತಕ್ಕದ್ದು; ಬಳಿಕ ಆ ಬೆಣ್ಣೆಯ ಜಿಗುಟು ಹೋಗುವವರಕ್ಕಾಗಿ ದಿನಾಲು ಲಿಂಬೀರಸ ಹಾಕಿ ತಿಕ್ಕಬೇಕು. ಹೀಗೆ ೧೦೦ ಲಿಂಬೀಹಣ್ಣಿನ ರಸ ಹಾಕಿ ಅರೆದ ಬಳಿಕ ೨ ಅವರೀಕಾಳ ಪ್ರಮಾಣದಷ್ಟು ಮಾತ್ರೆ ಕಟ್ಟಿಟ್ಟು ಒಂದೊಂದು ಮಾತ್ರೆಯನ್ನು ಮುಂಜಾವು-ಸಂಜೆಗಳಲ್ಲಿ ಜೇನ ತುಪ್ಪ ಹಿಪ್ಪಲೀ ಪುಡಿ ಹಾಕಿ ಕೊಡಬೇಕು. ಇದರಿಂದ ಜೀರ್ಣಜ್ವರ, ಸಂಗ್ರಹಣಿ, ಅತಿಸಾರ, ಕ್ಷಯ, ಅರ್ಶ, ಜ್ವರ, ಶೂಲಿ, ಅಗ್ನಿಮಾಂದ್ಯ, ವಾತವಿಕಾರ, ಪ್ರದರ, ರಕ್ತಾರ್ಶ, ವಿಷಮಜ್ವರ, ನೇತ್ರರೋಗ ಮುಂತಾದವುಗಳ ನಾಶವಾಗುತ್ತದೆ. ಪಥ್ಯ:—ಹಾಲು, ಅನ್ನ, ತುಪ್ಪ, ರೊಟ್ಟಿ, ಸಕ್ಕರೆ.

೧೬ ವರ್ಧಮಾನ ಪಿಪ್ಪಲೀ:—ಪಾವು ಆಕಳಹಾಲು, ಅರ್ಧಪಾವು ನೀರು ಇವುಗಳ ಮಿಶ್ರಣದಲ್ಲಿ ೫ ಹಿಪ್ಪಲಿಗಳನ್ನು ಹಾಕಿ ನೀರೆಲ್ಲ ಅಟ್ಟಿಸುವ ವರೆಗೆ ಕುದಿಸಿ, ಅದರಲ್ಲಿ ಕಲ್ಲುಸಕ್ಕರೆ ಹಾಕಿ ಕುಡಿಯಬೇಕು. ಅದರಲ್ಲಿ ದಿನಾಲು ೨-೨ ಹಿಪ್ಪಲಿಗಳನ್ನು ಹೆಚ್ಚು ಹಾಕುತ್ತ ಹೋಗಬೇಕು. ಇದರಂತೆ ಏಳು ದಿನ ಬೆಳಿಸಿ ತಕ್ಕೊಂಡು ಅದೇ ಪ್ರಮಾಣದಂತೆ ಇಳಿಸಿ ತಕ್ಕೊಳ್ಳತಕ್ಕದ್ದು. ಹಿಪ್ಪಲಿಗಳು ಬೆಂದು ಮೆತ್ತಗಾಗಿರುತ್ತವೆ. ತಡೆದರೆ ಅವನ್ನೆಲ್ಲ ಆ ಕಷಾಯದಲ್ಲಿ ಕಿವುಚಿ

ಕುಡಿಯುಬೇಕು. ಪೂರಾ ಹಿಪ್ಪಲಿಗಳು ತಡೆಯುದಾದರೆ ಅರ್ಧ ಹಿಪ್ಪಲಿಗಳನ್ನಾದರೂ ತಿವುಚಿ ಕುಡಿಯತಕ್ಕದ್ದು. ಅಷ್ಟೂ ತಡೆಯುದಿದ್ದರೆ ಅವನ್ನೆಲ್ಲಾ ಹೊರಗೆ ತೆಗೆದು ಜೇನತುಪ್ಪದಲ್ಲಿ ಅರೆದು ತಿನ್ನುವದು ನೆಟ್ಟಗೆ. ಅದರಿಂದ ಕೆಮ್ಮು, ಅಜೀರ್ಣ ಅರುಚಿ, ಉಬ್ಬಸ, ಹೃದ್ರೋಗ, ಪಾಂಡುರೋಗ, ಕ್ರಿಮಿ, ಮಂದಾಗ್ನಿ, ವಿಷಮಾಗ್ನಿ, ಜೀರ್ಣಜ್ವರ, ಕ್ಷಯ ಮುಂತಾದವುಗಳ ನಾಶವಾಗುವದು.

೧೭ ೪೨ ಉತ್ತುತ್ತಿಗಳನ್ನು ನೀರಲ್ಲಿ ತುಸ ನೆನೆಸಿ ಒರಸಿ ಸ್ವಚ್ಛ ಮಾಡಿ, ತುಂಬು ಹಾಗು ಬೀಜಗಳನ್ನು ತೆಗೆದು ಅವುಗಳಲ್ಲಿ ಒಡೇಸೋಪು ತುಂಬಿ ೨ ತೊಲಿ ಲವಂಗದ ಚೂರ್ಣ ಹಾಕಿ ಎಲ್ಲ ಕೂಡಿಸಿ ಕುಟ್ಟಿ ೪೨ ಗುಳಿಗೆ ಮಾಡಿ ೨೧ ದಿನ ಎರಡೂ ಹೊತ್ತು ೧-೧ ಗುಳಿಗೆ ತಕೊಳ್ಳತಕ್ಕದ್ದು.

೧೮ ಕುಂಟಿಗನ ಎಲೆಯ ರಸ ೧ ತೊಲಿ ತೆಗೆದು ಅದರಲ್ಲಿ ಜೇನುತುಪ್ಪ ಹಾಕಿ ೭-೧೪ ದಿವಸ ಕೊಡುವದು.

೧೯ ಆಕಳ ಹಾಲಲ್ಲಿ ಶುಂಠಿ, ಉತ್ತುತ್ತಿ, ದೀಪದ್ರಾಕ್ಷಿಗಳ ಚೂರ್ಣವನ್ನೂ ತುಪ್ಪವನ್ನೂ ಹಾಕಿ ಅಟ್ಟಿಸಿ ಕೊಡಬೇಕು.

೨೦ ತಾರೀಗಿಡದ ತೊಗಟೆಯನ್ನು ನೆರಳಲ್ಲಿ ಒಣಗಿಸಿ ಪುಡಿ ಮಾಡಿ ದಿನಾಲು ಸರತಿಗೆ ೬ ಮಾಸಿ ಚೂರ್ಣವನ್ನೂ ಅಷ್ಟೇ ಸಕ್ಕರೆಯನ್ನೂ ಹಾಲಲ್ಲಿ ಹಾಕಿ ಕಾಸಿ ಕುಡಿಯುವದು. ದಿವಸ ೨೧.

೨೧ ಅರೀಗಿಡದ ತೊಗಟೆ, ಬೇವಿನಸೊಪ್ಪು, ಬಾರೀಸೊಪ್ಪು, ಅತ್ತಿ, ಬಸರಿ ಇವುಗಳ ಸೊಪ್ಪು ಇವನ್ನೆಲ್ಲ ಪ್ರತಿಯೊಂದು ೩-೩ ತೊಲಿ ತಕೊಂಡು ಅಷ್ಟಮಾಂಶ ಕಷಾಯ ಮಾಡಿ ಪ್ರಹರಕೊಮ್ಮೆ ೩-೩ ತೊಲಿಯಂತೆ ೧೪ ದಿನ ಕೊಡಬೇಕು.

೨೨ ಜೀರ್ಣಜ್ವರ, ಅಶಕ್ತತೆ, ಹಾಗು ಬಾಣಂತಿಯ ವಿಕಾರಗಳಿಗೆ:೧ತೊಲಿ ಹಿಪ್ಪಲಿ, ೧ ತೊಲಿ ಲೋಹಭಸ್ಮ, ತ್ರಿಫಳಾ ಚೂರ್ಣ ೬ ತೊಲಿ ಇವನ್ನೆಲ್ಲ ಬೆರಿಸಿಟ್ಟು ಶಕ್ತಿಮಾನದಂತೆ ೩ ರಿಂದ ೬ ಮಾಸಿಯ ವರೆಗೆ ಆಕಳ ಇಲ್ಲವೆ ಆಡಿನ ಹಾಲಲ್ಲಿ ಪ್ರತಿಸಾರೆ ಕೊಡತಕ್ಕದ್ದು.

೨೩ ಅಡಸಾಲದ ಹಣ್ಣಾದ ಎಲಿ ೨ ತೊಲಿ, ನೆಲಗುಳ್ಳಬೇರು ೨ ತೊಲಿ ಇವುಗಳ ಕಷಾಯ ಮಾಡಿ ಅದರಲ್ಲಿ ತುಪ್ಪ ಅರ್ಧ ತೊಲಿ, ಬೆಲ್ಲ ಅರ್ಧ ತೊಲಿ ಹಾಕಿ ಕೊಡತಕ್ಕದ್ದು.

೨೪ ವ ಧಃಪಾಲಿನೀವಸಂತ:-೨ ತೊಲಿ, ಪ್ರವಾಳಭಸ್ಮ ೨ ತೊಲಿ, ಶುದ್ಧವಾದ ಇಂಗಳೀಕ, ಶುದ್ಧ ಕಲ್ಲುಕಪ್ಪುರಿಗೆ ೨ ತೊಲಿ, ೧ ತೊಲಿ ಮೆಣಸು, ೧ ತೊಲಿ ಹಿಪ್ಪಲಿ, ಯಾಲಕ್ಕೀ ಕಾಳು, ಕರ್ಪೂರ, ಗೌಲ, ವಾಯುವಡಂಗ,

ಬಳೆಗಾರ, ಕೋಷ್ಟ, ಕೇತರ ಇವೆಲ್ಲ ೧-೧ ತೊಲಿ ತಕ್ಕೊಂಡು, ವಸ್ತ್ರಗಾಳ ಚೂರ್ಣ ಮಾಡಿ, ಎಲ್ಲ ಪುಡಿಯನ್ನು ಕೂಡಿಸಿ ಅದರಲ್ಲಿ ೨ ತೊಲಿ ಬೆಣ್ಣಿ ಹಾಕಿ ಅರೆದು ಬಳಿಕ ಲಿಂಬೀ ಹುಳಿಯಲ್ಲಿ ೭ ದಿನ ಅರೆಯಬೇಕು. ೧-೨ ಗುಂಜಿ ತೂಕದ ಗುಳಿಗೆ ಮಾಡಿಡಬೇಕು. ಈ ಗುಳಿಗೆಗಳು ಜೀರ್ಣಜ್ವರ, ಕಾಮಣಿ, ಪಾಂಡುರೋಗ, ಕ್ಷಯ, ಅಶಕ್ತತೆ, ಕ್ರಿಮಿವಿಕಾರ ಇವುಗಳಿಗೆ ಯೋಗ್ಯ ಅನುಪಾನದೊಡನೆ ಕೊಡಬೇಕು.

---

## ೩೫ ಮಧುರಾ ಜ್ವರ (ಹೈತಿಗಿ)
## (ಮಂಥರ ಜ್ವರ-ಮುತ್ತು ಜ್ವರ)

ಕಾರಣ ಮತ್ತು ಲಕ್ಷಣ:—ಜ್ವರದಲ್ಲಿ ಹೆಚ್ಚು ತುಪ್ಪ ತಿಂದರೆ, ಜಡಾನ್ನವನ್ನುಂಡರೆ ಅಥವಾ ಕರಿದ ಪದಾರ್ಥ ತಿಂದರೆ, ಬೆವರು ಬರುವದನ್ನು ತಡೆದರೆ, ಅಂದರೆ ಶೀತೋಪಚಾರ ಮಾಡಿ ಇಲ್ಲವೆ ಗಾಳಿ ಬೀಸಿಕೊಂಡು ಬೆವರು ಒರುವದನ್ನು ನಿಲ್ಲಿಸಿದರೆ ಮುಂತಾದ ಕಾರಣಗಳಿಂದ ಈ ಜ್ವರ ಬರುತ್ತಿವೆ. ಈ ಮಧುರಾ ಜ್ವರದಲ್ಲಿ ದಾಹ, ಜ್ವರ, ಭ್ರಮ, ಮೂರ್ಛೆ, ತೃಷೆ, ಅತಿಸಾರ, ಓಕರಿಕೆ, ನಿದ್ರಾನಾಶ, ಬಾಯಿ, ನಾಲಿಗೆ, ಗಂಟಲುಗಳು ಒಣಗುವದು ಇವೆಲ್ಲ ಲಕ್ಷಣಗಳು ಇತರ ಜ್ವರಗಳಂತೆಯೇ ಇದ್ದು, ವಿಶೇಷವಾಗಿ ಒಡೆದುಕಾಣುವಂಥ ಚಿಹ್ನವೆಂದರೆ ಕುತ್ತಿಗೆಯ ಸುತ್ತುಮುತ್ತಲು ಬಿಳೀ ಸಾಸುವೆಯಂಥ ಗುಳ್ಳಿಗಳೇಳುತ್ತವೆ ಈ ಗುಳ್ಳಿಗಳು ಜ್ವರ ಬರಹತ್ತಿದ ೭-೧೦-೧೨ ದಿನಗಳಿಗೆ ಕಾಣಹತ್ತುತ್ತವೆ. ಆ ಗುಳ್ಳಿಗಳು ೨೧ ದಿನಗಳಿಗೆ ಪೂರ್ಣವಾಗಿ ಬೆಳೆಯುತ್ತವೆ ಮೊದಲು ಅವು ಕುತ್ತಿಗೆಯ ಮೇಲೆ ಕಾಣಹತ್ತಿ, ಬಳಿಕ ಎದೆ, ತೊಡೆ, ಕಾಲುಗಳ ಮೇಲೆ ಸಹ ಕಾಣಿಸಹತ್ತುತ್ತವೆ. ತದನಂತರ ಶರೀರದ ಇತರ ಅವಯವಗಳಲ್ಲೂ ಕಾಣಲಾರಂಭಿಸುವವು. ಅವೆಲ್ಲ ಬೆಳ್ಳಗಿರುತ್ತವೆ ಅಂತೇ ಈ ಜ್ವರಗಳಿಗೆ ಮುತ್ತುಜ್ವರವೆನ್ನುವದುಂಟು. ಈ ಜ್ವರದ ರೋಗಿಗಳು ಬಡಬಡಿಸುವದು, ಹುಚ್ಚುಚ್ಚಾರ ಮಾಡುವರಾದ್ದರಿಂದ ಈ ಜ್ವರಗಳಿಗೆ ಹುಚ್ಚುಮಧುರಾಜ್ವರವೆಂತಲೂ ಅನ್ನುತ್ತಾರೆ. ಎದೆ ಮತ್ತು ಹೊಟ್ಟೆಯ ಮೇಲೆ ಗುಳ್ಳಿಗಳೇಳುವಾಗ ಜ್ವರದ ವೇಗವು ಹೆಚ್ಚಾಗಿರುತ್ತದೆ. ಈ ಮಧುರಾ ಜ್ವರಗಳು ಬರುವಾಗ ಮೊದ ಮೊದಲು ಗೊಬ್ಬರವೇಳುವದೇನೋ ಎಂಬ ಸಂಶಯವುಂಟಾಗುತ್ತದೆ; ಆದರೆ ಗೊಬ್ಬರದ ಗುಳ್ಳಿಗಳು ಇದರಂತೆ ವಿರಳ ವಿರಳವಾಗಿರದೆ ಗುಂಪು ಗುಂಪಾಗಿರುತ್ತವೆ. ಈ ಜ್ವರದಲ್ಲಿ ಗೊಬ್ಬರದ ಜ್ವರದಂತೆ ದಾಹವಿರುತ್ತದಾದ್ದರಿಂದ ಇದಕ್ಕಾದರೂ ಉಷ್ಣೋಪಚಾರಗಳು ನಡೆಯುವದಿಲ್ಲ. ಈ ಜ್ವರಗಳು ವಿಶೇಷವಾಗಿ ಬೇಸಿಗೆಯ ಕಾಲದಲ್ಲಿ ಬರುತ್ತವೆ;

ಮತ್ತು ದೊಡ್ಡವರಿಗಿಂತ ಚಿಕ್ಕವರಿಗೇ ಇವು ಬರುವದು ಹೆಚ್ಚು. ಜ್ವರಗಳು ರಾತ್ರಿಯಲ್ಲಿ ಹೆಚ್ಚಾಗುತ್ತವೆ. ವೈದ್ಯರು ಈ ಜ್ವರಕ್ಕೆ ಪ್ರತ್ಯೇಕವಾಗಿ ಔಷಧಗಳನ್ನೇ ಯೋಜಿಸಿರುತ್ತಾರೆ; ಆದರೆ ಮಾಧವಾಚಾರ್ಯರು ಈ ಜ್ವರವನ್ನು ಪಿತ್ಥಜ್ವರದಲ್ಲಿ ಗಣಿಸಿರುವರು. ಯಾಕಂದರೆ ಇದರ ಲಕ್ಷಣಗಳೆಲ್ಲ ಬಹುಮಟ್ಟಿಗೆ ಪಿತ್ಥಜ್ವರದಂತೆಯೇ ಇರುತ್ತವೆ. ಗುಳ್ಳೆಗಳೇಳುವದೊಂದೇ ಪಿತ್ಥಜ್ವರಕ್ಕೂ ಇವಕ್ಕೂ ಹೆಚ್ಚು ಕಡಿಮೆಯು.

ಮಧುರಾಜ್ವರಕ್ಕೆ ಉಪಾಯಗಳು:—

೧ ಪಿತ್ಥಜ್ವರಕ್ಕೆ ಹೇಳಿದ ವಿಶೇಷ ಉಪಚಾರಗಳನ್ನು ಇದಕ್ಕೆ ಮಾಡಬೇಕು.

೨ ರಕ್ತಚಂದನ, ಬಾಳದಬೇರು, ಕರೇಬಾಳದಬೇರು, ಹವೀಜ, ಕಲ್ಲು ಸಬ್ಬಸಿಗಿ, ಶುಂಠಿ, ಜೇಕಿನಗಡ್ಡೆ ಇವುಗಳ ಕಷಾಯ ಕೊಡುವದು,

೩ ಬ್ರಹ್ಮದಂಡಿಯಬೇರಿನ ಒಂದು ಬಟ್ಟಲು ರಸವನ್ನು ಕುಡಿಸಿದರೆ ಕೂಡಲೆ ಗುಣವಾಗುತ್ತದೆ.

೪ ತ್ರಿಫಳ, ಲವಂಗ, ರಾಜಹಂಸಿ, ಆಲದಎಲೆ, ಶುಂಠಿ ಇವನ್ನು ಸಮ ಭಾಗ ತಕ್ಕೊಂಡು ಕಾಢೆ-ನಿಕಾಢೆ ಮಾಡಿ ಕೊಡಬೇಕು. ದಿವಸ ೭

೫ ಮಧುರಾಜ್ವರವು ಹೊರಬೀಳಲಿಕ್ಕೆ:—ಕಲ್ಲುಸಬ್ಬಸಿಗೆ ೩ ತೊಲಿ, ಬಜೆ, ೩ ತೊಲಿ ಇವುಗಳ ಅಷ್ಟಮಾಂಶ ಕಷಾಯ ಮಾಡಿ, ಅದರಲ್ಲಿ ಅರಿವೆಯನ್ನದ್ದಿ ಹೊಟ್ಟೆಯ ಮೇಲೆ ಹಾಕಬೇಕು. ಬೇಗನೆ ಜ್ವರ ಹೊರಬೀಳುತ್ತವೆ.

೬ ಆಡಜಾಲಿಕಾಯಿ(ಹುಚ್ಚಜಾಲಿ) ಮತ್ತು ಜೀರಿಗೆ ಇವುಗಳ ಸಮಭಾಗ ಅರ್ಧತೊಲಿ ಚೂರ್ಣವನ್ನು ಬಿಸಿನೀರಲ್ಲಿ ಕೊಡಬೇಕು.

೭ ದೀಪದ್ರಾಕ್ಷಿ, ಕಲ್ಲುಸಬ್ಬಸಿಗಿ, ಕಕ್ಕೀಕಾಯ ತಿಳಲು, ಕಟುಕರೋಣಿ, ಜೇಕಿನಗಡ್ಡೆ, ಬಾಳಹಿರಡಾ ಇವುಗಳ ಕಷಾಯ ಕೊಡಬೇಕು.

೮ ಮೊದಲು ಬೇವಿನಎಲೆ ಹಾಕಿ ಕಾಸಿದನೀರಿನಿಂದ ಸ್ನಾನಮಾಡಿಸಬೇಕು; ಅಂದರೆ ರೋಗಿಗೆ ಸುಖವೆನಿಸುವದಲ್ಲದೆ ಮೈತಿಂಡಿ ಏಳುವದಿಲ್ಲ; ಮತ್ತು ಜ್ವರವೂ ಕಡಿಮೆಯಾಗುತ್ತವೆ. ಜ್ವರದ ಅವಧಿಯು ಕಡಿಮೆಯಾಗುತ್ತದೆ ಕುತ್ತಿಗೆಯ ಮೇಲೆ ಗುಳ್ಳೆಗಳು ಕಾಣಹತ್ತಿದೊಡನೆ ಈ ಉಪಾಯ ಮಾಡತಕ್ಕದ್ದು.

೯ ದೀಪದ್ರಾಕ್ಷೆ, ಕಲ್ಲುಸಬ್ಬಸಿಗಿ, ಜೇಕಿನಗಡ್ಡೆ, ಉತ್ತುತ್ತಿ, ಅಮೃತಬಳ್ಳಿ ಇವುಗಳ ಕಷಾಯವನ್ನು ಮುಂಜಾವು-ಸಂಜೆಗಳಲ್ಲಿ ಕೊಡತಕ್ಕದ್ದು.

೧೦ ಕುಂಟಿಗನ ಬಳ್ಳಿಯ ಒಂದು ಎಲೆಯನ್ನು ಎರಡು ವೀಳ್ಯದೆಲೆಗಳೊಡನೆ ತಿನಬೇಕು. ದಿವಸ ೭.

೧೧ ಗಜ್ಜರೀ ಸೊಪ್ಪಿನ ಒಂದು ಒಟ್ಟಿಲು ರಸ ಕುಡಿಯಬೇಕು. ಸಣ್ಣ

ವರಿಗೆ ಕಡಿಮೆ ಕೊಡಬೇಕು. ದಿವಸ ೭. ಹೆಂಗಸರಿಗೆ ಈ ಔಷಧವನ್ನು ಕೊಡ ಕೂಡದು.

೧೨ ಜೋಳದ ಅರಳಿನ ಕಷಾಯದಲ್ಲಿ ಸಕ್ಕರೆ ಹಾಕಿ ಕೊಡುವದು.

೧೩ ಹುಚ್ಚುಖುಬ್ಬು ರೋಗಿಯ ತಲೆಗಿಂಬಿಗೆ ಇಡಬೇಕು. ಈ ಖುಬ್ಬನ್ನು ತಿಂದರೆ ಬವಳಿ ಬರುವದಾದ್ದರಿಂದ ಇದಕ್ಕೆ "ಹುಚ್ಚು ಖುಬ್ಬು" ಎಂಬ ಹೆಸರು ಬಿದ್ದದೆ.

೧೪ ತೆಂಗಿನ ಹೊಸ ಚಿಪ್ಪನ್ನು ಆಕಳ ಸೆಗಣಿಯ ರಸದಲ್ಲಿ ತೆಯ್ದು ಕಸಕಸಿ ಬೆರಿಸಿ ಕೊಟ್ಟರೆ ಈ ಮಧುರಾಜ್ವರ ನಿಲ್ಲುತ್ತವೆ.

೧೫ ತುಳಸೀರಸ, ಆಕಳ ಸೆಗಣೀರಸ, ಜೇರಿಗಿ, ಸತ್ತ ನೊಣ ಇವುಗಳನ್ನ ರೆದು ಕೊಡುವದು; ಇಲ್ಲವೆ ಸಾರಂಗದ ಕೋಡು, ರಕ್ತಚಂದನ, ಜೇರಿಗೆ, ಜೇಕಿನಗಡ್ಡೆ ಇವುಗಳನ್ನು ಆಕಳ ಸೆಗಣಿಯ ರಸದಲ್ಲಿ ಅರೆದು ಕೊಡುವದು. ಇದ ರಿಂದ ಮಧುರಾಜ್ವರ ನಿಲ್ಲುತ್ತವೆ.

೧೬ ಕೋಡುಮುರುಕನ ತೊಗಟೆ, ಕಲ್ಲುಸಬ್ಬಸಿಗಿ, ಯಾಲಕ್ಕಿ, ಕಮ ಲಾಕ್ಷ ಇವನ್ನೆಲ್ಲ ಆಕಳ ಸೆಗಣಿಯ ರಸದಲ್ಲಿ ಅರೆದು ಕೊಟ್ಟರೆ ಮಧುರಾ ಜ್ವರ ನಿಲ್ಲುತ್ತವೆ.

೧೭ ಕತ್ತೆಯ ಲದ್ದಿಯ ಕಷಾಯ ಮಾಡಿ ಕೊಡತಕ್ಕದ್ದು.

೧೮ ಎರಡು ತೊಲಿ ಎಮ್ಮೆಯ ಹಾಲಲ್ಲಿ ಉದ್ದಿನಕಾಳಷ್ಟು ಗೋರೋ ಚನವನ್ನು ಹಾಕಿ ಕೊಟ್ಟರೆ ಜ್ವರ ಹೊರಬೀಳುತ್ತವೆ; ಮತ್ತು ಗೊಬ್ಬರದ ಸಂಶಯ ನಿಲ್ಲುವದಿಲ್ಲ.

೧೯ ರುದ್ರಾಕ್ಷಿಯನ್ನು ಜೇನತುಪ್ಪದಲ್ಲಿ ತೆಯ್ದು ನೆಕ್ಕಿಸಬೇಕು; ಇಲ್ಲವೆ ದೊಡ್ಡ ಅಜವಾನ(ಅಜಮೋದ)ದ ಚೂರ್ಣವನ್ನು ಜೇನತುಪ್ಪದೊಡನೆ ಕೊಡ ಬೇಕು; ಅಥವಾ ಜೇಕಿನಗಡ್ಡೆ, ದೀಪದ್ರಾಕ್ಷಿ, ಕಲ್ಲುಸಬ್ಬಸಿಗೆಗಳ ಕಷಾಯ ದಲ್ಲಿ ಜೇನತುಪ್ಪ ಹಾಕಿ ಕೊಡಬೇಕು. ನೊಣ ಕೊಂದು ಬೆಲ್ಲದಲ್ಲಿ ಹಾಕಿ ಕೊಡಬೇಕು.

೨೦ ಆಲದ ಎಲೆ, ಸೆಜ್ಜೇಹಿಟ್ಟು ಇವುಗಳ ಕಷಾಯದಲ್ಲಿ ಬೆಲ್ಲ ಹಾಕಿ ಕೊಡುವದು.

೨೧ ಪುದೀನ, ಅಡವೀ (ಬಿಳೇ) ತುಳಸಿ, ಕರೇ ತುಳಸಿ ಇವುಗಳ ರಸ ತೆಗೆದು ಕಲ್ಲುಸಕ್ಕರೆ ಹಾಕಿ ಕೊಡುವದು; ಅಥವಾ ನೆಲಗುಳ್ಳ ಕಷಾಯದಲ್ಲಿ ಜೇನತುಪ್ಪಹಾಕಿ ಕೊಡತಕ್ಕದ್ದು.

೨೨ ವಿಷಮಜ್ವರ, ಮಧುರಾಜ್ವರ ಹಾಗು ಸನ್ನಿಪಾತಜ್ವರಗಳಲ್ಲಿ ಹೆಚ್ಚಾಗಿ

ತಲೆ ಕಾಯ್ದರೆ, ಮಿದುಳು ಕೆಟ್ಟು ರೋಗಿಯು ಎಚ್ಚರದಪ್ಪುವ ಸಂಭವವಿರುತ್ತ ಆದುದರಿಂದ ಬರ್ಫದ ಚೀಲವನ್ನು ತಲೆಯಮೇಲಿಡಬೇಕು; ಇಲ್ಲವೆ ಒಳ್ಳ ನೀರಿನಲ್ಲಿ ಅರಿವೆಯನ್ನದ್ದಿ ತಲೆಯಮೇಲಿಡಬೇಕು. ಸುಖವಾಗುವದು. ಇದರಿ ತಲೆಯಲ್ಲಿ ರಕ್ತ ಸಂಚಯವಾಗುವದು ಕಡಿಮೆಯಾಗಿ, ತಲೆಗೆ ತಂಪಾಗುತ್ತ ಮತ್ತು ವಾಯುವಿಕಾರವಾಗುವ ಅಂಜಿಕೆಯು ನಿವಾರಣವಾಗುತ್ತದೆ. ಈ ದಲ್ಲಿ ತಲೆಯು ಎಷ್ಟು ಹೆಚ್ಚು ತಣ್ಣಗಿದ್ದೀತೋ ಅಷ್ಟು ಹಿತಕರವು.

---

## ೩೬ ಕೃಷ್ಣ ಮಧುರಾ ಜ್ವರ.

ಲಕ್ಷಣ:—ಮೈಮೇಲೆ ಜ್ವರ, ಕಣ್ಣಿಗೆ ಮಬ್ಬು, ಹಲ್ಲು, ತುಟಿ, ಕುತ್ತಿ ಮುಖ, ನಾಲಿಗೆ, ಮೂಗು ಇವೆಲ್ಲ ಕಪ್ಪಾಗುವದು, ಕಣ್ಣು ಚಿತ್ರವರ್ಣವಾ ವದು. ಈ ಜ್ವರಗಳು ಕ್ವಚಿತ್ತಾಗಿಯೇ ಬರುತ್ತಿರುತ್ತವೆ. ಇತರ ಉ ಲಕ್ಷಣಗಳೆಲ್ಲ ಮಧುರಾಜ್ವರದಂತೆಯೇ ಇರುತ್ತವೆ.

ಉಪಾಯಗಳು:—

೧ ಇಂಗು, ಆವಿಯಬೆನ್ನು, ಯಾಲಕ್ಕಿ, ತುಳಸೀ ಎಲೆ, ತೆಂಗಿನ ಚಿ ಮಾವಿನ ಕೊಪ್ಪ,(ಬೀಜ) ಕಸಕಸಿ ಈ ಔಷಧಗಳನ್ನು ಸಮಭಾಗ ತಕ್ಕೊಂ ಆಕಳ ಸೆಗಣಿಯ ರಸದಲ್ಲಿ ತೆಯ್ದು ಅರೆದು (ಅಂದರೆ ಚಿಪ್ಪು ತೆಯ್ದು ಉಳಿದವ ಅರೆಯಬೇಕು.) ನೋಸಿ ಕುಡಿಸಬೇಕು. ಇದರಿಂದ ಕೃಷ್ಣಮಧುರಾಜ ನಿಲ್ಲುತ್ತವೆ.

೨ ಹಣಬೇಹುಲ್ಲು, ಬೇವಿನಕಡ್ಡಿ ಇವುಗಳ ೪ ತೊಲಿ ಕಷಾಯ ಕುಡಿ ವದು. ಪಥ್ಯ:—ಅನ್ನ, ತೊಗರೀಬೇಳೆಯ ಉಪ್ಪುಕಾರವಿಲ್ಲದ ಸಾರು ಇ ಪದಾರ್ಥಗಳು ವರ್ಜ್ಯ.

೩ ಬೇವಿನಕಡ್ಡಿ, ಅರಿಷಿಣ, ಒಡೇಸೋಪು, ಹವೀಜ ಇವನ್ನು ರಾ ನೀರಲ್ಲಿ ನೆನೆಹಾಕಿ, ಬೆಳಿಗ್ಗೆ ಅರೆದು ಸೋಸಿ ಕುಡಿಸಬೇಕು.

೪ ಕರೀತುಳಸಿ, ಬಿಳೀತುಳಸಿ, ಪುದೀನ ಕಲ್ಲುಸಬ್ಬಸಿಗಿ, ಇವುಗಳ ಇಲ್ಲವೆ ಕಷಾಯ ಕೊಡುವದು. ದಿವಸ ೭

---

## ೩೭ ಕೃಷ್ಣಮೂತ್ರಜ್ವರ.

ಲಕ್ಷಣ:—ಮೂತ್ರವು ಕಪ್ಪುಬಣ್ಣದ್ದೂ, ರಾಡಿಯೂ ಇರುತ್ತವೆ. ಮೂ ಕಾಲಕ್ಕೆ ಅವಯವವು ಸೇದಹತ್ತಿ ಮೂತ್ರವು ಅತಿಶಯವಾಗುವವು; ಇಲ್ಲವೆ ಒಂ ಸ್ವಲ್ಪ ಆಗುವವು; ಮತ್ತು ಮೇಲಿಂದಮೇಲೆ ಆಗುವವು. ಯಕೃತವು ಕೆಟ್ಟೀ

ತ್ತದೆ. ಈ ರೋಗವು ಯಕೃತ ಕೆಡುವದರಿಂದಲೇ ಆಗುತ್ತಿರುತ್ತದೆ.

ಉಪಾಯುಗಳು.

೧ ಒಂದು ತೊಲಿ ಕಟುಕರೋಣಿ, ಅಚ್ಛೇರು ನೀರಲ್ಲಿ ಹಾಕಿ ಚತ.ರ್ಥಾಂಶ ಕಷಾಯ ಮಾಡಿ, ಸೋಸಿ ಅದರಲ್ಲಿ ಒಂದು ತೊಲಿ ಸಕ್ಕರಿ ಹಾಗು ಆರೋಗ್ಯ ವರ್ಧಿನಿ ಮಾತ್ರೆ ತೆಯ್ದು ಕೊಡುವದು. ಪಥ್ಯ:—ಹಾಲು-ಅನ್ನ. ಆರೋಗ್ಯ ವರ್ಧಿನಿ ಮಾತ್ರೆ ಮಾಡುವ ಕ್ರಮವನ್ನು ರಸರತ್ನ ಸಮುಚ್ಚಯದ ೨೦ನೇ ಅಧ್ಯಾಯದಲ್ಲಿ ಹೇಳಿದೆ

೨ ಯಕೃತ ಗುಣವಾಗುವ ಔಷಧಗಳನ್ನು ಕೊಡಬೇಕು.

೩ ಯಕೃತಕ್ಕೆ ಬಾಹ್ಯಲೇಪ:—ನುಗ್ಗಿ ಕೊಗಟಿ, ಸಾಸುವೆ, ಬಿಳೇಗಣಜಲಿ ಬೇರು, ಕುಂಠಿ, ದೇವದಾರು ಇವುಗಳ ಚೂರ್ಣವನ್ನು ಮಜ್ಜಿಗೆಯಲ್ಲಿ ಕಲಿಸಿ ಯಕೃತಕ್ಕೆ ಬಡಿಯಬೇಕು.

---

## ೩೮ ಕೃಷ್ಣಜ್ವರ.

ಈ ಜ್ವರವು ನಮ್ಮಲ್ಲಿರಲಿಲ್ಲ; ಆದರೆ ಇತ್ತೀಚೆಗೆ ಇಜಿಪ್ತ (ಅಫ್ರಿಕಾ), ಅಮೇರಿಕೆಗಳಿಗೆ ಹೋಗಿಬರುವ ವ್ಯವಹಾರವು ಸುರುವಾದಾಗಿನಿಂದ, ಸಂಸರ್ಗದೋಷದಿಂದ ಇತ್ತ ಕಡೆಗೂ ಈ ಸಾಂಸರ್ಗಿಕ ರೋಗವು ಒಮ್ಮೊಮ್ಮೆ ಬರುತ್ತದೆ; ಆದರೂ ಈ ಜ್ವರವು ನೀರಾವರಿಯ ಸ್ಥಳದಲ್ಲಿ ಮತ್ತು ಅತಿ ಶೈತ್ಯಪ್ರದೇಶದಲ್ಲಿ ಅಂದರೆ ವಿಶೇಷವಾಗಿ ಆಸಾಮದಲ್ಲಿಯೂ, ದಾರ್ಜಿಲಿಂಗ, ತೆರಾಯಿ, ಮಿರತ, ಅಮೃತಸರ ಮುಂತಾದೆಡೆಗಳಲ್ಲಿಯೂ ಕಂಡು ಬರುತ್ತದೆ. ಈ ಜ್ವರವು ತೀವ್ರ ಸ್ಪರ್ಶ ಸಂಚಾರಿತವಾಗಿರುತ್ತದೆ. ಈ ರೋಗದಿಂದ ರಕ್ತದೊಳಗಿನ ಕೆಂಪು ಕಣಗಳು ಬಹು ತೀವ್ರ ನಾಶವಾಗುತ್ತವೆ. ಅದರಿಂದ ಮನುಷ್ಯನು ಕ್ಷಿಪ್ರದಲ್ಲಿಯೇ ಕಶ್ರಗಾಗುತ್ತಾನೆ ಹೆಚ್ಚಾಗಿ ಛಳಿಬಂದು ಜ್ವರ ಬರುತ್ತವೆ; ಆದರೆ ಮಲೇರಿಯಾ (ಛಳಿಜ್ವರ)ಕ್ಕಿಂತ ಇದು ತೀರ ಭಿನ್ನವಾಗಿದೆ ಕೃಷ್ಣಜ್ವರದಲ್ಲಿ ವಾಂತಿಯಾಗುತ್ತದೆ; ಕಾಮಣಿಯಾಗುತ್ತದೆ; ಚರ್ಮದ ಬಣ್ಣವು ಕಪ್ಪಾಗುತ್ತದೆ; ಅಥವಾ ಹಳದೀ-ಕಂದೀ ವರ್ಣದ್ದಾಗುತ್ತದೆ. ಮೂತ್ರದಲ್ಲಿ ಒಂದು ಬಗೆಯ ಕ್ರಿಮಿಗಳಿರುತ್ತವೆ; ಆದರೆ ಮಲೇರಿಯಾದ ಜಂತುಗಳಂತೆ ಎಲ್ಲವೂ ಒಂದೇ ಜಾತಿಯವಿರುವದಿಲ್ಲ. ಅವು ಭಿನ್ನಭಿನ್ನ ಪ್ರಕಾರದವಿರುತ್ತವೆ. ಈ ಜ್ವರಗಳು ಬೇಸಿಗೆಯಲ್ಲಿ ಅಥವಾ ಮಳೆಗಾಲ ತೀರಿ ಹವೆಯು ಒಮ್ಮೆಲೆ ಬದಲಾಯಿತೆಂದರೆ ಬರುತ್ತವೆ. ಈ ಜ್ವರದ ಕಾಲಾವಧಿಯನ್ನು ನಿಶ್ಚಯವಾಗಿ ಹೇಳಬರುವಂತಿಲ್ಲ; ಆದರೂ ಸರ್ವಸಾಧಾರಣವಾಗಿ ಇವು ಎಂಟು ದಿನ ಬರುವವು; ಎಷ್ಟೋ ರೋಗಿಗಳು ಇದರಿಂದ ತಿಂಗಳುಗಟ್ಲೆ ಬಳಲುವದನ್ನು ಕಾಣಬಹುದು.

ಈ ಜ್ವರ ಬರುವ ಮುಂಚೆ ೧-೨ ದಿನ ತಲೆನೋವೇಳುತ್ತದೆ. ಮನಸ್ಸಿಗೆ ಸ್ವಸ್ಥವೆನಿಸುವದಿಲ್ಲ. ಓಕರಿಕೆ ಬರುತ್ತದೆ. ಬಾಯಿಗೆ ನೀರೊಡೆಯುತ್ತದೆ. ಇವು ಶೀತಜ್ವರದಂತೆ ಆಕಸ್ಮಿಕವಾಗಿ ಬರುತ್ತವೆ. ಇವೂ ಹೆಚ್ಚಾಗಿ ಚಳಿ ಬಂದು ಬರುತ್ತವೆ. ಆದರಿಂದ ಚಳಿಜ್ವರದಂತೆಯೇ ಇವುಗಳ ಭಾಸವಾಗುತ್ತದೆ; ಮತ್ತು ವೈದ್ಯರೂ ಮೋಸಹೋಗುತ್ತಾರೆ. ಮೊದಲು ಚಳಿ ಬಂದು ನಂತರ, ೧೦೩-೧೦೪-೧೦೫ ಅಂಶಗಳ ವರೆಗೆ ಜ್ವರ ಬರುತ್ತವೆ. ನೀರಡಿಕೆಯಾಗುತ್ತದೆ. ವಾಂತಿಯಾಗಹತ್ತುತ್ತದೆ. ನೀರು ಕೂಡ ಹೊಟ್ಟೆಯಲ್ಲಿ ನಿಲ್ಲದಾಗುತ್ತವೆ ವಾಂತಿಯೊಳಗೆ ಪಿತ್ತ ಬೀಳುತ್ತದೆ. ಅದು ಅಂಪಿಣವರ್ಣದ್ದಾಗಿರುತ್ತದೆ. ಬೆನ್ನೆಲವುಗಳಲ್ಲಿಯೂ,(ತ್ರೀಕಾಸ್ಥಿ)ಸಂದುಗಳಲ್ಲಿಯೂ ಬಹಳ ನೋವುಂಟಾಗುತ್ತದೆ. ಯಕೃತ ಮತ್ತು ಪ್ಲೀಹಗಳ ವೃದ್ಧಿಯಾಗುತ್ತದೆ; ಮತ್ತು ನೋಯುತ್ತವೆ. ಮೂತ್ರವು ಕಪ್ಪುಮಿಶ್ರಿತ ಕೆಂಪು ಹಾಗು ಮಂದಗಾಗಿರುತ್ತವೆ. ಜ್ವರವೇರುತ್ತವೆ. ಕ್ಷಣದಲ್ಲಿ ಇಳಿದು ಮತ್ತೆ ಏರುತ್ತವೆ; ಆದರೆ ಈ ಲಕ್ಷಣಗಳು ಸರ್ವಸಾಧಾರಣವಾಗಿ ಆಗುತ್ತವೆ. ಮೂತ್ರವನ್ನು ದೂರಿನಿಂದ ನೋಡಿದರೆ ಕಪ್ಪಾಗಿ ಕಾಣುತ್ತವೆ; ಹೆಚ್ಚಾಗಿ ಬಿಟ್ಟಿಸಿ ನೋಡಿದರೆ ಕೆಂಪುಮಿಶ್ರಿತ ಹಳದೀ (ಕಂದೀ) ವರ್ಣದ ಕೆನೆಯು ಕೆಳಗೆ ಕಾಣುತ್ತದೆ. ಅದನ್ನು ಬಹಳ ಹೊತ್ತಿನವರೆಗಿಟ್ಟರೆ ಕೆಂಪು ಕೆನೆ ಕಾಣುತ್ತದೆ.

ಸಾಧ್ಯಾಸಾಧ್ಯ ವಿಚಾರ:—ಈ ಜ್ವರದಲ್ಲಿ ನಾನಾ ಬಗೆಯ ಭಾವನೆಗಳೂ ಅಂದರೆ ಇತರ ಎಲ್ಲ ಜ್ವರಗಳೊಳಗಿನ ಲಕ್ಷಣಗಳೂ ಕಂಡು ಬರುತ್ತವೆ; ಆದರೆ ಎಲ್ಲ ರೋಗಿಗಳಿಗೂ ಎಲ್ಲ ಭಾವನೆಗಳೂ ಕಾಣುವದಿಲ್ಲ. ಕೆಲವರಿಗೆ ಕೆಲವು, ಬೇರೆಯವರಿಗೆ ಮತ್ತೆ ಕೆಲವು ಹೀಗೆ ತೋರುತ್ತವೆ. ಆದರಿಂದ ಈ ರೋಗದ ಪರೀಕ್ಷೆ ಮಾಡುವದಕ್ಕೆ ಕಠಿಣವೆನಿಸುತ್ತದೆ. ಆದರೂ ಹೆಚ್ಚಿನ ಶಕ್ತಿಪಾತ, ನಾಡಿಗಳ ವಿಷಮ ಹಾರುವಿಕೆ, ಛಿನ್ನ ಇಲ್ಲವೆ ಊರ್ಧ್ವಶ್ವಾಸ, ಬಿಕ್ಕು, ಮಬ್ಬು, ಮೋಹ, ಭ್ರಮೆ, ಅಸ್ವಸ್ಥತೆ ಈ ಲಕ್ಷಣಗಳು ಹೆಚ್ಚಾದವೆಂದರೆ ೨-೩ ಅಥವಾ ೬-೭ ದಿನಗಳಲ್ಲಿ ಆ ರೋಗಿಯು ಸಾಯುತ್ತಾನೆ; ಆದರೆ ಇದಕ್ಕೆ ಸೌಮ್ಯ ಲಕ್ಷಣದ ಅಂದರೆ ಅರಿ ಜ್ವರ ಬರುತ್ತಿದ್ದರೆ, ದೋಷಗಳ ಪ್ರಮಾಣವು ದಿನದಿನಕ್ಕೆ ಕಡಿಮೆಯಾಗುತ್ತಾ ನಡೆದರೆ, ಮನಃಸ್ವಾಸ್ಥ್ಯವುಂಟಾದರೆ ಆ ರೋಗಿಯು ಬದುಕುತ್ತಾನೆಂದು ತಿಳಿಯಬಹುದು.

ಮಲೇರಿಯಾ(ಚಳಿಜ್ವರಕ್ಕೆ) ಕ್ವಿನಾಯಿನದಿಂದ ಗುಣ ಬರುತ್ತದೆ; ಆದರೆ ಕೃಷ್ಣಜ್ವರಕ್ಕೆ ಕ್ವಿನಾಯಿನದ ಉಪಯೋಗವಾಗುವದಿಲ್ಲ; ಇಷ್ಟೇ ಅಲ್ಲ, ಅದರಿಂದ ಜ್ವರದ ವೇಗವು ಹೆಚ್ಚುತ್ತದೆ. ಪ್ರತಿಯೊಂದು ಸರತಿ (ಪಾಳಿ)ಗೆ ಮೊದಲಿ

ಗಿಂತ ಸೌಮ್ಯ ಲಕ್ಷಣಗಳು ತೋರಹತ್ತಿದರೆ ಸಾಧ್ಯವೆಂತಲೂ, ಹೆಚ್ಚಾದ ಲಕ್ಷಣಗಳು ಕಂಡರೆ ಕಷ್ಟಸಾಧ್ಯ ಅಥವಾ ಅಸಾಧ್ಯವೆಂತಲೂ ತಿಳಿಯತಕ್ಕದ್ದು.

ಕೃಷ್ಣಜ್ವರಕ್ಕೆ ಉಪಾಯ:—

೧ ಅಮೃತಬಳ್ಳಿಯ ರಸದಲ್ಲಿ ಜೇನತುಪ್ಪ ಅಥವಾ ಸಕ್ಕರೆ ಹಾಕಿ ಕೊಡುವದು

೨ ರಾಜಚಂಡೇಶ್ವರ, ಪಂಚವಕ್ತ್ರ, ಪಂಚಸೂತ, ನವಜ್ವರೇಭಸಿಂಹ, ತ್ರಿಭುವನಕೀರ್ತಿ, ಕಾಲಕೂಟ, ಜ್ವರಮುರಾರಿ ಇವುಗಳಲ್ಲಿ ಯಾವುದೊಂದು ಮಾತ್ರೆಯನ್ನು ಪ್ರಕೃತಿಧರ್ಮಕ್ಕನುಗುಣವಾಗಿ ಅನುಪಾನದಲ್ಲಿ ಹೆಚ್ಚು-ಕಡಿಮೆ ಮಾಡಿ ಕೊಡಬೇಕು.

೩ ಮೂತ್ರದ ವಿಕೃತ ಪರಿಣಾಮಕ್ಕೆ:—ಉಶೀರಾಸವ, ಉಸೀರಾದಿ ಕಷಾಯ ಇಲ್ಲವೆ ಕುಶಕಾಶಾದಿಕಷಾಯಗಳನ್ನು ಕೊಡುವದು.

೪ ಶಠ್ಯಾದಿಕಷಾಯವನ್ನು ಕೊಡುವದು. (ಕಚೂರ, ಶುಂಠಿ, ದೇವ ದಾರು, ಕಲ್ಲುಸಬ್ಬಸಿಗಿ, ನೆಲಗುಳ್ಳ, ಕಟುಕರೋಹಿಣಿ, ನೆಲಬೇವು, ಜೇಕಿನಗಡ್ಡೆ, ನೆಲಿಂಗಳ, ) ಇವುಗಳ ಕಷಾಯದಲ್ಲಿ ಜೇನತುಪ್ಪ ಹಾಕಿ ಕೊಡಬೇಕು.

೫ ಬರೇ ಬೇವಿನತೊಗಟೆಯ ಕಷಾಯದಲ್ಲಿ ಮೆಣಸಿನ ಪುಡಿ ಹಾಕಿಕೊಡು ವದು. ಈ ಉಪಾಯವು ಎಲ್ಲಕ್ಕೂ ಮಿಗಿಲಾದದ್ದು.

೬ ಅಡಸಾಲ, ಬೇವು, ನೆಲಗುಳ್ಳ, ಕಲ್ಲುಸಬ್ಬಸಿಗಿ, ಪಟಪತ್ರಿಪಾಷಾಣ ಭೇದಿ, ನೆಗ್ಗಿಮುಳ್ಳು, ಶುಂಠಿ ಇವುಗಳ ಕಷಾಯದಲ್ಲಿ ಜೇನತುಪ್ಪ ಇಲ್ಲವೆ ಸಕ್ಕರಿ ಹಾಕಿ ಕೊಡುವದು.

ಪಥ್ಯ:—ಗಟ್ಟಿಯಿಲ್ಲದಗಂಜಿ, ಸಾಬೂಅಕ್ಕಿ, ಸೀಮಜ್ಜಿಗೆ, ಸಕ್ಕರಿ, ಕಿತ್ತಳಿ ಮುಂತಾದ ಹಣ್ಣುಗಳು, ಸಾಕಷ್ಟು ನಿದ್ದೆ, ಕಾದಾರಿದ ನೀರು.

ಅಪಥ್ಯ:—ಎಲ್ಲ ಬಹ್ವನ್ನ ಪದಾರ್ಥಗಳು, ದ್ವಿದಳಧಾನ್ಯಗಳು, ಪಚನಕ್ಕೆ ತ್ರಾಸವಾಗುವಂಥ ಜಡಾನ್ನ, ಹುಳಿ, ಎಣ್ಣೆ, ಖಾರ ಪದಾರ್ಥಗಳು.

---

## ೩೯ ದುರ್ಜಲ ಜನಿತ ಜ್ವರ.

ಲಕ್ಷಣ:—ಪ್ರವಾಸದಲ್ಲಿ ದಿನಾಲು ಹೊಸ ಹೊಸ ನೀರು ಕುಡಿಯುವದ ರಿಂದ, ಅಡವಿಯೊಳನ ಇಲ್ಲವೆ ಇತರ ಬಾವಿ-ಕೆರೆಯೊಳಗಿನ ನೀರಲ್ಲಿ ಒಣಗಿದ ಎಲೆ ಬಿದ್ದು ಕೊಳೆತ ಹಾಗು ಅಡವಿಯೊಳಗಿನ ಎಷ್ಟೋ ವಿಷಾದಿ ಗಿಡಗಂಟಿಗಳ ಬೇರುಗಳೊಳಗಿಂದಲೂ ಕೊಳೆತ ಪದಾರ್ಥಗಳೊಳಗಿಂದಲೂ ಹರಿದು ಬರುವಂಥ ನೀರನ್ನು ಕುಡಿದರೆ ಇಲ್ಲವೆ ಸ್ನಾನ ಮಾಡಿದರೆ, ಅಥವಾ ಒಟ್ಟಿಗಳನ್ನು ಮಾಡಿ

ಮಾಡಿದರೆ ಮುಂತಾದ ಕಾರಣಗಳಿಂದ ಈ ಜ್ವರವುಂಟಾಗುತ್ತವೆ. ಇದಕ್ಕೆ ಇಂಗ್ಲಿಷಿನಲ್ಲಿ "ಮಲೇರಿಯಸ್ ಫೀವರ್" ಅನ್ನುತ್ತಾರೆ. ಇದರ ಲಕ್ಷಣಗಳು ಸರ್ವಸಾಧಾರಣವಾಗಿ ಚಳಿಜ್ವರದಂತೆಯೇ ಇರುತ್ತವೆ; ಆದರೂ ಅವ್ಯವಸ್ಥೆಯ ಮೂಲಕ ಈ ಜ್ವರಗಳು ಒಮ್ಮೆಲೆ ವಿಕೋಪಕ್ಕೆ ಹೋಗುವದೂ ಉಂಟು. ಆ ಬಗ್ಗೆ ಚೆನ್ನಾಗಿ ನಿದಾನ ಮಾಡಿ ಔಷಧ ಕೊಟ್ಟರೆ ಸಾಧ್ಯವಾಗುತ್ತದೆ.

ಪ್ರೊ. ರಾಸ ಎಂಬವರು ಮಲೇರಿಯಾಪಾರಾಸಾಯಿಟ (ಚಳಿಜ್ವರ) ಜಂತುಗಳ ಶೋಧ ಹಚ್ಚಿ ಸಿದ್ಧ ಮಾಡಿರುವದೇನಂದರೆ, ಒಂದು ಬಗೆಯ ಗುಂಗಾಡಗಳ ಕಡಕದಿಂದ ಮನುಷ್ಯನ ಶರೀರದಲ್ಲಿ ಆ ಜಂತುಗಳ ಪ್ರವೇಶವಾಗಿ ಚಳಿಜ್ವರವನ್ನುಂಟು ಮಾಡುತ್ತವೆ. ಈ ಶೋಧ ಹಚ್ಚಿ ಪ್ರೊ. ರಾಸ ಇವರು ಲೋಕದವರ ಮೇಲೆ ಮಹದುಪಕಾರಗಳನ್ನು ಮಾಡಿರುತ್ತಾರೆ. ಈ ಶೋಧ ದಿಂದ ಹಿಮಜ್ವರದ ಬಾಧೆಯ ನಿಜವಾದ ಕಾರಣವು ಗೊತ್ತಾಗಿ ಅದಕ್ಕೆ ಖಾತ್ರಿಯ ಉಪಚಾರಗಳನ್ನು ಮಾಡಲಿಕ್ಕೆ ಶಕ್ಯವಾಗಿರುತ್ತದೆ. ಎಲ್ಲ ಜ್ವರಗಳೂ, ವಿಶೇಷ ವಾಗಿ ಚಳಿಜ್ವರ, ಸರತಿಯ ಜ್ವರಗಳು, ಪ್ಲೇಗು ಮುಂತಾದವು ವಿಷಯುಕ್ತ ಕೃಮಿಗಳಿಂದಲೇ ಉಂಟಾಗುತ್ತವೆಂಬದು ಮಾಯಕ್ರಾಸಕೋಪ (ಸೂಕ್ಷ್ಮ ದರ್ಶಕ ಯಂತ್ರ)ದಿಂದ ಸ್ಪಷ್ಟವಾಗಿರುತ್ತದೆ. ಈ ಬಗ್ಗೆ ಇನ್ನು ಸಂಶಯ ತಾಳುವ ಕಾರಣವುಳಿಯಲಿಲ್ಲ; ಆದುದರಿಂದ ಎಲ್ಲ ವೈದ್ಯರೂ ಆ ಧೋರಣದಿಂದಲೇ ಔಷಧೋಪಚಾರಗಳನ್ನು ಕೈಕೊಳ್ಳಬೇಕು. ನಮ್ಮ ಆಯುರ್ವೈದ್ಯಕದೊಳಗಿನ ಔಷಧಗಳ ಗುಣಧರ್ಮವನ್ನು ಒರೆಗೆ ಹಚ್ಚಿ ಹೋದರೆ, ಅವೆಲ್ಲ ಮೇಲಿನ ಧೋರಣದಂತೆಯೇ ಇರುತ್ತವೆಂದು ನಿರ್ವಿವಾದವಾಗಿ ಒಪ್ಪಬೇಕಾಗುತ್ತದೆ.

## ಉಪಾಯಗಳು.:—

೧ ಚಳಿಜ್ವರ(ಮಲೇರಿಯಾ) ಹಾಗು ದುರ್ಜಲ ಜನಿತ ಜ್ವರಗಳಿಗೆ ಕ್ವಿನಾ ಯಿನಕ್ಕಿಂತಲೂ ಲಿಕ್ಕೀಸೊಪ್ಪು ಚೆನ್ನಾಗಿ ಉಪಯೋಗವಾಗುತ್ತದೆಂಬ ಬಗ್ಗೆ ಅನುಭವ ಬಂದಿದೆ. ಲಿಕ್ಕೀಸೊಪ್ಪಿನ ರಸದಲ್ಲಿ ಜ್ವರನಿವಾರಣ ಶಕ್ತಿಯು ಹೆಚ್ಚಾಗಿರುತ್ತದೆ. ಲಿಕ್ಕಿಯ ಹಸೇ ಎಲೆಗಳನ್ನು ತಂದು ಕೈಯಿಂದ ಚಿವುಟಿ ತಿಕ್ಕಿ ವಸ್ತ್ರದಲ್ಲಿ ಗಂಟುಕಟ್ಟಿ ಜ್ವರಬರುವ ಮೊದಲು ೪-೫ ತಾಸು ಆಗಾಗ್ಗೆ ಮೂಸಿ ನೋಡುತ್ತಿರಬೇಕು; ಮತ್ತು ಅದರ ಎಲೆಗಳ ೪-೫ ಹನಿಗಳನ್ನು ಮೂಗಿನಲ್ಲಿ ಹಿಂಡಬೇಕು; ಹಾಗು ಅದನ್ನು ಶ್ವಾಸದಿಂದ ಮೇಲೆ ಜಗ್ಗಿಕೊಳ್ಳಬೇಕು. ಇದ ರಿಂದ ಆಶ್ಚರ್ಯಕರವಾದ ಗುಣವು ಕಂಡುಬರುತ್ತದೆ. ಈ ಪ್ರಯೋಗವನ್ನು ಪೂಜ್ಯಪಾದ ಗುರುಗಳು ಬರೆದಿಟ್ಟಿರುತ್ತಾರೆ.

೨ ಕಹಿಪಡುವಲ, ಜೇಕಿನಗಡ್ಡೆ, ಅಮೃತಬಳ್ಳಿ, ಅಡಸಾಲ, ಶುಂಠಿ,

ಬೀಜ, ನೆಲಬೇವು, ಕಟುಕರೋಹಿಣಿ ಇವುಗಳ ಕಾಢೆ-ನಿಕಾಢೆಯನ್ನು ಮಾಡಿ ಜೇನತುಪ್ಪದೊಡನೆ ಕೊಡಬೇಕು.

೩ ಅಳಲೀಕಾಯಿ ಬೇವು, ಶುಂಠಿ, ಸೈಂಧಲವಣ, ಚಿತ್ರಮೂಲ ಇವುಗಳ ಚೂರ್ಣವನ್ನು ಕಣ್ಣೀರಿನೊಡನೆ ಕೊಡುವದು.

೪ ಊಟ ಮಾಡುವ ಮೊದಲು ಶುಂಠಿ, ಸಾಸಿವೆ ಮತ್ತು ಅಳಲೇಕಾಯಿ ಇವುಗಳ ಕಾಲು ತೊಲಿ ಚೂರ್ಣವನ್ನು ತಿನ್ನಬೇಕು. ಇದರಿಂದ ನಾನಾ ದೇಶಗಳ ನೀರು ಕುಡಿದು ಉಂಟಾದ ಜ್ವರಗಳ ನಿವಾರಣವಾಗುತ್ತದೆ.

೫ ನೆಲಬೇವು, ತಿಗಡಿ, ಬಾಳದಬೇರು, ಹಿಪ್ಪಲಿ, ವಾಯುವಡಂಗ, ಶುಂಠಿ, ಕಟುಕರೋಹಿಣಿ ಇವುಗಳ ಕಷಾಯ ಮಾಡಿ ಆರಿಸಿ ಜೇನತುಪ್ಪ ಹಾಕಿ ಕೊಡಬೇಕು. ಇದರಿಂದ ಈ ಜ್ವರಗಳು ತಾತ್ಕಾಲಕ್ಕೆ ನಿಲ್ಲುತ್ತವೆ.

೬ ಶುಂಠಿ, ಯವಕ್ಷಾರ ಇವುಗಳ ಕಾಲು ತೊಲಿ ಚೂರ್ಣವನ್ನು ಬಿಸಿನೀರಿನೊಡನೆ ಕೊಟ್ಟರೆ ಅನೇಕ ಜಲಗಳ ಉಪಯೋಗದಿಂದುಂಟಾದ ಜ್ವರಗಳ ನಿವಾರಣವಾಗುತ್ತದೆ.

೭ ಅರಿಷಿಣ ಮತ್ತು ಯವಕ್ಷಾರಗಳ ಚೂರ್ಣವನ್ನು ಬಿಸಿನೀರಿನೊಡನೆ ಕೊಟ್ಟರೆ ಈ ಜ್ವರಗಳ ದೋಷವು ನಾಶವಾಗುತ್ತದೆ.

೮ ೧೬ ಪಾಲು ಕೋಡುಮುರುಕನಬೀಜ, ೪ ಪಾಲು ಕಲ್ಲುಸಬ್ಬಸಿಗಿ, ೨ ಪಾಲು ಜಾಜೀಕಾಯಿ, ೧ ಪಾಲು ಬಿಳೇ ಔಡಲ ಬೇರು ಇವುಗಳನ್ನು ಚೆನ್ನಾಗಿ ಕುಟ್ಟಿ ಚೂರ್ಣಮಾಡಿ ಅಷ್ಟೇ ಸಕ್ಕರೆ ಹಾಕಿ ಕೊಡುವದು. ಇದರಿಂದ ನೀರಿನಿಂದುಂಟಾದ ದೋಷ ಹಾಗು ದೋಷಜ್ವರಗಳ ನಾಶವಾಗುತ್ತದೆ.

೯ ೨ ಪಾಲು ಶುದ್ಧ ನೇಪಾಳದ ಬೇರು, ೫ ಪಾಲು ಕವಡೀಭಸ್ಮ, ೯ ಪಾಲು ಮೆಣಸು ಇವುಗಳ ವಸ್ತ್ರಗಾಳ ಚೂರ್ಣಮಾಡಿ ಅಲ್ಲದ ರಸದಲ್ಲಿ ಅರೆದು ಹೆಸರುಕಾಳಷ್ಟು ಗುಳಿಗೆ ಕಟ್ಟಿಡಬೇಕು. ಮುಂಜಾವು-ಸಂಜೆಗಳಲ್ಲಿ ೧-೧ ಗುಳಿಗೆಯನ್ನು ನೀರೊಡನೆ ಕೊಟ್ಟರೆ, ಅಜೀರ್ಣ, ಹೊಟ್ಟೆಶೂಲಿ, ಹೊಟ್ಟೆಯುಬ್ಬುವದು, ಮಲಾವರೋಧ, ಶೂಲಿ, ದಮ್ಮು ಕೆಮ್ಮು, ದುಷ್ಟಜಲದಿಂದಾದ ಜ್ವರ ಇತ್ಯಾದಿಗಳ ನಾಶವಾಗುತ್ತದೆ. ಇದಕ್ಕೆ ದುರ್ಜಲಜೇತಾರಸವೆನ್ನುವರು.

೧೦ ಜಂತಿನಿಂದ ಇಲ್ಲವೆ ದೂಷಿತ ಜಲದಿಂದುಂಟಾದ ಜ್ವರಗಳಿಗೆ:— ೧ ತೊಲಿ ಮೆಣಸು, ೩ ತೊಲಿ ಜಾಲೀಎಲೆ, ೫ ತೊಲಿ ಗಜಗದಬೀಜ, ೧ ತೊಲಿ ಹಿಪ್ಪಲಿ ಇವನ್ನೆಲ್ಲ ಪುಡಿ ಮಾಡಿ, ಬೇವಿನ ಸೊಪ್ಪಿನ ರಸದಲ್ಲಿ ಅರೆದು ಕಡಲೆಕಾಳಷ್ಟು ಗುಳಿಗೆ ಮಾಡಬೇಕು. ಪ್ರತಿ ಮೂರು ದಿವಸಕ್ಕೊಂದು ಸಲ ೨-೩ ಗುಳಿಗೆಯಂತೆ ನೀರೊಡನೆ ತೆಗೆದುಕೊಳ್ಳುವದು.

೧೧ ಕ್ರಿಮಿಜನ್ಯ ಜ್ವರಕ್ಕೆ ಉಪಾಯ:—ಪತ್ರೀಎಲೆಯ ರಸವನ್ನು ಜೇನು ತುಪ್ಪದೊಡನೆ ಕೊಡುವದು.

೧೨ ಬೇವಿನಎಲೆಯ ಕಷಾಯದಲ್ಲಿ ಮೆಣಸಿನ ಪುಡಿ ಮತ್ತು ಬಳೆಗಾರ ಇವನ್ನು ೪-೫ ಗುಂಜಿ ಹಾಕಿ ಕುಡಿಸಬೇಕು. ಇದು ಈ ಜ್ವರಕ್ಕೆ ಎಲ್ಲಕ್ಕೂ ಶ್ರೇಷ್ಠತಮವಾದ ಔಷಧವಾಗಿದೆ.

---

## ೪೦ ಮರಕಳಿಸಿದ ಜ್ವರ.

ಲಕ್ಷಣ:—ಜ್ವರನಿಂತ ನಂತರ ಅಪಥ್ಯ ಮಾಡಿದರೆ ಪುನಃ ಜ್ವರಬರಹತ್ತುತ್ತವೆ. ಆ ಜ್ವರದಲ್ಲಿ ದಾಹ, ತೃಷ್ಣೆ, ತಲೆಶೂಲಿ, ಹೊಟ್ಟೆಯುಬ್ಬುವದು, ವ್ಯಾಕರಿಕೆ, ನಡಶೂಲಿ, ಜುಲಾಬು ಆಗುವದು ಇಲ್ಲವೆ ಮಲಬದ್ಧವಾಗುವದು ಇತ್ಯಾದಿ ಲಕ್ಷಣಗಳಾಗುತ್ತವೆ. ಯಾವ ಪದಾರ್ಥವನ್ನು ಹೆಚ್ಚಾಗಿ ತಿನ್ನುವದರಿಂದ ಜ್ವರಗಳು ಮರಕಳಿಸಿರುವವೋ, ಅದರ ಪ್ರತೀಕಾರಕ್ಕಾಗಿ ಯೋಗ್ಯ ಔಷಧವನ್ನು ಯೋಜಿಸುವದು. (ಅಜೀರ್ಣಮಂಜರಿಯನ್ನು ನೋಡಿರಿ)

### ಉಪಾಯಗಳು.

೧ ಕಟುಕರೋಣಿ, ಬಾಳದಬೇರು, ಕಲ್ಲುಕಡಲೆಬೇರು, ಹವೀಜ, ಕಲ್ಲು ಸಬ್ಬಸಿಗಿ, ಜೇಕಿನಗಡ್ಡೆ ಇವುಗಳ ಕಷಾಯವು ಮರಕಳಿಸಿದ ಜ್ವರಕ್ಕೆ ಅನುಕೂಲವಾಗಿದೆ.

೨ ಅರ್ಧತೊಲಿ ಕಟುಕರೋಣಿ, ೧ ತೊಲಿ ಬಾಳದಬೇರು, ೧ ತೊಲಿ ಜೇಕಿನಗಡ್ಡೆ ಇವುಗಳ ಕಷಾಯದಲ್ಲಿ ಕಲ್ಲುಸಕ್ಕರೆ ಹಾಕಿ ಕೊಡುವದರಿಂದ ಮರಕಳಿಸಿದ ಜ್ವರಗಳು ಖಂಡಿತವಾಗಿ ನಿಲ್ಲುತ್ತವೆ.

---

## ೪೧ ಜ್ವರದಲ್ಲಿ ಆಗುವ ಉಪದ್ರವಗಳು.

ಜ್ವರ ಬರುವಾಗಲೂ, ನಿಂತಾಗಲೂ ಹೆಚ್ಚು ಕಡಿಮೆ ಪ್ರಮಾಣದಿಂದ ಉಬ್ಬಸ, ಮೂರ್ಛೆ, ಅರುಚಿ, ವಾಂತಿ, ನೀರಡಿಕೆ, ಅತಿಸಾರ, ಮಲಬದ್ಧತೆ, ಬಿಕ್ಕು, ಕೆಮ್ಮು, ಕೈಕಾಲು ಹರಿಯೋಣ ಈ ಹತ್ತು ಉಪದ್ರವಗಳಾಗುತ್ತವೆ; ಆದರೆ ಮೂಲ ಜ್ವರಗಳು ಶಾಂತವಾದವೆಂದರೆ ಇವು ತಮ್ಮಷ್ಟಕ್ಕೆ ತಾವೇ ಕಡಿಮೆಯಾಗುತ್ತವೆ; ಆದುದರಿಂದ ಈ ಉಪದ್ರವಗಳ ನಿವಾರಣಕ್ಕಾಗಿ ಯತ್ನಿಸುವ ಮೊದಲು ಜ್ವರ ನಿವಾರಣದ ಉಪಾಯವನ್ನೇ ಕೈಕೊಳ್ಳತಕ್ಕದ್ದು. ಆ ಉಪಾಯಗಳಲ್ಲಿ ಮೇಲಿನ ಹತ್ತು ಉಪದ್ರವಗಳಲ್ಲಿ ಯಾವುದು ಹೆಚ್ಚಾಗಿರುವದೋ ಅದನ್ನು ನಿವಾರಿಸುವ ಔಷಧವಿರಬೇಕು. ಪ್ರತಿಯೊಂದು ಜ್ವರದಲ್ಲಿ

ಎಲ್ಲ ಪೀಡೆಗಳೂ ಇರುತ್ತವೆಂದು ಹೇಳಲಿಕ್ಕಾಗುವದಿಲ್ಲ. ಜ್ವರದ ಮಾನದಿಂದ ಕೆಲವು ಪೀಡೆಗಳೇ ಹೆಚ್ಚು-ಕಡಿಮೆಯಾಗಿರುತ್ತವೆ. ಆ ಉಪದ್ರವಗಳ ನಿವಾರಣಕ್ಕಾಗಿ ಕೆಳಗಿನ ಔಷಧಗಳನ್ನು ಯೋಜಿಸಬಹುದು.

ಕೆಳಗಿನ ಔಷಧಗಳನ್ನು ಸರ್ವ ಸಾಮಾನ್ಯವಾಗಿ ಹೇಳಿರುತ್ತದೆ. ಇವುಗಳಿಂದ ಗುಣವಾದರಂತೂ ಎಹಿತವೇ. ಇವಕ್ಕೂ ಹೆಚ್ಚಿನ ಉಪಾಯಗಳ ಅವಶ್ಯಕತೆ ಕಂಡಲ್ಲಿ ಆಯಾ ಬೇನೆಗಳ ಪ್ರಕರಣದಲ್ಲಿ ನೋಡಿಕೊಳ್ಳಬಹುದು.

೧ ಉಬ್ಬುಸಕ್ಕೆ:—ಹಿಪ್ಪಲಿ, ಕಿರಿಶಿವಣಿ, ದುಷ್ಟಪುಚೆಟ್ಟು ಇವುಗಳ ಚೂರ್ಣವನ್ನು ಜೇನತುಪ್ಪದೊಡನೆ ನೆಕ್ಕಿಸಬೇಕು ಇದರಿಂದ ಒಳ್ಳೇ ಉಗ್ರ ಶ್ವಾಸವು ಕೂಡ ನಾಶ ಹೊಂದುತ್ತದೆ (೨) ಶ್ವಾಸ ಕುಠಾರ ಮಾತ್ರೆಯನ್ನು ಕೊಡುವದು. (೩) ನೆಲಗುಳ್ಳಬೇರು, ಗುಕ್ಕದಬೇರು, ನೆಲಿಂಗಳ, ಕಹಿಪಡುವಲ, ದುಷ್ಟಪುಚೆಟ್ಟು, ಗಂಟುಭಾರಂಗಿ, ತಾವರೆಗಡ್ಡೆ, ಕಟುಕರೋಣಿ, ಕಚೋರ, ಜಾಲಿ, (ಉತ್ತರಹಿಂದುಸ್ಥಾನದೊಳಗಿನ ಪ್ರಸಿದ್ಧ ವನಸ್ಪತಿ) ಈ ಹತ್ತು ಬಗೆಯ ಔಷಧಗಳ ಕಷಾಯವು ಸನ್ನಿಪಾತದಿಂದುಂಟಾದ ಶ್ವಾಸದ ನಾಶವನ್ನು ಕೂಡ ಮಾಡಬಲ್ಲದು.

೨ ಮೂರ್ಛೆಗೆ:—(೧) ಜ್ವರ ಬಂದಾಗ ಮೂರ್ಛೆ ಬಂದರೆ ಅಲ್ಲದ ರಸದಲ್ಲಿ ಬೆಲ್ಲ ಹಾಕಿ ಮೂಗಿನಲ್ಲಿ ಹಿಂಡತಕ್ಕದ್ದು. (೨) ಜೇನತುಪ್ಪದಲ್ಲಿ ಸೈಂಧಲವಣ, ಮೆಣಸು, ಮನಶೀಲಗಳನ್ನು ತೆಯ್ದು ಅಂಜನ ಮಾಡುವದು. ಇದರಿಂದ ಒಮ್ಮೆಲೆ ಮೂರ್ಛೆ ತಿಳಿಯುವದು. (೩) ಸುಗಂಧ ಧೂಪ ಇಲ್ಲವೆ ಹೂಗಳ ವಾಸನೆ ತಕ್ಕೊಳ್ಳಬೇಕು. (೪) ಕಂಚಿನ ಬಟ್ಟಲದಿಂದ ಕೈ ಕಾಲುಗಳನ್ನು ತಿಕ್ಕಬೇಕು; ಇಲ್ಲವೆ ಜೇನತುಪ್ಪದಲ್ಲಿ ಹಿಪ್ಪಲಿ ಪುಡಿ ಹಾಕಿ ನೆಕ್ಕಿಸಬೇಕು. (೫) ನೆಲಗುಳ್ಳಕಾಯಿ, ಶುಂಠಿ, ಹಿಪ್ಪಲಿ ಇವುಗಳ ವಸ್ತ್ರಗಾಳ ಚೂರ್ಣವನ್ನು ಕೊಳವೆಯೊಳಗಿಂದ ಮೂಗಿನಲ್ಲಿ ಊದಬೇಕು. ಇದರಿಂದ ಕೂಡಲೆ ಮೂರ್ಛೆ ತಿಳಿದೇಳುವನು. (೬)ಬಾಳೆಯ ಕೋಮಲ ಎಲೆಗಳನ್ನು ಮೈ ಮೇಲೆ ಇಡತಕ್ಕದ್ದು.

೩ ಅರುಚಿಗಾಗಿ:—(೧) ಅಲ್ಲದ ರಸದಲ್ಲಿ ಸೈಂಧಲವಣದ ಪುಡಿ ಹಾಕಿ ನೆಕ್ಕಿಸಬೇಕು. (೨) ಮಾದಾಳದ ತಿರುಳನ್ನು ಸೈಂಧಲವಣದೊಡನೆ ಗುಳಿಗೆ ಮಾಡಿ ಬಾಯೊಳಗೆ ಹಿಡಿಯತಕ್ಕದ್ದು. (೩) ನೆಲ್ಲೀಚೆಟ್ಟು ನೀರಲ್ಲಿ ತೆಯ್ದು ನಾಲಿಗೆಗೆ ತಿಕ್ಕಬೇಕು. (೪) ನೆಲ್ಲಿಚೆಟ್ಟು, ದೀಪದ್ರಾಕ್ಷಿ, ಸಕ್ಕರೆ ಇವುಗಳ ಕಲ್ಕವನ್ನು ಬಾಯಲ್ಲಿ ಹಿಡಿಯತಕ್ಕದ್ದು.

೪ ವಾಂತಿಗೆ:—(೧) ಅಳ್ಳೇಗಿಡದ ಬೊಡ್ಡೆಯ ಮೇಲಿನ ಒಣ ಹಕ್ಕಳಿ

ಗಳನ್ನು ಸುಟ್ಟು ನೀರಲ್ಲಿ ಮುಣುಗಿಸಿ ಆರಿಸಿ, ಆ ನೀರನ್ನು ಸೋಸಿ ಕುಡಿಸ ತಕ್ಕದ್ದು. (೨)ಅಮೃತಬಳ್ಳಿಯ ಕಷಾಯ ಇಲ್ಲವೆ ರಸದಲ್ಲಿ ಜೇನತುಪ್ಪ ಹಾಕಿ ಕೊಡಬೇಕು. (೩) ಚಂದನ ಗಂಧದಲ್ಲಿ ಸಕ್ಕರೆ ಹಾಕಿ ಕುಡಿಸಬೇಕು. (೪) ಛತ್ರದ ಅರಳು, ಪತ್ರಜ (ಪತಂಗದ ಚೆಕ್ಕೆ)ಬಾರೀಬೀಜ, ಜೇಕಿನಗಡ್ಡೆ, ಚಂದನ, ಮರಅರಿಷಿಣ, ಇವುಗಳ ಸಮಭಾಗ ಚೂರ್ಣದಲ್ಲಿ ಇಲ್ಲವೆ ಕಷಾಯದಲ್ಲಿ ಜೇನು ತುಪ್ಪ ಹಾಕಿ ಕೊಡಬೇಕು. (೫) ಅನನಸ ತಿನಬೇಕು. ಅಂದರೆ ವಾಂತಿ ನಿಲ್ಲು ತ್ತದೆ; ಮತ್ತು ಇದು ಪಾಚಕವಿರುವದರಿಂದ ಜ್ವರರೋಗಿಗೆ ಹಿತಕರವಾದದ್ದಾಗಿದೆ. ಇದರಲ್ಲಿ ಮೂತ್ರವಾಗುವ, ಬೆವರು ಬರುವ ಮತ್ತು ದಾಹ ಶಮನವಾಗುವ ಗುಣಗಳಿರುತ್ತವೆ.

೫ ನೀರಡಿಕೆಗಾಗಿ:—(೧)ಬಾಳದಬೇರು, ಕಲ್ಲುಸಬ್ಬಸಿಗಿ, ಜೇಕಿನಗಡ್ಡೆ, ಶುಂಠಿ, ರಕ್ತಚಂದನ, ಆಲದ ಮುಗುಳು ಇವುಗಳನ್ನು ಸಮಭಾಗ ತಕ್ಕೊಂಡು ಕಷಾಯ ಮಾಡಿಟ್ಟು ಆಗಾಗ್ಗೆ ತುಸ ತುಸ ಕೊಡಬೇಕು. (೨) ವಾಯು ವಾಗುವ ಲಕ್ಷಣವಿರದಿದ್ದರೆ ಭರ್ಪದ ತುಣಕನ್ನು ತಿನಿಸಬೇಕು. (೩) ಒಣಗಿದ ಕೋರೀ ಹಣ್ಣು ತಿನಿಸಬೇಕು. (೪) ದೀಪದ್ರಾಕ್ಷಿ, ಜ್ಯೇಷ್ಠಮಧು, ಕಲ್ಲು ಸಕ್ಕರೆಗಳನ್ನು ಕುಟ್ಟಿ ಗುಳಿಗೆ ಮಾಡಿ ಬಾಯೊಳಗೆ ಹಿಡಿಯತಕ್ಕದ್ದು. (೫) ತೆಂಗಿನ ನೀರು ಕುಡಿಸತಕ್ಕದ್ದು. ಇದರಿಂದ ನೀರಡಿಕೆಯ ಶಮನವಾಗುವದಲ್ಲದೆ, ಅನ್ನದ ಅಂಶವೂ ಹೊಟ್ಟೆಯೊಳಗೆ ಹೋದಂತಾಗುತ್ತದೆ.

೬ ಅತಿಸಾರಕ್ಕೆ:—(೧) ಅಗಳುಶುಂಠಿ, ಅಮೃತಬಳ್ಳಿ, ಕಲ್ಲುಸಬ್ಬಸಿಗೆ, ಜೇಕಿನಗಡ್ಡೆ, ಶುಂಠಿ, ನೆಲಬೇವು, ಕೋಡುಮುರುಕನ ಬೀಜ ಇವುಗಳ ಕಷಾಯ ದಿಂದ ಜ್ವರಾತಿಸಾರವು ನಿಶ್ಚಯಪೂರ್ವಕವಾಗಿ ನಿಲ್ಲುತ್ತದೆ. (೨) ಆಮ ರಕ್ತ ಅತಿಸಾರಕ್ಕೆ:-ಪಟಿಕ ೨ ಮಾಸಿ, ಯಾಲಕ್ಕೀಕಾಳು ಅರ್ಧ ತೊಲಿ, ಬಾಳಂತಿ ಸಬ್ಬ ಸಿಗೆ ೧ ತೊಲಿ, ಜಾಜೀಕಾಯಿ ೧ ಇದನ್ನು ತುಪ್ಪದ ದೀಪದ ಮೇಲೆ ಸುಟ್ಟು ತಕ್ಕೊಂಡು ಎಲ್ಲವುಗಳ ಏಕತ್ರ ಚೂರ್ಣಮಾಡಿ ೧ ಇಲ್ಲವೆ ೨ ಮಾಸಿ ಪುಡಿಯನ್ನು ತುಪ್ಪದಲ್ಲಿ, ಹಾಲಲ್ಲಿ ಇಲ್ಲವೆ ನೀರಲ್ಲಿ ಕೊಡಬೇಕು. (೩) ಕೆಂಪುಕಂಕೋಳ, ಯಾಲಕ್ಕಿ, ದಾಳಿಂಬರಬೀಜ, ಹಿಪ್ಪಲಿ, ಮೆಣಸು, ಸಬ್ಬಸಿಗಿ, ಜಾಜೀಕಾಯಿ, ಸಮಭಾಗ ತಕ್ಕೊಂಡು ಕೂಡಿಸಿ ಚೂರ್ಣ ಮಾಡಿ ಸಕ್ಕರೆ ಬೆರಿಸಿ ಆಗಾಗ್ಗೆ ಅರ್ಧ ತೊಲಿ ಕೊಡಬೇಕು. (೪) ಕೋಡುಮುರುಕನ ತೊಗಟೆ, ಕಲ್ಲುಸಬ್ಬಸಿಗಿ, ನೆಲಬೇವು, ಕಟುಕರೋಣಿ ಇವುಗಳ ಕಷಾಯದಲ್ಲಿ ಬೆಲ್ಲಹಾಕಿ ಕೊಟ್ಟರೆ ಅತಿ ಸಾರ ಮತ್ತು ಜ್ವರಗಳ ನಾಶವಾಗುತ್ತದೆ. (೫) ಅರ್ಧತೊಲಿ ಇಸಮಗೋಲನ್ನು ರಾತ್ರಿ ನೀರಿನಲ್ಲಿ ನೆನೆ ಹಾಕಿ, ಬೆಳಿಗ್ಗೆ ಸಕ್ಕರಿ ಹಾಕಿ ತಿನ್ನಬೇಕು; ಇಲ್ಲವೆ

ಕಷಾಯ ಮಾಡಿ ಇಲ್ಲವೆ ಸಕ್ಕರಿ ಹಾಕಿ ಕೊಟ್ಟರೆ ಜ್ವರಾತಿಸಾರವು ನಾಶ ಹೊಂದುತ್ತದೆ. (೬) ಸಕ್ಕರಿ, ರಾಳ, ನೆಲ್ಲೀಚೆಟ್ಟು, ಧಾತಕಕುಸುಮ, ಬೆಲಪತ್ರಿಕಾಯಿ ಇವುಗಳ ಚೂರ್ಣವನ್ನು ಪೋಸ್ತಕಾಯಿಯ ಕಷಾಯದಲ್ಲಿ ಕೊಡತಕ್ಕದ್ದು. (೭) ಕಣಗಿಲ ಬೇರು, ಧತ್ತೂರದ ಬೀಜ, ನೆಲಗುಳ್ಳ ಹೂ, ಇಂಗಳೀಕ, ಕಲ್ಲಕಡಲೆ, ಅಳಲೇಕಾಯಿ, ತಾರೀಕಾಯಿ, ನೆಲ್ಲೀಚೆಟ್ಟು, ನೇಪಾಳದ ಬೇರು, ಕರ್ಪೂರ, ಕೇಶರ, ಲವಂಗ, ಆಕಳಕರಿ, ಅಫೂ, ಮೆಣಸು, ಸುರಗೀಗಿಡದ ಅಂಟು, ಜಾಜೀಕಾಯಿ, ಪತ್ರಿ ಇವುಗಳನ್ನು ಸಮಭಾಗ ತಕ್ಕೊಂಡು ಕೂಡಿಸಿ ಚೂರ್ಣಮಾಡಿ, ಅದನ್ನು ಜೇನತುಪ್ಪದಲ್ಲಿ ಇಲ್ಲವೆ ವೀಳ್ಯದೆಲೆಯ ರಸದಲ್ಲಿ ಅರೆದು ೧|| ಮಾಸಿ ತೂಕದ ಗುಳಿಗೆ ಮಾಡಿಡಬೇಕು. ಅಂಥದೊಂದು ಗುಳಿಗೆಯನ್ನು ಜೇನತುಪ್ಪದೊಡನೆ ಕೊಟ್ಟರೆ, ಜ್ವರಾತಿಸಾರವು ಖಾತ್ರಿಯಿಂದ ನಿಲ್ಲುತ್ತದೆ; ಮುಖದ ಮೇಲೆ ಕಾಂತಿ ಬರುತ್ತದೆ; ಅಗ್ನಿ, ಬಲಗಳು ವೃದ್ಧಿಂಗತವಾಗುತ್ತವೆ.

೭ ಮಲಾವರೋಧಕ್ಕೆ:—(೧) ಜ್ವರದೊಳಗೆ ಮಲಾವರೋಧವಾದರೆ, ತೀವ್ರ ಸಾರಕವಾದ ಔಷಧಿಗಳ ಬತ್ತಿಯನ್ನು ಮಾಡಿ ಗುದದ್ವಾರದಲ್ಲಿ ಸೇರಿಸಿ, ಚೆನ್ನಾಗಿ ಮಲೋತ್ಸರ್ಗವಾಗುವಂತೆ ಮಾಡತಕ್ಕದ್ದು. (೨) ಬಟ್ಟೆಗೆ ಹಚ್ಚುವ ಸಬಕಾರ ಇಲ್ಲವೆ ಸೀಗೀಕಾಯಿಗಳನ್ನು ನೀರಲ್ಲಿ ಕದಡಿ, ಅದನ್ನು ಅರಿವೆಗೆ ಹಚ್ಚಿ ಅದರ ಬತ್ತೀ ಮಾಡಿ ಅದನ್ನು ಕೆಲಹೊತ್ತು ಗುದದ್ವಾರದಲ್ಲಿಡಬೇಕು. ಅದರಿಂದ ಮಲೋತ್ಸರ್ಗವು ಚೆನ್ನಾಗಿ ಆಗುತ್ತದೆ. (೩) ಬಾಳಹಿರಡಾ, ಕಕ್ಕೀಕಾಯೊಳಗಿನ ತಿರುಳು, ಕಟುಕರೋಣಿ, ತಿಗಡಿ, ನೆಲ್ಲೀಚೆಟ್ಟು ಇವುಗಳ ಕಷಾಯವನ್ನು ಜೇನುತುಪ್ಪದೊಡನೆ ಕೊಟ್ಟರೆ ಮಲಾವರೋಧ ಮತ್ತು ಜೀರ್ಣಜ್ವರಗಳ ನಾಶವಾಗುತ್ತದೆ.

೮ ಬಿಕ್ಕಿಗೆ:—(೧) ಜ್ವರದಲ್ಲಿ ಬಿಕ್ಕು ಹತ್ತಿದರೆ ಸೈಂಧಲವಣವನ್ನು ನೀರಲ್ಲಿ ಕರಗಿಸಿ ಮೂಗಿನಲ್ಲಿ ಹಾಕಬೇಕು. (೨) ಇಂಗನ್ನು ಹೊಗೆಯಿಲ್ಲದ ನಿಗಿನಿಗಿ ಕೆಂಡದ ಮೇಲೆ ಹಾಕಿ ಅದರ ಹೊಗೆಯನ್ನು ಬಾಯೊಳಗೆ ತೆಗೆದುಕೋಬೇಕು. (೩) ಕುದುರೆಯ ಒಣಗಿದ ಲದ್ದಿಯ ಹೊಗೆಯನ್ನು ನುಂಗಿದರೆ ಮಹಾ ಸನ್ನಿಪಾತಾತ್ಮಕ ಬಿಕ್ಕಿನ ನಾಶವಾಗುತ್ತದೆ.

೯ ಕೆಮ್ಮಿಗೆ:—(೧) ಜ್ವರದೊಳಗೆ ಕೆಮ್ಮು ಬಂದರೆ, ಹಿಪ್ಪಲಿ, ಹಿಪ್ಪಲಿಬೇರು, ತಾರೀಕಾಯಿತೊಗಟೆ, ಕಲ್ಲುಸಬ್ಬಸಿಗಿ, ಶುಂಠಿ ಇವುಗಳ ಚೂರ್ಣದ ಲೇಹವನ್ನು ಅಡಸಾಲದ ರಸ ಮತ್ತು ಜೇನತುಪ್ಪ ಹಾಕಿ ಕೊಡಬೇಕು. (೨) ಕೊಳಂಜನ, ಶುಂಠಿ, ಹಿಪ್ಪಲಿ, ಮೆಣಸು, ದುಷ್ಟವುಚೆಟ್ಟು, ಕಿರಿಶಿವಣಿ, ನೆಲಿಂಗಳ,

ಅಜ್ವಾನ ಇವುಗಳ ಚೂರ್ಣವನ್ನು ಜೇನುತುಪ್ಪದಲ್ಲಿ ಕೊಟ್ಟರೆ ಕೆಮ್ಮು ಹಾಗು ಕಫಗಳ ನಿವಾರಣವಾಗುತ್ತದೆ.

೧೦ ಕೈ ಕಾಲು ಹರಿತಕ್ಕೆ:—(೧) ಹುಂಚಿ ಮತ್ತು ಔಡಲಬೇರುಗಳ ಕಷಾಯದಲ್ಲಿ ಬೆಲ್ಲಹಾಕಿ ಕೊಡತಕ್ಕದ್ದು. (೨) ಬೆವರು ತರಿಸಬೇಕು. (೩) ರಬ್ಬರದ ಚೀಲದಲ್ಲಿ ಬಿಸನೀರು ತುಂಬಿ ಅದರಿಂದ ಸಹನವಾದಷ್ಟು ಕಾಸಬೇಕು.

---

## ೪೨ ಜ್ವರದೊಳಗಿನ ಉಳಿದ ಉಪದ್ರವಗಳಿಗೆ ಉಪಾಯ.

(೧) ಬೆವರು ಬರದಿದ್ದರೆ ಅದನ್ನು ತರಿಸಲಿಕ್ಕೆ:—(ಬೆವರಿನಿಂದಾಗುವ ಲಾಭಗಳು.) ಬೆವರು ಬರುವದರಿಂದ ಮೈಯೊಳಗಿನ ಹೊಲಸು ನೀರು ಹೊರಟು ಹೋಗುತ್ತದೆ. ಮೈಯೊಳಗಿನ ಉಷ್ಣತೆಯು ಹೆಚ್ಚು ಕಡಿಮೆಯಾಗದೆ ಸಾಮಾನ್ಯವಾಗಿ ೯೮.೬೦ ಅಂಶದಷ್ಟು ಸತತವಾಗಿರುತ್ತದೆ. ಮೈಯೊಳಗಿನ ದೂಷಿತ ಹಾಗು ಸವೆದು ಕೊಳೆತ ಪದಾರ್ಥಗಳು ಹೊರಹೊರಟು ಹೋಗುತ್ತವೆ. ಮೂತ್ರಪಿಂಡದ ಮತ್ತು ಯಕೃತದ ಕೆಲಸಗಳು ಹಗುರಾಗುತ್ತವೆ; ಆದರೂ ಸಾಕಷ್ಟಕ್ಕಿಂತ ಹೆಚ್ಚು ಬೆವರು ಬಂದರೆ ಶರೀರದೊಳಗಿನ ಹಾಗು ತ್ವಚೆಯೊಳಗಿನ ಪೋಷಕ ಕ್ಷಾರಗಳ ನಾಶವಾಗಿ ಅಶಕ್ತತೆಯುಂಟಾಗುತ್ತದೆ; ಆದ್ದರಿಂದ ಬೆವರನ್ನು ಹೆಚ್ಚಾಗಿ ತೆಗೆಯಕೂಡದು. ಹವಣಿಯಾಗಿ ಬೆವರು ತರಿಸಿದರೆ ಚರ್ಮರೋಗಗಳುಂಟಾಗುವದಿಲ್ಲ; ಆದುದರಿಂದ ಹವಣಿ ಬೆವರು ಬಂದನಂತರ ತ್ವಚೆಯನ್ನು ತಿಕ್ಕಿ ತೊಳೆದು ಒರಸಿ ಸ್ವಚ್ಛ ಮಾಡಬೇಕು. ಹೀಗೆ ಮಾಡದಿದ್ದರೆ ಇಸುಬು, ಖಜ್ಜಿ, ಗಜಕರ್ಣ ಮುಂತಾದ ಚರ್ಮರೋಗಗಳುಂಟಾಗುತ್ತವೆ. ಅತಿ ಚಳಿ, ಇಲ್ಲವೆ ಗಾಳಿ ಬಡಿಯುವದರಿಂದ ತ್ವಚೆಯ ರಂಧ್ರಗಳು ಮುಚ್ಚಲ್ಪಟ್ಟು, ಬೆವರು ಬಾರದಾಗಿ, ರೋಮರಂಧ್ರದೊಳಗಿನ ಚಿಕ್ಕ-ಪುಟ್ಟ ರಕ್ತವಾಹಿನಿಗಳು ಸಂಕುಚಿತವಾಗಿ ಅವುಗಳಲ್ಲಿ ರಕ್ತವು ಸಂಚಯವಾಗುತ್ತದೆ. ಅದರಿಂದ ದಾಹವಾಗ ಹತ್ತುತ್ತದೆ; ಆದುದರಿಂದ ಅಂಥ ಕಾಲದಲ್ಲಿ ಬೆವರನ್ನುಂಟುಮಾಡುವದು ಅತ್ಯವಶ್ಯವಾಗಿದೆ ರೋಗಿಗಳ ಬೆವರುಗಳಲ್ಲಿ ೨ ಭೇದಗಳುಂಟು ಯಾವುದೊಂದು ರೋಗದಲ್ಲಿ (ವಿಶೇಷವಾಗಿ ಜ್ವರದಲ್ಲಿ) ಕಟ್ಟಕಡೆಗೆ ಜ್ವರ ಬಂದು ರೋಗ ನಿವಾರಣವಾಗುತ್ತದೆ. ರೋಗ ನಿವಾರಣವಾಗುವ ತುಸ ಮುಂಚೆ ಬೆವರು ಬಂದು ಬೇನೆಯು ಕಡಿಮೆಯಾಗದೆ ಇಮ್ಮಡಿಯಾಗುವದು; ಮತ್ತು ಅದರಿಂದ ರೋಗ(ಜ್ವರ)ವು ಅಸಾಧ್ಯವಾಗುವದು. ಈ ಎರಡನೇ ಪ್ರಕಾರದ ಬೆವರು ಹೆಚ್ಚಾಗಿ ಬಂದು ಬೇನೆಯ ಅಸಾಧ್ಯತ್ವವನ್ನು ಸೂಚಿಸುತ್ತದೆ. ಮೊದಲನೇ ಬಗೆಯ ಬೆವರು ಬಂದರೆ ಜ್ವರ ಲಕ್ಷಣಗಳು ಕಡಿಮೆಯಾಗಿ ನಾಡಿಯು ಸುಧಾರಿಸ ಹತ್ತು

ತ್ತದೆ. ಮೈಯು ಬೆಚ್ಚಗಾಗುತ್ತದೆ. ಚಿತ್ತಸ್ವಾಸ್ಥ್ಯತೆಯುಂಟಾಗಿ, ನಿದ್ದೆ ಬರಹತ್ತುತ್ತದೆ. ಈ ಪ್ರಕಾರದ ಬೆವರು ಬಹುಶಃ ಜ್ವರ ಬಂದ ೭-೧೪-೨೧-೪೨ ದಿನಗಳಿಗೆ ಬರುತ್ತದೆ. ಈ ಬೆವರು ಶುಭಸೂಚಕವಾಗಿರುತ್ತದೆ. ನಿಷ್ಕಾರಣವಾಗಿ ಹೆಚ್ಚು ಬೆವರು ಬರುವದು ಅಶುಭ ಚಿಹ್ನವಾಗಿದೆ.

## (೨) ಅಸಾಧ್ಯ ಸೂಚಕ ಬೆವರಿನ ಲಕ್ಷಣಗಳು.

(೧) ಬೆಳಿಗ್ಗೆ ಇಲ್ಲವೆ ಬೆಳಗು ಮುಂಜಾನೆ ಬೆವರು ಬರೋಣ, ಬೆವರು ಬಂದರೂ ಜ್ವರ ಬರೋಣ[ಇದು ಸೂಚಕ ಜ್ವರದ ಲಕ್ಷಣವಾಗಿದೆ.] (೨) ಜ್ವರದಲ್ಲಿ ಹೊಲಸು ನಾತದ ಬೆವರು ಬಂದರೆ ಸನ್ನಿಪಾತಜ್ವರದ ಲಕ್ಷಣವೆಂದು ತಿಳಿಯುತಕ್ಕದ್ದು. (೩) ಜ್ವರದಲ್ಲಿಯು ಬೆವರಿಗೆ ಹುಳಿನಾತ ಬಂದರೆ ಆ ಜ್ವರಗಳು ಮಧುರಾ ಇಲ್ಲವೆ ಆಮವಾತ ಜ್ವರವೆಂದು ತಿಳಿಯುತಕ್ಕದ್ದು. (೪) ಬರೇ ಹಣೆಯ ಮೇಲೆ ಇಲ್ಲವೆ ಬಹಳವಾದರೆ ಎದೆಯ ವರೆಗೆ ಮಾತ್ರ ಬೆವರು ಬಂದರೆ ಆ ಜ್ವರಗಳು ಕಷ್ಟಸಾಧ್ಯವೆಂದು ತಿಳಿಯಬೇಕು ಕೆಲಕೇವು ಪ್ರಸಂಗಗಳಲ್ಲಿ ಅದರ ಪರಿಣಾಮವು ನೆಟ್ಟಗಾಗುವದಿಲ್ಲ (೫) ತೀರ ತಂಪಾದ ಬೆವರು ಬರುವದು ಶಕ್ತಿಪಾತದ ಲಕ್ಷಣವಾಗಿದ್ದು, ಮೃತ್ಯುಸೂಚಕವೂ ಆಗಿರುತ್ತದೆ (೬) ತುಸ ಹೊತ್ತು ಬೆವರು ಬರುವದು ಮತ್ತೆ ಜ್ವರ ಬಂದು ಪುನಃ ತುಸ ಬೆವರು ಬರುವದು ಕೆಟ್ಟ ಲಕ್ಷಣವಾಗಿದೆ. (೭) ಸೊಂಟೆಯ ಮೇಲೆ ಹಾಗು ಹಣೆಯ ಮೇಲಷ್ಟೇ ಬೆವರು ಬರುವದರಿಂದ ಜಠರವು ಕೆಟ್ಟ(ಅಜೀರ್ಣವಾದ)ಲಕ್ಷಣವಾಗಿರುವದರಿಂದ ಜ್ವರವು ಅಸಾಧ್ಯಕ್ಕೆ ಹೋಗುವದು ಸಹಜವಾಗಿದೆ ಜ್ವರ ಬಹಳವಿದ್ದು ಹೆಚ್ಚು ಬೆವರು ಬಂದರೆ, ಮುತ್ತು ಮೋರೆ, ಕಿವಿ ಹಾಗು ಉಗುರ ಕೆಳಭಾಗವು ಕಪ್ಪಿಟ್ಟರೆ ಆ ರೋಗಿಯು ಬದುಕುವ ಆಶೆಯಿಲ್ಲವೆಂದೇ ಹೇಳಬಹುದು. ಯಾಕಂದರೆ ಆಯಾ ಭಾಗಗಳು ಕಪ್ಪಿಡೋಣದರಿಂದ ಹೃದಯವು ಅಶಕ್ತವಾಗಿದ್ದು ರಕ್ತಾಭಿಸರಣವು ಮಂದವಾಗಿರುತ್ತದೆಂದು ಸ್ಪಷ್ಟವಾಗುತ್ತದೆ.

## (೩) ಜ್ವರದಲ್ಲಿ ತಾನಾಗಿ ಬೆವರು ಬರದಿದ್ದರೆ ಅದನ್ನು ತರಿಸುವ ಉಪಾಯ.

೧ ಬೆವರು ತರಿಸುವ ಔಷಧಗಳು:—ಸೋರುಪ್ಪು, ಕರಿಬಂಟನಬೇರು, ಅಫೂ, ಎಕ್ಕಿ, ತುಂಬಿ, ದೇವದಾರು, ಇಂಗೋಣಿ, ಹೊಸಲಕ್ಕಿ, ಅಂಕಲಿಗ, ಕರ್ಪೂರ, ಗೊರಟಿಗೆ, ಲೋಧ್ರಸಕ್ಕಿ, ಜೇಕಿನಗಡ್ಡೆ, ಬಿಸಿನೀರು, ನೆಲಿಂಗಳ ಹಾಗೆ ವಾತನಾಶಕ ವನಸ್ಪತಿಗಳ (ಔಡಲ, ನಗ್ಗಿ, ಬೇವು, ಲಕ್ಕಿ, ಕಾಡಿಗ್ಗರಗು ಇತ್ಯಾದಿ)ಉಗಿ ಕೊಡತಕ್ಕದ್ದು.

೨ ಮರಲಿಂಚಿನದ ೨ ತೊಲಿ ಅರ್ಕವನ್ನು ಕುಡಿಸಿ ಮೈಮೇಲೆ ಹೆಚ್ಚಾಗಿ ಹೊದಿಕೆಗಳನ್ನು ಹೊಚ್ಚಬೇಕು.

೩ ೪-೫ ಗುಂಜಿ ನೋರುಪ್ಪನ್ನು ಜೇನತುಪ್ಪದೊಡನೆ ನೆಕ್ಕಿಸುವದು.

೪ ಹಣ್ಣಾದ ಆಲದೆಲೆಯ ತುಂಬುಗಳ ಕಷಾಯದಲ್ಲಿ ಬೆಲ್ಲಹಾಕಿ ಕೊಟ್ಟರೆ ಬೇಗನೆ ಬೆವರು ಬರುತ್ತದೆ.

೫ ಜ್ವರಕ್ಕೆ ಕೊಡುವ ಸಲುವಾಗಿ ಮಾಡಿದ ಕಷಾಯದ ಪಾತ್ರೆಯನ್ನು ರೋಗಿಯ ಹತ್ತರಿಟ್ಟು ಮೈ ಮೇಲೆ ಚೆನ್ನಾಗಿ ಹೊದಿಕೆ ಹಾಕಿ, ಅದು ಆರುವ ವರೆಗೆ ಅದರ ಉಗಿ ಕೊಡಬೇಕು. ಸಾಕಷ್ಟು ಉಗಿ ಒಡಿದ ಬಳಿಕ ಆ ಪಾತ್ರೆಯನ್ನು ಹೊರಗೆ ತೆಗೆದು ಚೆನ್ನಾಗಿ ಬೆವರು ಬರುವ ವರೆಗೆ ಹೊಚ್ಚಿ ಮಲಗಿಸಬೇಕು. ಬಳಿಕ ಅದನ್ನು ಒರಸಿ, ಆ ಆರಿದ ಕಷಾಯದಲ್ಲಿ ಜೇನತುಪ್ಪ-ಸಕ್ಕರೆ ಮುಂತಾದವುಗಳಲ್ಲಿ ಯಾವುದನ್ನು ಹಾಕಬೇಕೋ ಅದನ್ನು ಹಾಕಿ ಕುಡಿಸಬೇಕು.

೬ ನೀರಲ್ಲಿ ತುಸ ಶುಂಠಿ ಹಾಕಿ ಕುಚ್ಚಿ ಆ ಶುಂಠಿಯನ್ನು ತೆಗೆದೊಗೆಯಬೇಕು ಬಳಿಕ ಆ ನೀರಲ್ಲಿ ಜೋಳದ ಅರಳಿಟ್ಟು, ತುಸ ಬೆಲ್ಲ ಹಾಕಿ ಕುದಿಸಿ, ತೆಳ್ಳಗಾದ ಮಂದೋಷ್ಣ ಕಾಟಿಯನ್ನು ಕುಡಿಯ ಕೊಡಬೇಕು. ನಂತರ ದಪ್ಪವಾದ ಹೊದಿಕೆಯನ್ನು ಹೊಚ್ಚಿ ಮಲಗಿಸಬೇಕು. ಬೆವರು ಬಂದಬಂದಂತೆ ಒರಸಿ ತೆಗೆಯಬೇಕು.

೭ ಬೇವಿನ ಕಡ್ಡಿ, ಜಾಲಿಯಕಡ್ಡಿ, ಹುಣಸೇಕಡ್ಡಿ ಇವನ್ನು ಪ್ರತಿಯೊಂದು ೧ ಬಿಲ್ಲಿಯ ತೂಕ ತೆಕ್ಕೊಂಡು ಅಷ್ಟಮಾಂಶ ಕಷಾಯ ಮಾಡಿ ಅದರಲ್ಲಿ ತ್ರಿಭುವನಕೀರ್ತಿರಸದ(ಮಾತ್ರೆ) ಗುಳಿಗೆಯನ್ನು ತೆಯ್ದು ಕೊಟ್ಟರೆ ಬೆವರು ಬರುತ್ತದೆ.

೮ ಅರ್ಧ ತೊಲಿ ತೊಗರಿಯ ಬೇಳೆ, ಅರ್ಧ ತೊಲೆ ಕಕ್ಕೇಕಾಯೊಳಗಿನ ತಿಳಲು, ಅಚ್ಛೇರು ನೀರು ಹಾಕಿ ಅಷ್ಟಮಾಂಶ ಕಷಾಯ ಮಾಡಿ ಕೊಡಬೇಕು.

೯ ಅರ್ಧ ತೊಲಿ ಹತ್ತೀಕಟ್ಟಿಗೆಗಳ ಬೂದಿಯನ್ನು ಕಸರು-ಕಡ್ಡಿಗಳಿಲ್ಲದಂತೆ ಆರಿಸಿ ಬಿಸಿನೀರಿನೊಡನೆ ಕೊಡತಕ್ಕದ್ದು.

೧೦ ಅರ್ಧ ತೊಲಿ ಅಜ್ವಾನ, ಅರ್ಧ ತೊಲಿ ಹಿಪ್ಪಲಿ, ಕಾಲು ತೊಲಿ ಅರಿಸಿಣಬೇರು, ೧ ಮಾಸಿ ಲವಂಗದ ಚೂರ್ಣ ಇವನ್ನೆಲ್ಲ ರಾತ್ರಿ ನೀರಲ್ಲಿ ನೆನೆ ಹಾಕಿ ಬೆಳಿಗ್ಗೆ ಅದರಲ್ಲಿ ೧೦ ತುಳಸಿಯ ಎಲೆ ಹಾಕಿ ಅರೆದು ಸಮರಸ ಮಾಡಿ, ಅದರಲ್ಲಿ ಹಂಚಿನ ಬಿಲ್ಲೆಯನ್ನು ಕಾಸಿ ಮುಳುಗಿಸಿ ನಂತರ ಅದನ್ನು ಸೋಸಿ ಅದರಲ್ಲಿ ತ್ರಿಭುವನ ಕೀರ್ತಿರಸದ ಮಾತ್ರೆಯನ್ನು ತೆಯ್ದು ಕುಡಿಸಿ ಮಲಗಿಸಬೇಕು. ಮೇಲೆ ದಪ್ಪಾದ ಪ್ರಾವರಣವನ್ನು ಹೊಚ್ಚಿದರೆ ಬೆವರು ಬರುತ್ತದೆ.

೧೧ ಬೃಹತ್ಪ್ರಮ್ನದ (ಗೋರಖಚಿಂಚ) ೨|| ತೊಲೆ ಸಿಪ್ಪೆಯನ್ನು ೨೦ ತೊಲಿ ನೀರಲ್ಲಿ ಕುದಿಸಿ ೧೦ ತೊಲೆ ಉಳಿಯಿತೆಂದರೆ ಸೋಸಿ, ಸೀಸೆಯಲ್ಲಿ ಹಾಕಿಡಬೇಕು. ೩-೩ ತಾಸಿಗೊಮ್ಮೆ ೨|| ತೊಲಿಯಂತೆ ಕೊಟ್ಟು ಅದನ್ನು ತೀರಿಸಬೇಕು. ಅದರಿಂದ ಚೆನ್ನಾಗಿ ಬೆವರು ಬರುತ್ತದೆ.

೧೨ ಗವತೀ ಚಹಾ(ಚಹಾದ ಹುಲ್ಲಿನ) ದ ಕಷಾಯದಲ್ಲಿ ಶುಂಠಿ ಹಾಕಿ ಬಿಸಿ ಇರುವಾಗಲೆ ಕುಡಿಸಿ, ದಪ್ಪನ್ನ ಹೊದಿಕೆ ಹೊಚ್ಚಿ ಮಲಗಿಸಿದರೆ ಬೆವರು ಬರುತ್ತದೆ.

೧೩ ೧ ತೊಲಿ ಬಿಳೀಗಣಜಲಿ ೨೦ ತೊಲಿ ನೀರಲ್ಲಿ ಹಾಕಿ ಕಷಾಯ ಮಾಡಿ ಕೊಡಬೇಕು. ದಿವಸ ೩ ಹೆಚ್ಚಾಗಿ ಬೆವರು ಬರುವದಲ್ಲದೆ ಮೂತ್ರೋತ್ಸರ್ಗವಾಗಿ ಜ್ವರ ಆರುತ್ತವೆ.

೧೪ ಕಾಡಿಗ್ಗರಗು ಬೇರು ಸಹಿತ ಕಿತ್ತಿ ತಂದು ೪೦ ತೊಲಿ ನೀರಲ್ಲಿ ಹಾಕಿ, ಒಂದು ಅರಿವೆಯಲ್ಲಿ ೫ ತೊಲಿ ಅಜ್ವಾನ ಕಟ್ಟಿ ೮ ಗಂಟೆನ್ನು ಅದರಲ್ಲಿ ಚೆಲ್ಲಿ ಅಷ್ಟಮಾಂಶ ಕಷಾಯ ಮಾಡಿ ಸೋಸಿ ಅದರಲ್ಲಿ ಒಂದು ಚಿಮಟಿಗೆ ಹಿಪ್ಪಲಿ ಪುಡಿ ಹಾಕಿ ಕುಡಿಸಿದರೆ ಬೆವರು ಬಂದು ಕೃಮಿಜನ್ಯಜ್ವರಗಳ ನಾಶವಾಗುತ್ತದೆ.

೧೫ ೪-೫ ಗುಂಜಿ ಚಿತ್ರಮೂಲದ ಚೂರ್ಣವನ್ನು ಸಕ್ಕರೆಯೊಡನೆ ಕೊಡುವದು

## (೪) ಜ್ವರದಲ್ಲಿ ಹೆಚ್ಚಾಗಿ ಬರುವ ಬೆವರನ್ನು ಕಡಿಮೆ ಮಾಡಲಿಕ್ಕೆ ಉಪಾಯ.

ಜ್ವರದೊಳಗೆ ಅತಿ ಬೆವರು ಬಂದರೆ ಅಶಕ್ತತೆಯುಂಟಾಗುತ್ತದೆ. ಆದ್ದರಿಂದ ಬೆವರು ನಿಲ್ಲಿಸಲಿಕ್ಕೆ ಕೆಳಗೆ ಹೇಳಿದ ಉಪಾಯಗಳನ್ನು ಮಾಡತಕ್ಕದ್ದು.

೧ ಹುರಿದ ಕಡಲೆ ಹಿಟ್ಟನ್ನು ಇಲ್ಲವೆ ಹುರಿದ ಭಂಗಿಯ ಚೂರ್ಣವನ್ನು ಅಥವಾ ಹುರಿದ ಹುರುಳಿಯ ಹಿಟ್ಟನ್ನು ಅಥವಾ ಭಸ್ಮದಲ್ಲಿ ಬಜೆಯ ಪುಡಿ ಬೆರಸಿ ಮೈಗೆ ತಿಕ್ಕಬೇಕು. ಬೆವರು ಕಡಿಮೆಯಾಗುತ್ತದೆ.

೨ ಹುರಳೀ ಹುರಿದು ಬೀಸಿದ ಹಿಟ್ಟಿನಲ್ಲಿ ಅರಿಷಿಣ ಮತ್ತು ಕವಡಿ ಲೋಭಾನದ ಪುಡಿ ಕೂಡಿಸಿ ಮೈಗೆ ತಿಕ್ಕಬೇಕು.

೩ ಮಾವಿನಕಾಯಿ ಮತ್ತು ಕಾಡಿಗ್ಗರಗಿನ ಕಷಾಯವನ್ನು ಮಾಡಿ ೩ ಸಾರೆ ಕುಡಿಸಬೇಕು. ಬೆವರು ಬರುವದು ಕಟ್ಟಾಗುತ್ತದೆ.

೪ ಹಿಪ್ಪಲಿ, ಕಿರಿಶಿವಣೆ, ಭಂಗಿ, ಬಜೆ, ಅಜ್ವಾನ, ಕೋಷ್ಠ, ತಾವರೆಗಡ್ಡೆ, ಶುಂಠಿ, ಕಟುಕರೋಣಿ, ಹಿಪ್ಪಲಿಬೇರು, ದೇವದಾರು, ಹೆಸರಹಿಟ್ಟು, ಉದ್ದಿನ ಹಿಟ್ಟು, ನೇಪಾಳದಬೇರು, ದೊಡ್ಡ ಬಿಳೀ ಸಾಸುವೆ, ಉಂಗುಂಬಳಕಾಯಿ

ಚೂರ್ಣ ಇವನ್ನೆಲ್ಲ ಸಮಭಾಗ ತಕ್ಕೊಂಡು ಪುಡಿ ಮಾಡಿ ಅಷ್ಟೇ ಕಾಕುಳ್ಳಿ ಬೂದಿಯನ್ನು ಅದರಲ್ಲಿ ಬೆರಸಿ ವಸ್ತ್ರಗಾಳ ಮಾಡಿ ಸರ್ವಾಂಗಕ್ಕೆ ತಿಕ್ಕತಕ್ಕದ್ದು. ಬೆವರು ಬರುವದು ಕಟ್ಟಾಗಿ, ಹೆಚ್ಚಾಗಿ ಬೆವರು ಬಂದು ತಣ್ಣಗಾದ ಅವಯವಗಳೆಲ್ಲ ಬೆಚ್ಚಗಾಗುತ್ತವೆ.

೫ ಹಿಪ್ಪಲಿ, ಅಮೃತಬಳ್ಳಿ, ದಾಗಡಿ ಳ್ಳಿ, ಕಟುಕರೋಹಿಣಿ, ಅಜ್ವಾನ, ಕಾಕುಳ್ಳಿಬೂದಿ ಇವನ್ನೆಲ್ಲ ವಸ್ತ್ರಗಾಳ ಚೂರ್ಣಮಾಡಿ ಎಲ್ಲ ಶರೀರಕ್ಕೆ ತಿಕ್ಕಿದರೆ ಬೆವರು ಬರುವದು ನಿಲ್ಲುತ್ತದೆ.

೬ ಆಕಳ ಕಾಕುಳ್ಳಿ ಬೂದಿ ಹಾಗು ಹಳೇ ಉಪ್ಪಿನ ಗಡಿಗೆ ಇವುಗಳ ವಸ್ತ್ರಗಾಳ ಚೂರ್ಣಮಾಡಿ ಎಲ್ಲ ಅವಯವಗಳಿಗೆ ತಿಕ್ಕತಕ್ಕದ್ದು.

೭ ಪಿತ್ಥದಿಂದ ಹೆಚ್ಚು ಬೆವರು ಬರುತ್ತಿದ್ದರೆ ಕರೇ ಮದುಗುಣಿಕೆಯ ಬೀಜವನ್ನು ಸುಟ್ಟು ಚೆನ್ನಾಗಿ ಅರೆದು ೧ ಮಾಸಿ ಚೂರ್ಣವನ್ನು ದಿನಾಲು ತಾಂಬೂಲದೊಡನೆ ಕೊಡುವದು ದಿವಸ ೭

೮ ೪ ಗುಂಜಿ ಪಟಿಕದ ಪುಡಿಯನ್ನು ಬಿಸಿನೀರಿನೊಡನೆ ಇಲ್ಲವೆ ಸಕ್ಕರೆಯೊಡನೆ ಕೊಡತಕ್ಕದ್ದು.

೯ ಬ್ರಹ್ಮದಂಡಿಯ ಬೇರುಗಳನ್ನು ಒಣಗಿಸಿ ಮಾಡಿದ ಚೂರ್ಣದಲ್ಲಿ ೧ ತೊಲಿ ಚೂರ್ಣವನ್ನು ಜೇನತುಪ್ಪದೊಡನೆ ನೆಕ್ಕಿಸಬೇಕು.

೧೦ ಬಿದರಿನ ೪-೫ ಹಸೇ ಎಲಿಗಳನ್ನು ೪೦ ತೊಲಿ ನೀರಲ್ಲಿ ಕೂಡಿಸಿ ಅಷ್ಟಮಾಂಶ ಕಷಾಯ ಇಳಿಸಿ ಸೋಸಿ ಕೊಡುವದು. ದಿವಸ ೩. ಈ ಕಷಾಯಕ್ಕೆ ತುಪ್ಪ ವರ್ಜ್ಯ.

೧೧ ಕಾಕುಳ್ಳಿ ಬೂದಿಯಲ್ಲಿ ಅಜ್ವಾನದ ಚೂರ್ಣವನ್ನು ಬೆರಸಿ ಸರ್ವಾವಯವಗಳಿಗೆ ತಿಕ್ಕಬೇಕು.

೧೨ ನಾಗಕೇಶರಿಯ ಚೂರ್ಣವನ್ನು ಸಕ್ಕರೆಯೊಡನೆ ಕೊಡತಕ್ಕದ್ದು.

೧೩ ನೆಲವರಿಯ (ಸೋನಾಮುಖಿಯ) ೧|| ಮಾಸಿ ಚೂರ್ಣವನ್ನು ಮಜ್ಜಿಗೆಯೊಡನೆ ಕೊಡಬೇಕು; ಆದರೆ ಜ್ವರದ ವೇಗವು ಹೆಚ್ಚಿದ್ದಾಗ ಇದನ್ನು ಕೊಡಲಾಗದು.

೧೪ ಹೆಚ್ಚಾಗಿ ಬೆವರು ಬರುವದು, ಮೈ ತಣ್ಣಗಾಗುವದು ಮತ್ತು ರುಧಿರಾಭಿಸರಣವು ಅಂತರವೇಗವಾಗಿದ್ದಾಗ ಧತ್ತೂರದ ಎಲೆಯ ಒಂದು ಸವಟು ರಸದಲ್ಲಿ ಅಷ್ಟೇ ಜೇನತುಪ್ಪ ಹಾಕಿ ಕೊಡುವದು.

೧೫ ಅತಿ ಬೆವರು ಹಾಗು ಅತಿಸಾರವಿದ್ದರೆ ಕಾಲು ಗುಂಜಿ ಅಫುವನ್ನು ತುಳಸಿಯ ರಸದೊಡನೆ ಇಲ್ಲವೆ ವೀಳ್ಯದೆಲೆಯ ರಸದೊಡನೆ ಕೊಡತಕ್ಕದ್ದು.

## (೫) ಜ್ವರದಲ್ಲಿ ನಾಲಿಗೆ ಕಪ್ಪಾದರೆ ಉಪಾಯ.

೧ ಕರೇ ಏಡಿಯನ್ನು ಸುಟ್ಟು ಬೂದಿ ಮಾಡಿ, ಉದ್ದಿನಕಾಳಷ್ಟು ಆ ಬೂದಿಯನ್ನು ರೋಗಿಯ ನಾಲಿಗೆಗೆ ತಿಕ್ಕತಕ್ಕದ್ದು. ಅದರಿಂದ ನಾಲಿಗೆಯ ದೋಷದ ನಿವಾರಣವಾಗುತ್ತದೆ. ನಾಲಿಗೆಗೆ ಮುಳ್ಳು ಬಂದಿದ್ದರೆ ಇಲ್ಲವೆ ಒಡಒಡಕಾಗಿದ್ದರೆ ನೆಲವರಿಯ ನೊಪ್ಪಿನ ಚೂರ್ಣವನ್ನು ಜೇನತುಪ್ಪದೊಡನೆ ತಿಕ್ಕಬೇಕು.

## (೬) ಜ್ವರವಿರುವಾಗಲೇ ಪುನಃ ಜ್ವರ ಬರುವದು.

ಲಕ್ಷಣ:—ಮೊದಲು ಮೈಯಲ್ಲಿ ಬಂದ ಜ್ವರವು ಇನ್ನೂ ಪೂರಾ ಆರದಿರುವಾಗಲೆ ಪುನಃ ಹೆಚ್ಚು ಜ್ವರ ಬರುತ್ತವೆ. ಒಮ್ಮೊಮ್ಮೆ ಸಂಪೂರ್ಣ ಆರಿದಂತೆ ಭಾಸವಾಗುವಷ್ಟರಲ್ಲಿ ಪುನಃ ಬರುತ್ತವೆ ಈ ಜ್ವರಗಳು ಹಗಲಲ್ಲಿ ೩ನೇ ಪ್ರಹರದಲ್ಲಿ ಹೆಚ್ಚಾಗಿ ಬರುತ್ತವೆ. ಕೆಲಕೆಲವು ವೇಳೆ ಹಗಲು ಹೆಚ್ಚು ಬಂದ ಜ್ವರಗಳು ಕಡಿಮೆಯಾಗಿ ಅಪರಾತ್ರಿಯಲ್ಲಿ ಬರುತ್ತವೆ. ಈ ಜ್ವರವು ವಿಷಮಜ್ವರಗಳೊಳಗಿನ ಒಂದು ಪ್ರಬೇಧವಾಗಿದೆ. ಇದರ ಲಕ್ಷಣಗಳಾದರೂ ಬಹುಮಟ್ಟಿಗೆ ವಿಷಮಜ್ವರದಂತೆಯೇ ಇರುತ್ತವೆ.

### ಉಪಾಯಗಳು.

೧ ಕಚೋರ, ಶುಂಠಿ, ಕಲ್ಲುಸಬ್ಬಸಿಗಿ, ದೇವದಾರು, ನೆಲಿಂಗಳ, ಜೇಕಿನಗಡ್ಡೆ, ನೆಲಬೇವು, ನೆಲಗುಳ್ಳಬೇರು, ಕಟುಕರೋಣಿ, ಅಮೃತಬಳ್ಳಿ, ಇವುಗಳ ಅಷ್ಟಮಾಂಶ ಕಷಾಯ ಮಾಡಿ ಆರಿಸಿ, ಹಿಪ್ಪಲಿಚೂರ್ಣ ಹಾಗು ಜೇನತುಪ್ಪ ಹಾಕಿ ಕುಡಿಸಬೇಕು. ಇದರಿಂದ ಎಲ್ಲ ದೋಷಗಳೂ ಕಡಿಮೆಯಾಗುತ್ತವೆ. ಇದು ಈ ಜ್ವರಗಳಿಗೆ ಉತ್ತಮವಾದ ಔಷಧವು. ಇದಕ್ಕೆ ಶಠ್ಯಾದಿ ಕಷಾಯವೆನ್ನುವರು.

೨ ದೇವದಾರು, ಹವೀಜ, ಶುಂಠಿ, ನೆಲಗುಳ್ಳಬೇರು, ಚಪ್ಪರಬದನೇಬೇರು, ಕಲ್ಲುಸಬ್ಬಸಿಗಿ, ಅಮೃತಬಳ್ಳಿ ಇವುಗಳ ಅಷ್ಟಮಾಂಶ ಕಾಢೆಮಾಡಿ ಆರಿಸಿ ಜೇನತುಪ್ಪ ಹಾಕಿ ಕೊಡತಕ್ಕದ್ದು.

೩ ಮೃತ್ಯುಂಜಯ ಮಾತ್ರೆಯನ್ನು ತುಳಸೀರಸ-ಜೇನುತುಪ್ಪಗಳೊಡನೆ ಕೊಡುವದು.

## (೭) ತ್ರಿದೋಷದಿಂದ ಮಾತು ಕಟ್ಟಾದರೆ ಉಪಾಯ.

೧ ತುತ್ತಿದ ಅರಳಿನ ಪುಡಿಯನ್ನು ಮೂಗಿಗೆ ಹಚ್ಚಬೇಕು. ಸತ್ತಂತೆ ಬಿದ್ದುಕೊಂಡಿದ್ದರೂ ಮಾತಾಡುವನು.

೨ ಎಕ್ಕೀ ಹಾಲಿನಲ್ಲಿ ಕಾಕುಳ್ಳ ಬೂದಿಯನ್ನು ಕೊಯ್ಸಿ ಒಣಗಿಸಿ ಪುಡಿ

ಮಾಡಿ, ಕುಡಿಗಿಸಲ್ಲಿ ಕೊಳವೆಯಿಂದ ಊದಬೇಕು. ಶೀನು ಬಂದು ಮೈಮೇಲೆ ಎಚ್ಚರ ಒರುವದು.

## (೮) ಜ್ವರದಲ್ಲಿ ವಾಯುವಾದರೆ ಉಪಾಯಗಳು.

೧ ೧ ತೊಲಿ ನುಗ್ಗೀರಸ, ಕಾಲು ತೊಲಿ ಹಿಪ್ಪಲಿ, ೧ ತೊಲಿ ತುಪ್ಪ, ಅರ್ಧತೊಲಿಜೇನುತುಪ್ಪ ಕೂಡಿಸಿ ಶಕ್ತಿಮಾನದಂತೆ ಕೊಡುವದು.

೨ ವಾಯುವು ತಲೆಗೇರಿದ್ದರೆ:—ಗೋಮೂತ್ರದಲ್ಲಿ ಸಾಸುವೆ ಹಾಗು ರಾಗೀಹಿಟ್ಟು ಹಾಕಿ, ನಾದಿ ಕೈರೊಟ್ಟಿ ಮಾಡಿ ಒಂದೇ ಮೈಯನ್ನು ಹಂಚಿನ ಮೇಲೆ ಹಾಕಿ ಸುಟ್ಟು, ಅದನ್ನು ತಲೆಯ ಮೇಲೆ ಹಾಕಿ ಕಟ್ಟಬೇಕು. ವಾಯು ಇಳಿದ ಬಳಿಕ ತೆಗೆದೊಗೆಯಬೇಕು,

೩ ಲೆಕ್ಕೀಸೊಪ್ಪಿನಲ್ಲಿ ಉಪ್ಪು ಹಾಕಿ ಅರೆದು ತಲೆಗೆ ಕಟ್ಟಬೇಕು.

೪ ಹೇಮಗರ್ಭ ಮಾತ್ರೆಯನ್ನು ಅಲ್ಲದ ರಸ ಹಾಗು ಜೇನುತುಪ್ಪಗಳೊಡನೆ ಕೊಡಬೇಕು.

೫ ಶುದ್ಧ ಪಾರಜ-ಗಂಧಕಗಳನ್ನು ತಕ್ಕೊಂಡು ಕಾಡಿಗೆ ಮಾಡಿ, ಅದರಲ್ಲಿ ಬಳೆಗಾರ, ನೇಪಾಳದ ಬೇರು, ಧತ್ತೂರ ಬೀಜ ಇವುಗಳನ್ನು ಸಮಭಾಗ ಕೂಡಿಸಿ ಅರೆದು, ಅದಕ್ಕೆ ಧತ್ತೂರಬೀಜದ ಕಷಾಯ ಹಾಗು ನೇಪಾಳದ ಬೇರಿನ ಕಷಾಯಗಳ ೩-೩ ಭಾವನೆಗಳನ್ನು ಪ್ರತ್ಯೇಕವಾಗಿ ಕೊಟ್ಟು, ಅರ್ಧ ಗುಂಜಿಯಷ್ಟು ಗುಳಿಗೆ ಕಟ್ಟಬೇಕು. ಅನುಪಾನಕ್ಕಾಗಿ ಅಲ್ಲದ ರಸ ಹಾಗು ಜೇನುತುಪ್ಪಗಳನ್ನು ಯೋಜಿಸಬೇಕು. ಇದರಿಂದ ವಿಷಮಜ್ವರ, ನವಜ್ವರ, ಪ್ಲೇಗು ಮುಂತಾದ ಎಲ್ಲ ತೀವ್ರಜ್ವರಗಳ ನಿವಾರಣವಾಗುತ್ತದೆ. ರೋಗಿಯು ನಿಸ್ತೇಜ ಹಾಗು ಅಶಕ್ತನಾದಾಗ್ಗೆ ಈ ಮಾತ್ರೆಯನ್ನು ಕೊಟ್ಟರೆ ಉತ್ತೇಜಿತನಾಗಿ ತೋರುವನು. ಈ ಮಾತ್ರೆಯಿಂದ ಜ್ವರದಲ್ಲಾಗುವ ವಾಯುವಿನ ಶಮನವಾಗುತ್ತದೆ. ಜ್ವರಾತಿಸಾರ, ಆಮಾತಿಸಾರ, ಸಂಗ್ರಹಿಣಿ, ಜ್ವರದಲ್ಲಿ ಹೊಟ್ಟೆಯುಬ್ಬುವದು ಇವೆಲ್ಲ ಈ ಔಷಧದಿಂದ ಗುಣವಾಗುತ್ತವೆ

೬ ಮೃತೋತ್ಥಾಪಕ ರಸ:—ಪಾರಜ, ಗಂಧಕ, ಮನಶೀಲ, ನೇಪಾಳದ ಬೇರು, ಇಂಗಳಾರ ಇವನ್ನು ಶುದ್ಧಮಾಡಿ ತಕ್ಕೊಂಡು ಅವುಗಳಲ್ಲಿ ಅಭ್ರಕಭಸ್ಮ, ತಾಮ್ರಭಸ್ಮ, ಲೋಹಭಸ್ಮ, ಸುವರ್ಣಮಾಕ್ಷಿಕಭಸ್ಮ, ಹರತಾಳಭಸ್ಮ ಇವನ್ನೆಲ್ಲ ಸಮಭಾಗ ಕೂಡಿಸಿ, ಅವಕ್ಕೆ ಮಜ್ಜಿಗೆ ಗಿಡ, ಜಂಬೀರನಿಂಬ, ಹುಳಚುಕ್ಕ, ಲೆಕ್ಕಿ, ಕಾಡಕವಡೀಕಾಯಿ ಇವುಗಳ ಪ್ರತ್ಯೇಕ ಪುಟ ಕೊಟ್ಟು ಅರೆದು, ಒಂದು ಗಡಿಗೆಯಲ್ಲಿ ಹಾಕಿ ಬಾಯಿಗೆ ಮುಚ್ಚು, ಅರಿವೆ ಹಾಕಿ ಭೂಧರ ಯಂತ್ರದಲ್ಲಿ ನಾಲ್ಕು ಪ್ರಹರಗಳ ವರೆಗೆ ಪಚನ ಮಾಡಬೇಕು. ಬಳಿಕ

ಚಿತ್ರಮೂಲದ ರಸದಲ್ಲಿ ೨ ಪ್ರಹರದ ವರೆಗೆ ಅರೆದು, ಗುಲಗಂಜಿ ಪ್ರಮಾಣದ ಗುಳಿಗೆಗಳನ್ನು ಮಾಡಬೇಕು. ಇದಕ್ಕೆ ಅನುಪಾನ:—ಅಲ್ಲದರಸ ಹಾಗು ಜೇನು ತುಪ್ಪ. ಈ ಮಾತ್ರೆಯನ್ನು ಪ್ರಲಾಪಕ ಸನ್ನಿಪಾತಕ್ಕಾಗಿ ಯೋಜಿಸಿದ್ದರೂ, ಇದು ಎಲ್ಲ ಪ್ರಕಾರದ ತೀವ್ರಜ್ವರಗಳಿಗೂ, ಸನ್ನಿಪಾತಗಳಿಗೂ ಚೆನ್ನಾಗಿ ಉಪಯೋಗವಾಗುತ್ತದೆ. ಸನ್ನಿಪಾತದೊಳಗಿನ ಎಚ್ಚರದಪ್ಪೋಣ, ಅತಿಸಾರ, ವಾತ, ನಡುಗು, ಬಡಬಡಿಕೆಗಳು ಇದರಿಂದ ಶಮನವಾಗುತ್ತದೆ. ರೋಗಿಯು ನಾಡಿಯು ಗತಿಯೂ ಸುಧಾರಿಸುತ್ತದೆ; ಮತ್ತು ಹುಶಾರಿಯೆನಿಸುತ್ತದೆ. ಈ ಮಾತ್ರೆಯನ್ನು ಕೊಟ್ಟ ಬಳಿಕ ಸೌಮ್ಯ ಔಷಧ ಕೊಡತಕ್ಕದ್ದು; ಜ್ವರದ ಧೋರಣ ತಿಳಿದು, ಪಥ್ಯ ಮಾಡಿಸಬೇಕು.

೭ ಜ್ವರದಲ್ಲಿ ಬಡಬಡಿಸುತ್ತಿದ್ದರೆ ಇಲ್ಲವೆ ತೀರ ಮೆಲ್ಲಗೆ ಮಾತಾಡುತ್ತಿದ್ದರೆ:—ತಾಸು ತಾಸಿಗೆ ಅರ್ಧ ಗುಂಜಿ ಕರ್ಪೂರವನ್ನು ತಿನಿಸಬೇಕು.

## (೯) ಜ್ವರದಲ್ಲಿ ತಲೆನೋವೆದ್ದರೆ ಉಪಾಯ.

೧ ಶುಂಠಿ, ದಾಲಚಿನ್ನಿಗಳನ್ನು ಹಾಲಲ್ಲಿ ತೆಯ್ದು ತಲೆಗೆ ಹಚ್ಚಬೇಕು. ಶೀತದಿಂದ ತಲೆಶೂಲಿ ಎದ್ದಿದ್ದರೆ ಇದರಿಂದ ನಿಲ್ಲುತ್ತದೆ.

೨ ಉಷ್ಣದಿಂದ ಇಲ್ಲವೆ ಪಿತ್ಥದಿಂದ ತಲೆ ನೋಯುತ್ತಿದ್ದರೆ ರಬ್ಬರಿನ ಚೀಲದಲ್ಲಿ ಬರ್ಫವನ್ನು ಹಾಕಿ ತಲೆಯಮೇಲಿಡಬೇಕು.

೩ ವಾತದಿಂದ ನೋಯುತ್ತಿದ್ದರೆ:—ಬಿಸಿನೀರಿನಲ್ಲಿ ಎದ್ದಿದ ಅರಿವೆಯ ಮಡಿಕೆ ಮಾಡಿ ತಲೆಯಮೇಲಿಡಬೇಕು. ಇಲ್ಲವೆ ರಬ್ಬರಿನ ಚೀಲದಲ್ಲಿ ಬಿಸಿನೀರನ್ನು ತುಂಬಿ ಅದನ್ನು ತಲೆಯ ಮೇಲಿಡಬೇಕು.

೪ ಜ್ವರದ ಉಷ್ಣತೆಯು ತಲೆಗೆ ತಲುಪಿದರೆ ತೀವ್ರ ಪ್ರಾಣಹಾನಿಯಾಗುವ ಸಂಭವವಿರುತ್ತದೆ. ಇಲ್ಲವೆ ಮೂರ್ಛೆ, ಭ್ರಮಗಳಾದರೂ ಆಗುವ ಸಂಭವ ವಿರುತ್ತದಾದ್ದರಿಂದ ತಲೆಯ ಮೇಲೆ ತಣ್ಣೀರಿನ ಪಟ್ಟಿ ಇಡಬೇಕು; ಇಲ್ಲವೆ ಮೇಲೆ ಹೇಳಿದಂತೆ ಬರ್ಫವನ್ನಿಡಬೇಕು; ಅಥವಾ ಕೋಲನ್ ವಾಟರದ ಪಟ್ಟಿಯನ್ನು ಆಗಾಗ್ಗೆ ಇಡಬೇಕು.

---

## (೧೦) ಜ್ವರದೊಳಗೆ ಭ್ರಮವಾದರೆ.

೧ ಜ್ವರದೊಳಗೆ ಅಥವಾ ಬೇರೆ ಸಮಯದಲ್ಲಿ ಚಿತ್ತಭ್ರಮವಾಗಿ ನಿದ್ದೆ ಬರುವದಿಲ್ಲ. ಅದಕ್ಕೆ ಭಂಗಿಯ ೧॥ ಮಾಸಿ ಅರ್ಕವನ್ನು ತುಪ್ಪದಲ್ಲಿ ಕೊಡಬೇಕು. ಇಲ್ಲವೆ ೧ ಮಾಸಿ ಭಂಗಿಯನ್ನು ಹಾಲೊಳಗೆ ಕೊಡಬೇಕು. ಇದಕ್ಕೆ ಉತಾರ ಕೇಶಲ ಎಲೆ.

೨ ಭಂಗಿ ಸೊಪ್ಪನ್ನು ಆಡಿನ ಇಲ್ಲವೆ ಆಕಳ ಹಾಲಲ್ಲಿ ಕುಚ್ಚಿ ಕೈ ಕಾಲುಗಳಿಗೂ ತಲೆಗೂ ತಿಕ್ಕಿದರೆ ಕೂಡಲೆ ನಿದ್ದೆ ಬರುತ್ತದೆ.

೩ ಅಫೂದ ಅರ್ಕವನ್ನು ಬಗಲೊಳಗೆ ಜೀರಳಿಯಿಂದ ಚಿಮ್ಮಬೇಕು; ಆದರೆ ಮಲಾವರೋಧವಾಗಿದ್ದರೆ ಮಾತ್ರ ಈ ಉಪಾಯ ಮಾಡಬಾರದು.

---

## (೧೧) ನಾಲಿಗೆಯ ಮೇಲೆ ಮುಳ್ಳು ಎದ್ದಿದ್ದರೆ,

೧ ನೆಲವರಿ (ಸೋನಾಮುಖಿ) ಯ ಚೂರ್ಣವನ್ನು ಜೇನುತುಪ್ಪದಲ್ಲಿ ಕಲಿಸಿ ನಾಲಿಗೆಗೆ ತಿಕ್ಕಬೇಕು.

೨ ಕರೇಖರ್ಜೂರವನ್ನು ಜೇನತುಪ್ಪದಲ್ಲಿ ಇಲ್ಲವೆ ನೀರಲ್ಲಿ ತೆಯ್ದು ನಾಲಿಗೆಗೆ ತಿಕ್ಕಬೇಕು.

---

## (೧೨) ಜ್ವರರೋಗಿಗೆ ಇಲ್ಲವೆ ಇತರ ರೋಗಿಗಳಿಗೆ ಶಾಸ್ತ್ರೋಕ್ತ ಸ್ನಾನ ಮಾಡಿಸುವ ವಿಧಾನವು.

ಮಿಕ್ಕ ಎಲ್ಲ ರೋಗಿಗಳಿಗೆ ಸ್ನಾನ ಮಾಡಿಸುವದೇ ಪ್ರಶಸ್ತವಾಗಿದೆ; ಆದರೆ ಜ್ವರರೋಗಿಗೆ ಹಾಗಲ್ಲ; ಆದರೂ ಅವನಿಗೆ ಬೇರೆ ಬಗೆಯಿಂದ ಉಷ್ಣತೆ ಕಡಿಮೆ ಮಾಡುವ ಸಲುವಾಗಿ ಸ್ನಾನಮಾಡಿಸುವದು ಅತ್ಯವಶ್ಯವಾಗಿರುತ್ತದೆ. ಅವನ ಎಲ್ಲ ಅವಯವಗಳಿಗೆ ಒಮ್ಮೆಲೆ ಸ್ನಾನ ಮಾಡಿಸುವದು ಬಹು ಘಾತುಕವು. ಅವಗಾಹನ, ಪರಿಷೇಕ, ಆರ್ದ್ರವಸ್ತ್ರಬಂಧನ, ಶೀತಲೇಪನ, ಶೀತವಸ್ತ್ರಪರಿಧಾನ ಮುಂತಾದ ಕ್ರಿಯೆಗಳು, ಬೇರೆ ಬೇರೆ ಅಂಗ-ಪ್ರತ್ಯಂಗಗಳಿಗೆ ಹೆಚ್ಚು ಕಡಿಮೆ ಪ್ರಮಾಣದಿಂದ ಮಾಡಿಸಲಿಕ್ಕೆ ಅಡ್ಡಿಯಿರುವದಿಲ್ಲ. ಇದರಂತೆ ಪ್ರತಿಯೊಂದು ಜ್ವರದಲ್ಲಿ ವಿಶೇಷವಾಗಿ ವಿಷಮಜ್ವರದಲ್ಲಿ ತಲೆಯ ಮೇಲೆ ಬರ್ಫ ಇಲ್ಲವೆ ತಣ್ಣೀರಿನ ಪಟ್ಟಿಯನ್ನು ಅವಶ್ಯವಾಗಿ ಹಾಕಬೇಕು; ಹಾಗು ಅದನ್ನು ಆಗಿಂದಾಗ್ಗೆ ಬದಲಿಸಬೇಕು. ಅದರಿಂದ ಜ್ವರದ ವೇಗವು ಕುಗ್ಗಿ ನಾಡಿಯು ಶಾಂತವಾಗಿ ಹಾರಹತ್ತುತ್ತದೆ; ಆದರೆ ೧೦೦ ಇಲ್ಲವೆ ಅದಕ್ಕೂ ಕಡಿಮೆ ಅಂಶಉಷ್ಣತೆಯು ರೋಗಿಯ ಮೈಯಲ್ಲಿ ಕಂಡು ಬಂದರೆ ಮೇಲಿನ ಉಪಾಯವನ್ನು ಒಮ್ಮೆಲೆ ನಿಲ್ಲಿಸಿ ಬಿಡಬೇಕು. ರೋಗಿಗೆ ಸ್ನಾನ ಮಾಡಿಸುವಾಗಲೂ, ಶೀತಲಲೇಪ ಮಾಡುವಾಗಲೂ ಅವನ ಶರೀರವು ತೀರ ತಂಪಾದರೆ ಇಲ್ಲವೆ ಅವನಿಗೆ ಚಳಿಚಳಿಯಾಗಹತ್ತಿದರೆ ಅಥವಾ ಹೆಚ್ಚು ದುಶ್ಚಿಹ್ನಗಳು ತೋರಿಬಂದರೆ ಕೂಡಲೆ ಆ ಉಪಾಯಗಳನ್ನು ಬಿಟ್ಟು, ಬೆಚ್ಚನ್ನ ಅರಿವೆ-ಅಂಚಡಿಗಳನ್ನು ಉಡಿಸಿ, ಹೊರಿಸಿ ಕುಸ ಕಾಸಬೇಕು

ಒಟ್ಟಿನಲ್ಲಿ ಸಮೋಷ್ಣವಾಗುವದರ ಕಡೆಗೆ ಲಕ್ಷ್ಯವಿಡಬೇಕು, ಅದರಲ್ಲಿ ತಪ್ಪಿದರೆ ರೋಗಿಯು ಬೇನೆಯು ಅಸಾಧ್ಯವಾಗುವದೆಂಬದನ್ನು ಚೆನ್ನಾಗಿ ತಿಳಿದಿರಬೇಕು; ಆದರೆ ಯಾವಾಗ ಜ್ವರದ ಪ್ರಮಾಣವು ೧೦೫ ಅಂಶಕ್ಕಿಂತ ಹೆಚ್ಚು ಇರುವದೆಂದು ಥರ್ಮಾಮೀಟರದಿಂದ ತಿಳಿಯುವದೋ, ಆಗ ಮಾತ್ರ ಶೀತಲೇಪ ಇಲ್ಲವೆ ತಲೆಯ ಮೇಲೆ ಬರ್ಫ ಇಲ್ಲವೆ ತಣ್ಣೀರಿನ ಪಟ್ಟಿ ಇಡಲಿಕ್ಕೆ ಕೊಂಚವೂ ಅನುಮಾನ-ವಿಲಂಬ-ಆಲಸ್ಯಗಳನ್ನು ಮಾಡಕೂಡದು. ಯಾವ ಕಾಲಕ್ಕೆ ವಾಯುವಾಗಿ ರೋಗಿಗೆ ಉನ್ಮಾದವು ಪ್ರಾಪ್ತವಾಗುವದೋ, ಆಗ ರೋಗಿಯ ತಲೆಯ ಮೇಲೆ ತಣ್ಣೀರಿನ ಪಟ್ಟಿಯಿಟ್ಟು, ಚಂದನ, ಬಾಳದಬೇರು, ಕರ್ಪೂರ ಇವುಗಳ ಶೀತಲೇಪ ಮಾಡುವದೂ, ತಲೆಗೆ ಬರ್ಫ ಕಟ್ಟುವದೂ ಇಲ್ಲವೆ ತಣ್ಣೀರಿನ ಪಟ್ಟಿಯನ್ನು ಪುನಃ ಪುನಃ ತಣ್ಣೀರಿನಲ್ಲಿ ಎದ್ದಿ ಇಡುವದೂ ಅಗತ್ಯವಾಗಿದೆಯೆಂಬದನ್ನು ಸ್ವಾನುಭವದಿಂದ ಹೇಳಬಲ್ಲೆವು. ಈ ಉಪಾಯಗಳಿಂದ ಎಷ್ಟೋ ಪ್ರಸಂಗಗಳಲ್ಲಿ ಯಶ ದೊರೆತಿರುತ್ತದೆ ಎಷ್ಟೋ ಜನ ವೈದ್ಯರು ಶೀತ, ಕೆಮ್ಮು ಮುಂತಾದವುಗಳಿಗೆ ಹೆದರಿ ಮೇಲಿನ ಉಪಾಯಗಳನ್ನು ಮಾಡುವದಿಲ್ಲ; ಆದರೆ ನಾನು ಅವರಿಗೆ ಖಾತ್ರಿಪೂರ್ವಕ ತಿಳಿಸುವದೇನಂದರೆ, ಈ ಉಪಾಯವನ್ನು ಚಾತುರ್ಯದಿಂದ ಅಗತ್ಯವಾಗಿ ಮಾಡಬೇಕು. ನಮ್ಮ ವೈದ್ಯಕದಲ್ಲಿ ಕಾಲಕೂಟ, ರಾಜಚಂಡೇಶ್ವರ ಮುಂತಾದ ಪ್ರಖರ ಮಾತ್ರೆಗಳನ್ನು ಕೊಟ್ಟು ಬಳಿಕ ಅವುಗಳ ಶಾಂತಿಗಾಗಿ ಶೀತೋಪಚಾರ ಮಾಡಲಿಕ್ಕೆ ಹೇಳಿಯೇ ಇದೆ. ಹೀಗಿದ್ದು ವೈದ್ಯರು ಮೇಲಿನ ಉಪಚಾರ ಮಾಡಲಿಕ್ಕೆ ಹೆದರುತ್ತಾರೆ. ಹೀಗೆ ಅವರು ಹೆದರುವ ಕಾರಣವೇನಂದರೆ, ಅವರಲ್ಲಿಯು ಎಷ್ಟೋ ಜನರಿಗೆ ಆ ಉಪಾಯದ ಮರ್ಮವು ತಿಳಿದಿರುವದಿಲ್ಲ; ಹಾಗು ಹಾಗೆ ಶೀತೋಪಚಾರ ಮಾಡಿದನಂತರ ಮುಂದೆ ಹ್ಯಾಗೆ ಮತ್ತು ಎಷ್ಟು ಎಚ್ಚರಪಡಬೇಕೆಂಬದೂ ಅವರಿಗೆ ತಿಳಿದಿರುವದಿಲ್ಲ; ಅದ್ದರಿಂದ ಇಂಥ ಪ್ರಸಂಗಗಳಲ್ಲಿ ಹೊಟ್ಟೆಯಲ್ಲಿ ಉಷ್ಣವೀರ್ಯದ ಮಾತ್ರೆಗಳನ್ನು ಕೊಟ್ಟು, ಬಾಹ್ಯತಃ ಹೀಗೆ ಶೀತೋಪಚಾರ ಮಾಡಲಿಕ್ಕೆ ಯಾರೂ ಹೆದರಬಾರದು. ಇದರಲ್ಲಿಯು ಮುಖ್ಯ ತತ್ವವೇನಂದರೆ, ದೇಹದ ಸಮೋಷ್ಣೀಕರಣ ಮಾಡಬೇಕೆಂಬದನ್ನು ಚೆನ್ನಾಗಿ ಲಕ್ಷ್ಯದಲ್ಲಿಟ್ಟಿರಾಯಿತು.

## (೧೩) ಜ್ವರದೊಳಗೆ ಕೈಕಾಲು ಹರಿಯುತ್ತಿದ್ದರೆ ಉಪಾಯ.

೧ ಪೂರ್ವಳೀ ತೊಗಟಿಯ ರಸದಲ್ಲಿ ಮೆಣಸಿನ ಪುಡಿ ಅರೆದು ಅದನ್ನು ಕೈಕಾಲುಗಳಿಗೆ ತಿಕ್ಕತಕ್ಕದ್ದು.

೨ ಹುಣಸೀಹುಳಿ, ಇಲ್ಲವೆ ಮಜ್ಜಿಗೆಗಳಲ್ಲಿ ಅರಿಷಿಣ-ಉಪ್ಪು ಹಾಕಿ ಅಂಗಾ

ಲಿಗೆ ಹಚ್ಚಿ ಅದರ ಮೇಲೆ ಮುಗಿಳಕ್ಕಿಯನ್ನು ಕೆಂಪಗೆ ಕಾಸಿ ಬರೆ ಹತ್ತಿದಂತೆ ಎಳೆಯಬೇಕು. ಮತ್ತು ಕಾಲುಗಳನ್ನು ಅರಿವೆಯಿಂದ ಒರಿಸಿ, ಅರಿವೆ ಕಟ್ಟಬೇಕು. ಇದರಿಂದ ಕೈಕಾಲು ಹರಿಯುವದು ನಿಲ್ಲುವದು, ಈ ಬರೆ ಕೊಡುವ ಕೆಲಸವನ್ನು ಒಳ್ಳೆ ಮನುಷ್ಯನಿಂದಲೇ ಮಾಡಿಸತಕ್ಕದ್ದು.

೩ ರಬ್ಬರಿನ ಚೀಲದಲ್ಲಿ ಎಸರು ಬಂದ ನೀರು ಹಾಕಿ, ಆ ಚೀಲದಿಂದ ಕಾಲಿನ ನರಗಳನ್ನು ಕಾಸಬೇಕು. (ರಬ್ಬರಿನ ಚೀಲಗಳು ಇಂಗ್ಲಿಷ ಔಷಧಿಗಳನ್ನು ಮಾರುವ ಅಂಗಡಿಗಳಲ್ಲಿ ಮಾರಲಿಕ್ಕೆ ದೊರೆಯುತ್ತವೆ.)

೪ ಸೀಸೆಯಲ್ಲಿ ಕಾದ ನೀರು ತುಂಬಿ ಬೆಣೆ ಹಾಕಿ ಆ ಸೀಸೆಯಿಂದ ಕಾಲು ನರಗಳನ್ನು ಕಾಸತಕ್ಕದ್ದು.

## (೧೪) ಕೈ ಕಾಲು ಉರಿಯುತ್ತಿದ್ದರೆ ಉಪಾಯ.

೧ ಮದರಂಗೀ ಸೊಪ್ಪನ್ನು ಕೈ ಕಾಲುಗಳಿಗೆ ಕಟ್ಟತಕ್ಕದ್ದು.

೨ ಗಾಂಜೆ (ಭಂಗಿ) ಯನ್ನು ಆಡಿನ ಹಾಲಲ್ಲಿ ಕುದಿಸಿ ಕೈ ಕಾಲುಗಳಿಗೆ ತಿಕ್ಕುವದು. ಇದರಿಂದ ದಾಹವು ಶಾಂತವಾಗಿ ನಿದ್ದೆ ಬರುವದು.

೩ ಕಂಚಿನ ಬಟ್ಟಲದಿಂದ ಕೈ-ಕಾಲು ತಿಕ್ಕತಕ್ಕದು.

## (೧೫) ಜ್ವರದೊಳಗೆ ಅಶಕ್ತತೆ ಇಲ್ಲವೆ ಗ್ಲಾನಿ ಯುಂಟಾದರೆ ಉಪಾಯ.

ಶಕ್ತಿಪಾತ ಲಕ್ಷಣ:— ರೋಗಿಯು ನಿಶ್ಚೇಷ್ಟಿತನಾಗಿ ಬೀಳುತ್ತಾನೆ; ನಿದ್ದೆಯಲ್ಲಿರುವಂತೆ ಭಾಸವಾಗುತ್ತದೆ; ದೇಹವು ಜಡ ಹಾಗು ಗಲಿತವಾಗುತ್ತದೆ; ಮಾತಾಡುವದಾಗುವದಿಲ್ಲ; ಕಣ್ಣಿಗೆ ಮಬ್ಬು ಬರುತ್ತದೆ. ಇವೆಲ್ಲ ಶಕ್ತಿಪಾತವಾದ ಲಕ್ಷಣಗಳು. ಇದಕ್ಕೆ ಉಪಾಯಗಳು:—

೧ ಹುಸ ಹಿರದಿನ ಬ್ರ್ಯಾಂಡಿ(ಕುಡಿಯುವ ಇಂಗ್ಲಿಷ ಸರಾ) ಇಲ್ಲವೆ ದೇಶಿ ಮದ್ಯವನ್ನು ಕೊಡತಕ್ಕದ್ದು.

೨ ಸ್ವಲ್ಪ ಕಸ್ತೂರಿಯನ್ನು ಮೂಸಿ ನೋಡಿಸಬೇಕು.

೩ ಹೇಮಗರ್ಭ ಮಾತ್ರೆಯನ್ನು ತುಳಸಿಯ ರಸ ಹಾಗು ಜೇನುತುಪ್ಪಗಳೊಡನೆ ಕೊಡತಕ್ಕದ್ದು.

## (೧೬) ತೀವ್ರಜ್ವರದೊಳಗೆ ಮಲೋತ್ಸರ್ಗವಾಗದಿದ್ದರೆ ಉಪಾಯ.

೧ ೨-೩ ತೊಲಿ ಟರ್ಪೇಂಟಾಯಿನ್ನನ್ನು, ೪೦ ತೊಲಿ ಗಂಜಿ ಇಲ್ಲವೆ ಕಾಟಿಯಲ್ಲಿ ಕೂಡಿಸಿ, ಅದರ ಬಸ್ತಿ ಕೊಡಬೇಕು. ಅಥವಾ ಚಿ. ಪ್ರ. ದೊಳಗಿನ ಬಸ್ತಿ ಪ್ರಕರಣದಲ್ಲಿಯ ಯೋಗ್ಯ ಕಷಾಯದಿಂದ ಬಸ್ತಿ ಕೊಡಬೇಕು.

ತಿ ಎಷ್ಟೋ ಕಷಾಯಗಳಲ್ಲಿ ಸಾರಕ ಔಷಧಗಳ ಯೋಜನೆಯನ್ನು ಆಯಾ ಜ್ವರ ಪ್ರಕರಣದಲ್ಲಿ ಹೇಳಿದೆ. ಆಯಾ ಕಷಾಯ ಇಲ್ಲವೆ ಔಷಧಗಳನ್ನು ಕೊಡತಕ್ಕದ್ದು.

---

## ೪೩ ಜ್ವರ ಮುಕ್ತವಾಗುವ ಪೂರ್ವ ಚಿಹ್ನಗಳು.

ಲಕ್ಷಣ:—ದಾಹವಾಗುತ್ತದೆ, ಬೆವರು ಬರುತ್ತದೆ; ಭ್ರಮ, ನೀರಡಿಕೆ, ನಡುಗು, ಮಲ ನೀರಾಗೋಣ, ಮೂರ್ಛೆ, ನರಳುವದು ಹಾಗು ಮೈಗೆ ಹೊಲಸು ನಾತ ಬರುವದು ಇವೆಲ್ಲ ಲಕ್ಷಣಗಳು ಜ್ವರ ನಿವಾರಣವಾಗುವಾಗ ಆಗುತ್ತಿರುತ್ತವೆ; ಆದರೆ ಈ ಲಕ್ಷಣಗಳು ವಿಶೇಷವಾಗಿ ತ್ರಿದೋಷಜನ್ಯ ಹಾಗು ವಿಷಮಾದಿ ಕಟ್ಟು ಜ್ವರಗಳು ನಿಲ್ಲುವಾಗ ಆಗುತ್ತಿರುತ್ತವೆ. ಸಾಧಾರಣವಾಗಿ ಒಂದು ಇಲ್ಲವೆ ಎರಡೇ ದೋಷಗಳಿಂದುಂಟಾದ ಜ್ವರಗಳು ನಿಲ್ಲುವಾಗ ಮೇಲೆ ಹೇಳಿದ ಎಲ್ಲ ಲಕ್ಷಣಗಳೂ ಆಗುತ್ತವೆಂದು ಹೇಳಲಿಕ್ಕೆ ಬರುವದಿಲ್ಲ. ಆಗಂತುಕ ಜ್ವರಗಳು ಬರೇ ಬೆವರು ಒಂದು ನಿಂತು ಬಿಡುತ್ತಿರುತ್ತವೆ. ಎಷ್ಟೋ ಸಾಧಾರಣ-ಕ್ಷುಲ್ಲಕ ಜ್ವರಗಳು ಬೆವರು ಕೂಡ ಒರದೆ ನಿವಾರಣವಾಗುತ್ತವೆ.

---

## ೪೪ ಜ್ವರ ಮುಕ್ತವಾದ ಲಕ್ಷಣಗಳು.

ಲಕ್ಷಣ:—ಶರೀರವು ಹಗುರಾಗುತ್ತದೆ, ಗ್ಲಾನಿ, ಮೋಹ, ಜ್ವರ ಇವುಗಳ ಶಮನವಾಗುತ್ತದೆ, ಬಾಯಿ ಬರುತ್ತದೆ (ಅಂದರೆ ತುಟಿ ಮುಂತಾದವುಗಳ ಮೇಲೆ ಬಕ್ಕೆಗಳೇಳುವದು), ಕಿವಿಗಳು ಚೆನ್ನಾಗಿ ಕೇಳಿಸಹತ್ತುತ್ತವೆ, ಬೆವರು ಬರುತ್ತದೆ, ತಲೆ ಕಡಿಯಹತ್ತುತ್ತದೆ, ಅನ್ನದ ಮೇಲೆ ಇಚ್ಛೆಯುಂಟಾಗುತ್ತದೆ; ಮತ್ತು ಶೀನುಗಳು ಬರುತ್ತವೆ, ಪ್ರತಿಯೊಂದು ಇಂದ್ರಿಯಗಳು ತಮ್ಮ ವಿಷಯವನ್ನು ತಕ್ಕೊಳ್ಳಲಿಕ್ಕೆ ಸಮರ್ಥವಾಗುತ್ತವೆ, ಚಿತ್ತ ಸ್ವಾಸ್ಥ್ಯವುಂಟಾಗುತ್ತದೆ. ಸುಪ್ರಸನ್ನತೆ ಹಾಗು ಸರ್ವೋಪದ್ರವ ಶಾಂತಿ ಇವು ಜ್ವರ ಮುಕ್ತತೆಯ ಲಕ್ಷಣಗಳಾಗಿರುತ್ತವೆ.

---

## ೪೫ ಸುಖಸಾಧ್ಯ ಲಕ್ಷಣಗಳು.

ಯಾವ ಜ್ವರದಿಂದ ಮನುಷ್ಯನ ಶಕ್ತಿಪಾತವಾಗುವದಿಲ್ಲವೋ, ವಾತಾದಿಗಳ ಕೋಪವು ವಿಶೇಷವಾಗಿರುವದಿಲ್ಲವೋ ಹಾಗು ಜ್ವರದಲ್ಲಾಗುವ ಮೇಲೆ ಹೇಳಿದ ೧೦ ಉಪದ್ರವಗಳು ಹೆಚ್ಚಾಗಿರುವದಿಲ್ಲವೋ ಇಂಥ ಜ್ವರಗಳು ಸುಖಸಾಧ್ಯವಾಗಿವೆಯೆಂದು ತಿಳಿಯತಕ್ಕದ್ದು.

---

## ೪೬. ಅಸಾಧ್ಯ ಲಕ್ಷಣಗಳು.

೧ ಯಾವ ಜ್ವರಗಳು ಪ್ರಾರಂಭದಿಂದಲೂ ಸಂತತ, ಸತತ ಮುಂತಾದ ರೂಪಹೊಂದಿ ವಿಷಮವಾಗಿರುವವೋ ಅವು; ಯಾವ ಜ್ವರವು ಪ್ರಾರಂಭದಿಂದ ಅಪರಾತ್ರಿಯಲ್ಲಿ ಬರುವದೋ ಅದು; ಗಂಭೀರಜ್ವರ ಹಾಗು ಕ್ಷೀಣ ಮತ್ತು ರುಕ್ಷ ಮನುಷ್ಯನಿಗೆ ಬರಹತ್ತಿದ ಜ್ವರ ಇವೆಲ್ಲ ಪ್ರಾಣನಾಶಕಗಳೆಂದೇ ತಿಳಿಯ ತಕ್ಕದ್ದು. (೨) ಹಣೆ ಹಾಗು ಕಿವಿಗಳ ಸಂದುಗಳಲ್ಲಿ ಹೆಚ್ಚು ಬೆವರು ಬಂದು ಸರ್ವಾಂಗಕ್ಕೆ ಜಿಗಿಯಾದ ಅಲ್ಪ ಬೆವರು ಬರುವದೋ ಮತ್ತು ಅವಯವಗಳು ತಣ್ಣಗಾಗುವವೋ ಆ ಜ್ವರಗಳು ಪ್ರಾಣನಾಶಕವೆಂದು ತಿಳಿಯತಕ್ಕದ್ದು. (೩) ಯಾವನು ಜ್ವರದಿಂದ ವ್ಯಾಕುಲವಾಗಿ ಮೂರ್ಛೆ ತಾಳುವನೋ, ಮಲಗಿದವನು ಏಳಲಾರನೋ, ಎದ್ದವನು ಮಲಗಲಾರನೋ; ಹೊರಗೆ ಛಳಿಯಾಗಿ, ಅಂತರಂಗ ದಲ್ಲಿ ದಾಹಯುಕ್ತ ಜ್ವರವಿರುವವೋ ಇಂಥ ಜ್ವರದ ರೋಗಿಯು ಬದುಕುವ ಆಶೆಯನ್ನು ಹಿಡಿಯಬಾರದು. (೪) ಯಾವನ ಹಣೆಗೆ ತಂಪಾದ ಬೆವರು ಬರು ವದೋ, ಇಂದ್ರಿಯಗಳು ಶಿಥಿಲವಾಗಿ ಎಬ್ಬಿಸಿದರೆ ಮೂರ್ಛೆ ತಾಳುವನೋ ಅವನು ಬೇಕಾದಷ್ಟು ಪುಷ್ಟನಾಗಿದ್ದರೂ ಅವನ ಜೀವಕ್ಕೆ ಅಂಜಿಕೆಯೇ ಸರಿ; ಆದರೆ ಇಂಥ ರೋಗಿಗಳು ವಿಶೇಷ ಪ್ರಯತ್ನದಿಂದ ಬದುಕುವದೂ ಉಂಟು. (೫) ಯಾವ ಜ್ವರದಲ್ಲಿ ರೋಮಾಂಚಗಳೇಳುವವೋ, ಕಣ್ಣು ಕೆಂಪಗಾಗಿರು ವವೋ ಮತ್ತು ಹೃದಯದಲ್ಲಿ ಶಸ್ತ್ರಪ್ರಹಾರದಂತೆ ಏಕೋಪ್ರಕಾರವಾದ ಶೂಲಿ ಯಿರುವದೋ, ಮತ್ತು ಗಾಬರಿಯಾದವನೂ, ಬಾಯಿಂದ ಶ್ವಾಸ ಬಿಡುವವ ನೂ ಆದ ರೋಗಿಗೆ ಆ ಜ್ವರವು ಪ್ರಾಣಘಾತಕವೇ ಆಗುತ್ತದೆ. (೬) ಯಾವ ನಿಗೆ ಮಧ್ಯಾಹ್ನದೊಳಗಾಗಿ ಹೆಚ್ಚು ಜ್ವರ ಬರುವದೋ, ಕೆಮ್ಮು ಬರುವದೋ; ಬಲ ಮತ್ತು ಮಾಂಸಗಳ ನಾಶವಾಗುತ್ತದೋ ಅವನನ್ನು ಪ್ರತ್ಯಕ್ಷ ಹೆಣವೇ ಎಂದು ತಿಳಿಯತಕ್ಕದ್ದು. (೭) ಜ್ವರದಲ್ಲಿ ಅಕಸ್ಮಾತ ದಾಹ, ನೀರಡಿಕೆ, ಮೂರ್ಛೆ, ಬಲಕ್ಷಯ, ಸಂಧಿಶೂಲಿ ಈ ಲಕ್ಷಣಗಳಾದರೆ ಆ ರೋಗಿಯು ಆಸನ್ನ ಮರಣನೆಂದೇ ತಿಳಿಯಬೇಕು. (೮) ನಸುಕಿನಲ್ಲಿ ಮುಖಕ್ಕೆ ಹಾಗು ಹಣೆಗೆ ಅತಿ ಬೆವರು ಬಂದರೆ ಅವನು ಬದುಕುವದು ಕಷ್ಟವೇ ಸರಿ. (೯) ಯಾವನಿಗೆ ಮಂದವಾದ ಹಾಗು ಜಿಗಟುಜಿಗಟಾದ ಬೆವರು ಸರ್ವಾಂಗಕ್ಕೆ ಬಂದು ಮೈತಣ್ಣ ಗಾಗುವದೋ ಅವನು ತಾತ್ಕಾಲದಲ್ಲಿ ಸಾಯುತ್ತಾನೆ.

---

## ೪೭. ಸರ್ವ ಜ್ವರಗಳಿಗೂ ಸಾಧಾರಣವಾದ ಪಥ್ಯ ಪದಾರ್ಥಗಳು.

ಹಳೇ ಸಿಲಕಿನ ಭತ್ತದ ಅಕ್ಕಿ ಅನ್ನ, ಜವಿಗೋದಿಯ ರೊಟ್ಟಿ, ಅಲಬು

ಖಾರ, ಯವಾಗು, ವಿಲೇಪಿ, ಮಂಡ, ಅಕ್ಕಿಗಂಜಿ, ಹೆಸರು ಹಾಗು ತೊಗರಿ ಬೇಳೆ ತೊವ್ವೆ, ಎಡವೆಹಾಗಲಕಾಯಿ, ಹಾಗಲಕಾಯಿ, ಹುಳಚುಕ್ಕ, ತವಾಕ್ಷರ, (ಅರಾರೋಟ) ಕಿರಕಸಾಲಿ, ದಾಳಿಂಬ, ದೀಪದ್ರಾಕ್ಷಿ, ಕರೇದ್ರಾಕ್ಷಿ, ಹವೀಜ, ಕೆಂಪುತೊಗರಿ, ಬಿಸಿನೀರು, ಹೆಸರು, ಮಡಕಿ, ಹನಗನೆಸೊಪ್ಪು, ಒಳ್ಳೆಳ್ಳಿ, ಆಡಿನ ಹಾಲು, ಆಕಳ ತುಪ್ಪ-ಹಾಲು-ಬೆಣ್ಣೆ, ಹುರುಳಿ, ಪಡುವಲಕಾಯಿ, ಕೆಂಪು ನೆಲ್ಲಕ್ಕಿ, ನುಗ್ಗೀಕಾಯಿ, ಎಳೇಮೂಲಂಗಿ, ಚನ್ನಂಗಿ, ಆಮಸೋಲ, ಅಂಜಣ ಸೋಲು, ಬೆಳವಲಹಣ್ಣು, ಹರಿವಿ, ಸಾಬೂಕ್ಕಿ, ಜೇನುತುಪ್ಪ, ಸಕ್ಕರಿ, ಕಾಲ್ಲೀ ಸಕ್ಕರಿ, ಖಾರಗೆಣಸು ಇತ್ಯಾದಿ ಜೀನಸುಗಳು ಪಥ್ಯಕರವಾಗಿವೆ.

---

## ೪೮ ಸರ್ವ ಜ್ವರಗಳಿಗೂ ಸಾಧಾರಣವಾದ ಅಪಥ್ಯ.

ಹೆಚ್ಚು ತಿನ್ನುವದು, ಜಡಾನ್ನ, ದಾಹ ಹೆಚ್ಚಿಸುವ ಜೀನಸುಗಳು, ಕೆಟ್ಟ ನೀರು, ಉಪ್ಪು-ಕಾರ-ಹುಳಿ ಪದಾರ್ಥಗಳು, ತಾಂಬೂಲ, ಕಲ್ಲಂಗಡಿಹಣ್ಣು, ಹಲಸಿನಕಾಯಿ-ಹಣ್ಣು, ಹೊಸ ಧಾನ್ಯಗಳು, ಉಂಡಿ, ಹಿಟ್ಟಿನ ಪದಾರ್ಥ, ಅಂಬೋಡಿ, ಭಜಿ, ಅವಲಕ್ಕಿ, ಪೌಷ್ಠಿಕ ಜೀನಸುಗಳು, ಮಿಷ್ಠಾನ, ಸ್ನಾನ, ಜಾಗರಣೆ, ಕರಿದ ಜೀನಸು, ಕರಿದ ಕಮರು, ಒಗ್ಗರಣೆಯ ಕಮರು, ತಂಗಾಳಿ, ತಣ್ಣೀರು, ಅರಿದ ಪದಾರ್ಥಗಳು, ಕಡ್ಲಿ, ಗೋದಿ, ದುಂಡಕಡಲೆ, ಅವರೆ ಮುಂತಾದ ಜಡಧಾನ್ಯಗಳು, ತಂಗಳನ್ನ, ಸ್ತ್ರೀಸಂಗ, ವ್ಯಾಯಾಮ, ಶ್ರಮವಾಗು ವಂಥ ಕೆಲಸ ಇವೆಲ್ಲ ವರ್ಜ್ಯಗಳಾಗಿವೆ.

---

## ೪೯ ಜ್ವರಮುಕ್ತವಾದ ಬಳಿಕ ಮಾಡತಕ್ಕ ಶುಶ್ರೂಷೆಯು.

ರೋಗಿಯು ಜ್ವರಮುಕ್ತನಾದ ನಂತರ ಅವನಿಗೆ ತಾನು ಅಮಂಗಲಕರ ನೆಂದೆನಿಸುತ್ತದೆ, ಮೈ ಕಡಿತವೇಳುವದರಿಂದ ಸ್ನಾನ ಮಾಡುವ ಇಚ್ಛೆಯಾಗು ತ್ತದೆ. ಆದ್ದರಿಂದ ಮೊದಲು ಬೇವಿನ, ಲೆಕ್ಕಿಯ ಗಜಗದ, ಹುಲುಗುಲಿಯ ಅಥವಾ ಔಡಲ ಈ ಸೊಪ್ಪುಗಳಲ್ಲಿ ಯಾವವು ಸಿಗುವವೋ, ಅವುಗಳನ್ನೆಲ್ಲ ತಕ್ಕೊಂಡು ೧ ಕೊಡ ನೀರಲ್ಲಿ ಹಾಕಿ ೧-೨ ಕುದಿ ಬರುವ ವರೆಗೆ ಆ ನೀರು ಕಾಸಿ, ಅದರಲ್ಲಿ ತಣ್ಣೀರು ಬೆರಸದೆ, ಹವಣಿಸಾಗುವ ವರೆಗೆ ಆರ ಗೊಟ್ಟು ಬಳಿಕ ಒಳಗಿನ ಸೊಪ್ಪನ್ನೆಲ್ಲ ತೆಗೆದೊಗೆದು ರೋಗಿಯನ್ನು ಮರೆಯುಳ್ಳ (ಗಾಳಿಬಡಿಯದ) ಸ್ಥಳದಲ್ಲಿ ಒಚ್ಚಲದಲ್ಲಿ ಕೂಡ್ರಿಸಿ, ಸ್ನಾನ ಮಾಡಿಸಿ, ಒಣ ಅರಿವೆ ಯಿಂದ ಒರಿಸಿ ಸ್ವಚ್ಛವಾದ ಹಾಸಿಗೆಯ ಮೇಲೆ ಮಲಗಿಸಿ ದಪ್ಪವಾದ ಹೊದಿಕೆ

ಹೊಚ್ಚಬೇಕು. ಬೆವರು ಬಂದ ಬಂದಂತೆ ಒರಿಸಬೇಕು. ಹವೆಯ ಶುದ್ಧಿಗಾಗಿ ರೋಗಿಯ ಕೋಣೆಯಲ್ಲಿ ಧೂಪ ಹಾಕಬೇಕು. ಬಳಿಕ ತುಸ ಹೊತ್ತಿನ ಮೇಲೆ ಲಘು ಅನ್ನದ ಊಟ ಮಾಡಿಸಬೇಕು. ಜ್ವರ ನಿಂತ ಮೇಲೆ ೧೬ದಿನಗಳ ಪರ್ಯಂತವಾದರೂ ಬಿಸಿ ನೀರು ಕುಡಿಸಬೇಕು. ಜ್ವರಮುಕ್ತವಾದ ಬಳಿಕ ಅವನಿಗೆ ಹೆಚ್ಚು ಹಸಿವೆಯಾಗುವದರಿಂದ ಅವನು ಆಗಾಗ್ಗೆ ತಿನ್ನಲಿಕ್ಕೆ ಬೇಡುತ್ತಾನೆ. ಇಂಥ ಕಾಲದಲ್ಲಿ ಉಂಡಿ ಮುಂತಾದ ಜಡಪದಾರ್ಥಗಳನ್ನು ಸರ್ವಥಾ ಕೊಡದೆ, ಹಗುರು ಹಾಗು ಸಹಜ ಪಚನವಾಗುವಂಥ ಪದಾರ್ಥಗಳನ್ನು ತಿನಗೊಡಬೇಕು. ಬದಾಮು, ಸಂಡಿಗ್ಗುಂಬಳ ಪಾಕಗಳನ್ನು ಕೊಡುವದು ಯುಕ್ತವು. ಕಿತ್ತಳಿ, ದಾಳಿಂಬ ಮುಂತಾದ ಪಥ್ಯಕರವಾದ ಹಣ್ಣುಗಳನ್ನು ಕೊಡಬೇಕು. ದೈಲು ಹವೆಯಲ್ಲಿ ತುಸ ತುಸ ಅಡ್ಡಾಡಲಿಕ್ಕೆ ಒಯ್ಯಬೇಕು. ಈ ಬಗೆಯಾಗಿ ಮೊದಲಿನಂತೆ ಶಕ್ತಿ ಬರುವ ವರೆಗೆ ಅವನ ಶುಶ್ರೂಷೆ ಮಾಡತಕ್ಕದ್ದು. ಆ ಮೇಲೆ ಅವನ್ನು ಯಥೇಚ್ಛ ವರ್ತಿಸತಕ್ಕದ್ದು.

---

## (೫೦) ಜ್ವರ ನಿಂತಮೇಲೆ ಅಶಕ್ತತೆಗುಪಾಯ.

೧ ಜ್ವರ ನಿಂತ ಬಳಿಕ ಒಂದು ಸಪ್ತಕ (ಏಳು ದಿನಗಳ) ವರೆಗೆ ಬಜೆ, ಮತ್ತು ನೆಲಬೇವುಗಳ ಕಷಾಯವನ್ನು ಬೆಲ್ಲ ಹಾಕಿ ಕೊಡುತ್ತಿರಬೇಕು.

೨ ೨ ತೊಲಿ ಒಜೆಯನ್ನು ಅಡ-ಜಡಡ ಜಜ್ಜಿ ಅದರಲ್ಲಿ ಪಾವು ಸೇರು (೧೦ ತೊಲಿ) ಎಸರುನೀರು ಹಾಕಿಡಬೇಕು. ಅರಿದ ಮೇಲೆ ಆ ನೀರು ಸೋಸಿ ಇಟ್ಟು ಪ್ರತಿ ಸಾರೆ ೨-೨॥ ತೊಲಿಯಂತೆ ದಿನದಲ್ಲಿ ೩ ಸಾರೆ ಕೊಡುತ್ತಿರಬೇಕು.

೩ ಲಘುಮಾಲಿನೀ ವಸಂತ:—ಜೇನತುಪ್ಪ ಪಿಪ್ಪಲಿಯ ಚೂರ್ಣ ಇವನ್ನು ಕೂಡಿಸಿ ೨-೩ಗುಂಜಿ ತೂಕದಂತೆ ಎರಡೂ ಹೊತ್ತು ಕೊಡತಕ್ಕದ್ದು. ಅದರಿಂದ ಶಿಲ್ಕು ಇದ್ದ ಜ್ವರಗಳು ನಿಶ್ಶೇಷವಾಗಿ, ಅಗ್ನಿಪ್ರದೀಪ್ತವಾಗುತ್ತದೆ.

---

## ೫೧ ಗುದ್ದವ್ವನ ಬೇನೆ.

ಲಕ್ಷಣ:—ಈ ಜ್ವರಗಳು ೩ ದಿನ ಬರುತ್ತವೆ. ಜ್ವರದ ವೇಗವು ಹೆಚ್ಚಾಗಿರುತ್ತದೆ; ಆದರೆ ಈ ಬೇನೆಯಿಂದ ಸಹಸಾ ಯಾರೂ ಸಾಯುವದಿಲ್ಲ. ಮೊದಲು ಯಾವ ಬಗೆಯ ಸೂಚನೆ ಕೂಡ ಇಲ್ಲದೆ, ಈ ಜ್ವರಗಳು ಆಕಸ್ಮಿಕವಾಗಿ ಬರುತ್ತವೆ; ಮತ್ತು ರೋಗಿಯು ಬಹಳ ಹೈರಾಣಾಗುತ್ತಾನೆ. ಈ ಬೇನೆಯಲ್ಲಿ ಅಸಮಾಧಾನ, ಕೈ-ಕಾಲು ಹರಿಯುವದು, ನೀರಡಿಕೆ, ತಲೆಶೂಲಿ, ಅರುಚಿ ಈ ಲಕ್ಷಣಗಳಾಗುತ್ತಿರುತ್ತವೆ. ಈ ಬೇನೆಯ ಕೆಲವು ರೋಗಿಗಳ

ಮುಂಪ್ಪಿಗಳೇ ಹೊರಳುತ್ತವೆ. ಕೆಲವರ ಸಂದುಗಳು ಶೂಲಿಯಾಗುತ್ತವೆ ಕೆಲವರ ನಡಶೂಲಿಯಾಗುತ್ತದೆ. ಈ ಬೇನೆಯು ದುಷ್ಕಾಲದ ನಂತರ ಅಥವಾ ಯಾವುದೊಂದು ಭಯಂಕರ ಸಾಂಸರ್ಗಿಕ ರೋಗವು ಬಂದು ಹೋದ ನಂತರ ಪ್ರಸಾರವಾಗುವ ಸಂಭವವಿರುತ್ತದೆ. ಮೊಣಕಾಲುಗಳು ಮುರಿದಂತಾಗಿ, ಮೈಮೇಲೆ, ವಿಶೇಷವಾಗಿ ಬೆನ್ನ ಮೇಲೆ ಇಲ್ಲವೆ ಹೊಟ್ಟೆ, ಗೋಣು, ಮೊಣಕಾಲುಗಳ ಮೇಲೆ ಬಕ್ಕೆಗಳು ಏಳುತ್ತಿರುತ್ತವೆ ಆ ಬಕ್ಕೆಗಳು ಮೂರು ದಿನಗಳ ನಂತರ ಅಡಗಿ, ಹೊಟ್ಟಿನಂಥ ಚರ್ಮವು ಆಯಾ ಭಾಗದಿಂದ ಸುಲಿದು ಹೋಗುತ್ತದೆ. ಈ ಬಕ್ಕೆಗಳು ಗೊಬ್ಬರದ ಬಕ್ಕೆಗಳಂತೆಯೇ ಇರುತ್ತವೆ. ಜ್ವರ ಬರುವಾಗ ತುಸ ಚಳಿಚಳಿಯಾಗುತ್ತದೆ. ೧೦೩-೧೦೪ ಡಿಗ್ರಿಗಳ ವರೆಗೆ ಜ್ವರವಿರುತ್ತವೆ. ಒಮ್ಮೊಮ್ಮೆ ೧೦೫ ಅಂಶಗಳ ವರೆಗೂ ಇರುತ್ತವೆ ಆದರೂ ಅಂಜುವ ಕಾರಣವಿಲ್ಲ. ಮೋರೆಯು ಕೆಂಪಾಗುತ್ತದೆ; ಮತ್ತು ಎಷ್ಟೋ ಜನರಿಗೆ ಬೆವರು ಸಹ ಬರುತ್ತದೆ. ಅನ್ನದ ಮೇಲೆ ಇಚ್ಛೆಯುಂಟಾಗುವದಿಲ್ಲ. ಇದೊಂದು ವಿಶಿಷ್ಟ ಬಗೆಯ ಆದರೆ ಕಠಿಣವಾದ ಜ್ವರವಿರುತ್ತದೆ. ಸ್ಥಿತಿ-ಸ್ಥಳಗಳ ಮಾನದಿಂದ ಇದು ಹೆಚ್ಚು ಕಡಿಮೆ ಮಾನದಿಂದಲೂ ಇರುವದುಂಟು.

ಈ ಬೇನೆಯು ಸಾಂಸರ್ಗಿಕವಾದದ್ದು; ಮತ್ತು ಕ್ರಮೇಣ ಹಬ್ಬತಕ್ಕದ್ದು ಆಗಿದೆ. ಇದು ಮೊದಲು ಪೂರ್ವ ಅರಬಸ್ತಾನ, ಚೀನ, ಹಿಂದುಸ್ತಾನದ ಕೆಲಭಾಗ, ದಕ್ಷಿಣದಿಕ್ಕಿನೊಳಗಿನ ಕೆಲ ಬೆಟ್ಟಗಳು, ಝಾಂಝಿಬಾರ, ಯುರೋಪ, ಅಮೇರಿಕಾದಲ್ಲಿರುತ್ತಿತ್ತು; ಆದರೂ ಇದು ವಿಶೇಷವಾಗಿ ಎಲ್ಲ ಉಷ್ಣಕಟಿಬಂಧದಲ್ಲಿಯೇ ಇರುತ್ತದೆ; ಹಾಗು ಬೇಸಿಗೆಕಾಲದಲ್ಲಿ ಆಗುವದೇ ಬಹಳ.

ಉಪಾಯಗಳು:—

೧ ಈ ಗುದ್ದವ್ವನ ಬೇನೆ ಬಂದಾಗ್ಗೆ ಔಷಧಕ್ಕಿಂತ ಪಥ್ಯವನ್ನೇ ಚೆನ್ನಾಗಿ ಮಾಡತಕ್ಕದ್ದು. ಬಿಸಿ ನೀರು ಕುಡಿಸಬೇಕು. ಸ್ವಸ್ಥವಾಗಿ ಮಲಗಿಸಬೇಕು. ಗವತೀ ಚಹ (ಚಹದ ಹುಲ್ಲಿನ)ದ ಕಷಾಯ ಕೊಡಬೇಕು.

೨ ಬೇವಿನ ತೊಗಟೆ, ಮೆಣಸು, ಶುಂಠಿ, ದಾಲಚಿನ್ನಿ ಇವುಗಳ ಕಷಾಯ ಕೊಡುವದು.

೩ ಈ ಬೇನೆಗೆ ಉತ್ತಮ ಉಪಾಯವೆಂದರೆ, ರೋಗಿಯ ಶುಶ್ರೂಷೆಯನ್ನು ಚೆನ್ನಾಗಿ ಮಾಡುವದು. ಆಗಾಗ್ಗೆ ಸ್ವಚ್ಛ ಹಾಸಿಗೆ-ಹೊದಿಕೆಗಳನ್ನು ಕೊಡಬೇಕು. ನಿಜವಾದ ಹಸಿವೆಯಾಗದ ಹೊರತು ಉಣ-ತಿನ್ನಲಿಕ್ಕೆ ಕೊಡ

ಬಾರದು. ಕಾದಾರಿದ ನೀರು ಕುಡಿಸಬೇಕು. ಹೀಗೆ ಮಾಡುವದರಿಂದ ೩ ದಿನಗಳ ನಂತರ ರೋಗಿಯು ತನ್ನಷ್ಟಕ್ಕೆ ತಾನೇ ರೋಗವಿಮುಕ್ತನಾಗುತ್ತಾನೆ.

೪ ಚಳಿಬರುತ್ತಿದ್ದರೆ ಕ್ವಿನಾಯಿನ್ ಕೊಡಬೇಕು; ತಲೆಶೂಲಿಯಿದ್ದರೆ ಶುಂಠಿ ಇಲ್ಲವೆ ಚಂದನ ತೆಯ್ದು ಹಚ್ಚುವದು.

೫ ಬೇವಿನ ತೊಗಟೆಯ ಕಷಾಯವನ್ನು ಸಕ್ಕರೆ ಗುಗ್ಗುಳ ಬೆಂಸಿ ಕೊಡ ತಕ್ಕದ್ದು.

೬ ನಿದ್ದೆ ಬರದಿದ್ದರೆ ಅಫುವನ್ನು ಮೂಸಿ ನೋಡಿಸತಕ್ಕದ್ದು; ಇಲ್ಲವೆ ಸ್ವಲ್ಪ ಅಫು ಹೊಟ್ಟೆಯಲ್ಲಿ ಕೊಡತಕ್ಕದ್ದು.

೭ ಗುಳ್ಳೆಗಳಿಗೆ ಚಂದನದಲ್ಲಿ ಕರ್ಪೂರ ಕಲಿಸಿ ಹಚ್ಚತಕ್ಕದ್ದು; ಇಲ್ಲವೆ ಚಂದನದ ಅತ್ತರ ಹಚ್ಚತಕ್ಕದ್ದು.

---

## ೫೨ ಇನ್‌ಫ್ಲುಎಂಝಾ. (ಸಾಂಸರ್ಗಿಕ ಜ್ವರ.)

ಕಾರಣ:—ಈ ಜ್ವರಗಳು ದೂಷಿತ ವಾತಾವರಣದಿಂದ ಉತ್ಪನ್ನವಾಗುತ್ತವೆ. ದೂಷಿತ ಹವೆಯಲ್ಲಿ ಮೊದಲು ಅತಿಸೂಕ್ಷ್ಮ ಕ್ರಿಮಿಗಳುಂಟಾಗಿ ಅವು ಹವೆಯಲ್ಲಿ ಹೆಚ್ಚಾಗಿ ಹಬ್ಬುತ್ತವೆ; ಮತ್ತು ಅವುಗಳಿಗೆ ಇತರ ಹವೆಯು ಅನುಕೂಲತೆಯುಂಟಾದರಂತೂ ಈ ಸಾಂಸರ್ಗಿಕ ಬೇನೆಯ ಪ್ರಸಾರವು ಅತಿ ತೀವ್ರವಾಗಿ ಆಗುತ್ತದೆ. ಹೀಗಾದ ಬಳಿಕ ಸ್ವಚ್ಛ ಹವೆಯಿದ್ದಲ್ಲಿ ಕೂಡ ಮನುಷ್ಯನ ಸಂಚಾರದ ಮೂಲಕ ಹಾಗು ದೂಷಿತ ಮನುಷ್ಯನ ಶ್ವಾಸೋಚ್ಛ್ವಾಸದ ಮೂಲಕ ಮತ್ತು ಅರಿವೆ ಅಂಚಡಿಗಳೊಳಗಿನ ದೂಷಿತ ಕ್ರಿಮಿಗಳೇ ಮೊದಲಾದ ಕಾರಣಗಳ ಪ್ರವೇಶವಾಗಿ, ಅಲ್ಲಿಯ ಹವೆಯೂ ದೂಷಿತವಾಗಿ ಅದು ಕೂಡ ಕೆಡುತ್ತದೆ.

ಶಕೆ ೧೮೪೦ ರಲ್ಲಿ ಅಂದರೆ ಕ್ರಿ. ಶ ೧೯೧೮ನೇ ಸಪ್ಟಂಬರದಿಂದ ಡಿಸೆಂಬರದ ಕೊನೆಯ ವರೆಗೆ ಈ ಬೇನೆಯು ಇಡಿ ಪೃಥ್ವಿಯ ತುಂಬ ವ್ಯಾಪಿಸಿಬಿಟ್ಟಿತ್ತು; ಹಾಗು ಇದರಿಂದ ಆ ನಾಲ್ಕು ತಿಂಗಳಲ್ಲೇ ಲಕ್ಷಗಟ್ಟಲೆ ಜನರು ತೀರಿಕೊಂಡರು. ಒರೇ ಹಿಂದುಸ್ತಾನದೊಳಗಿನ ಸತ್ತ ಜನರ ಸಂಖ್ಯೆಯೇ ೫೬ಲಕ್ಷಗಳ ಮೇಲೆ ಆಗಿರುತ್ತದೆ. ಆಗ ಚಲೋ ಹವೆ, ಕೆಟ್ಟ ಹವೆ, ವಿಶೇಷ ಜನವಸತಿಯ ಪ್ರದೇಶ, ಒತ್ತಟ್ಟಿಗಿನ (ಸ್ಯಾನಿಟೋರಿಯಮ್ ಪ್ರದೇಶ) ಗುಡ್ಡಗಾಡು, ಮಲೆನಾಡು, ಬೆಳವಲು ಪ್ರದೇಶ ಮುಂತಾದ್ದರ ಭೇದವೇ ಉಳಿದಿರಲಿಲ್ಲ. ಎಲ್ಲ ಕಡೆಯ ವಾತಾವರಣವೂ ಈ ಇನ್‌ಫ್ಲುಎಂಝಾ ಬೇನೆಯಿಂದ ದೂಷಿತವಾಗಿ ಬಿಟ್ಟಿತ್ತು. ಶ್ರೀಮಂತರು-ಬಡವರು ಎಂಬ ಭೇದವುಳಿಯದೆ ಎಲ್ಲರೂ ಈ ಬೇನೆಯ ವಿಪತ್ತಿಗೆ ಸಕಸಮಯಾವಚ್ಛೇದವಾಗಿ ಗುರಿಯಾದರು. ಬಡಬಗ್ಗರ ತರಕು ಮುರುಕ

ಹೊಲಸು ಗುಡಿಸಿಲುಗಳೂ, ಶ್ರೀಮಂತರ ಭವ್ಯವೂ ಸ್ವಚ್ಛವೂ ಆದ ದಿವಾಣಖಾನೆಗಳೂ ಈ ಬೇನೆಯು ಆಗಿನ ನಿವಾಸಸ್ಥಳಗಳಾಗಿದ್ದವು; ಆದರೆ ಶ್ರೀಮಂತರಿಗಿಂತ ಬಡವರೇ ಈ ಬೇನೆಯಲ್ಲಿ ಹೆಚ್ಚಾಗಿ ವ್ಯಥಪಟ್ಟಿರುತ್ತಾರೆ. ಕಾರಣವೇನಂದರೆ, ಆಗಲೆ ಅವರ್ಷಣ ಹಾಗು ಮಹಾಯುದ್ಧದಿಂದ ದುಷ್ಕಾಲಗಳುಂಟಾಗಿದ್ದವು. ಇದರಿಂದ ಆಗ ಬಡಬಗ್ಗರಿಗೆ ಹೆಲೂ ಧಾನ್ಯವು ಸಿಗುತ್ತಿರಲಿಲ್ಲ. ಯುರೋಪದಲ್ಲಿ ೪-೫ ವರ್ಷಗಟ್ಟ, ನಡೆದ ಮಹಾಯುದ್ಧದಲ್ಲಿ ಕೊಳೆತ ಹೆಣಗಳ ದುರ್ಗಂಧದ ಮೂಲಕ ಹವೆ ಕೆಟ್ಟು ಈ ಸಾಂಸರ್ಗಿಕ ರೋಗವು ಉಂಟಾಯಿತು; ಮತ್ತು ಆ ಬೇನೆಯ ರೋಗಿಗಳು ಅಲ್ಲಿಂದ ಮುಂಬಯಿಯ ಬಂದರಕ್ಕೆ ಬಂದದರಿಂದ ಅಲ್ಲಿ - ನಮ್ಮ ದೇಶದಲ್ಲಿ - ಎಲ್ಲಕ್ಕೂ ಮೊದಲು ಆ ಬೇನೆಯ ಪ್ರಸಾರವಾಗಿ, ಅದು ಅಲ್ಲಿಂದ ಇಡಿ ಹಿಂದುಸ್ತಾನ ತುಂಬ ವ್ಯಾಪಿಸಿ ಅಲ್ಲೋಲ-ಕಲ್ಲೋಲ ಮಾಡಿಬಿಟ್ಟಿತು!

ಈ ಜ್ವರದ ಲಕ್ಷಣಗಳು:— ಮೊದಲು ಛಳಿ ಬರುತ್ತವೆ ಕೈಕಾಲು ಹರಿಯಹತ್ತಿ ಮೈಯೆಲ್ಲ ನೋವಾಗುತ್ತದೆ. ಜ್ವರ, ಅಶಕ್ತತೆ, ಮಲಾವರೋಧ ಇಲ್ಲವೆ ಅತಿಸಾರ, ಮನಸ್ಸಿನ ಅಸ್ವಸ್ಥತೆ, ಸಾಧಾರಣ ತಲೆಶೂಲಿ ಇವೆಲ್ಲ ಈ ಬೇನೆಯ ಒಂದನೇ ಅವಸ್ಥೆಯ ಲಕ್ಷಣಗಳಾಗಿವೆ. ಇದರ ಎರಡನೇ ಅವಸ್ಥೆಯಲ್ಲಿ ೧೦೪-೧೦೫ ಡಿಗ್ರಿಗಳ ವರೆಗೆ ಜ್ವರವೇರಿ, ಇತರ ಉಪದ್ರವಗಳು ಹೆಚ್ಚಾಗುವವು; ವಾತ ಪಿತ್ತಾದಿಗಳ ವೇಗವು ವೃದ್ಧಿಂಗತವಾಗಿ, ಕೆಮ್ಮು, ನಿದ್ರಾನಾಶಗಳಾಗುವವು. ತೃತೀಯಾವಸ್ಥೆಯಲ್ಲಿ ಉಳಿದ ಎಲ್ಲ ಪೀಡೆಗಳು ಹೆಚ್ಚಾಗಿ ಕಫದ ಪ್ರಾಬಲ್ಯವಾಗುತ್ತದೆ; ಹಾಗು ತ್ರಿದೋಷಗಳ ಮೂಲಕ ಶ್ವಾಸವು ಹೆಚ್ಚಾಗಿ ಅಸಾಧ್ಯವಾಗುವದು. ಕೆಲಕೆಲವರಿಗೆ ಇದಕ್ಕೂ ವಿಪರೀತ ಲಕ್ಷಣಗಳಾಗತ್ತವೆ.

## ಸಾಧ್ಯಾಸಾಧ್ಯ ವಿಚಾರ.

ರೋಗಿಯು ಮೊದಲನೇ ಅವಸ್ಥೆಯಲ್ಲಿ ಇರುವಾಗ ಯೋಗ್ಯ ಉಪಾಯ ಮಾಡಿದರೆ ಸಾಧ್ಯವಾಗುವದು. ಎರಡನೇ ಅವಸ್ಥೆಯು ಉಪಾಯದಿಂದಲೂ ಕಷ್ಟಸಾಧ್ಯವು. ೩ನೇ ಅವಸ್ಥೆಯೊಳಗಿನ ರೋಗಿಯು ವಿಶ್ವಪ್ರಯತ್ನದಿಂದಲೂ, ದೈವಬಲದಿಂದಲೂ ಉಳಿದರೆ ಉಳಿಯಬೇಕು. ಇಲ್ಲದಿದ್ದರೆ ಸಾಯುವದು ಖಂಡಿತ.

## ಉಪಾಯಗಳು.

೧ ಬೇವಿನ ತೊಗಟಿ ೧ ತೊಲಿ, ಅರ್ಧ ತೊಲಿ ನೆಲಗುಳ್ಳಬೇರು, ಕಲ್ಲುಸಕ್ಕರಿ, ನೆಲಬೇವು, ಶುಂಠಿ, ಮೆಣಸು, ಬನೇನೊಳ್ಳು, ಬಜ್ಞನ, ನೀ...

ವಡಂಗ ಇವು ಪ್ರತಿಯೊಂದು ಕಾಲು ತೊಲಿ ಹೀಗೆ ಒಟ್ಟು ೯ ಜಿನಸುಗಳನ್ನು ಅಬಡು-ಜಬಡು ಜಜ್ಜಿ, ಅದರಲ್ಲಿ ೮೦ ತೊಲಿ ನೀರು ಹಾಕಿ, ಅಷ್ಟಮಾಂಶ ಕಷಾಯವಿಳಿಸಿ ಅದನ್ನು (೧೦ ತೊಲಿ) ಒಂದು ಸೀಸೆಯಲ್ಲಿ ಹಾಕಿಡಬೇಕು. ಕಷಾಯವನ್ನು ಕೆಳಗಿಳಿಸುವಾಗ ಕಡೆಯ ಕುದಿಯ ಮುಂಚೆ ಅದರಲ್ಲಿ ೧ ತೊಲಿ ಬೆಲ್ಲ ಹಾಕಿರಬೇಕು; ನುತ್ತು ಅದೊಂದು ಕುದಿ ಕುದಿಸಿದ ಮೇಲೆ ಇಳಿಸಬೇಕು. ಆ ಕಷಾಯವನ್ನು ಹಗಲಲ್ಲಿ ಪ್ರಹರಕ್ಕೊಂದು ಸಾರೆ ೨|| ತೊಲೆಯಂತೆ ನಾಲ್ಕು ಸಾರೆ ಕೊಡಬೇಕು. ೫ ವರ್ಷದೊಳಗಿನವರಿಗೆ ಪ್ರತಿಸಾರೆ ೧ ತೊಲಿಯಂತೆ, ೫ ರಿಂದ ೧೨ ವರ್ಷದವರಿಗೆ ಪ್ರತಿಸಾರೆ ೧|| ತೊಲಿ, ಮುಂದೆ ೧೬ ವರ್ಷದ ವರಿಗೆ ಪ್ರತಿಸಾರೆ ೨ ತೊಲಿಯಂತೆ ಕೊಡತಕ್ಕದ್ದು. ದಿವಸ ೭.

ಈ ಔಷಧವನ್ನು ಪ್ರಾರಂಭದಿಂದಲೂ ಕೊಡಹತ್ತಿದರೆ ಕಫ ಮುಂತಾದ ಘಾತುಕ ವಿಕಾರಗಳು ಆಗುವದೇ ಇಲ್ಲ. ಈ ಔಷಧವು ಇನ್‌ಫ್ಲುಎಂಝಾ ಜ್ವರಕ್ಕೆ ರಾಮಬಾಣವಂತಿರುತ್ತದೆ. ಈ ಔಷಧದಿಂದ ಎಷ್ಟೋಜನ ರೋಗಿ ಗಳು ನೆಟ್ಟಗಾಗಿರುತ್ತಾರೆಂದು ಈ ಪುಸ್ತಕ ಲೇಖಕನು ಸ್ವಾನುಭವದಿಂದ ಹೇಳು ತ್ತಾನೆ. ಈ ಔಷಧವನ್ನು ಈ ಬೇನೆಗಾಗಿ ನಾನೇ ಯೋಜಿಸಿರುತ್ತೇನೆ.

೨ ರಾಜಕಂಡೇಶ್ವರ ಮಾತ್ರೆಯನ್ನು ಅಲ್ಲದ ರಸ ಹಾಗು ಜೇನುತುಪ್ಪ ಇಲ್ಲವೆ ಕಲ್ಲುಸಕ್ಕರಿಯ ಪುಡಿಯೊಡನೆ ಕೊಡತಕ್ಕದ್ದು. ಕಫಕ್ಕೂ ವ್ಯೆಯೊಳಗಿನ ಜ್ವರಕ್ಕೂ ಈ ಮಾತ್ರೆಯ ಉಪಯೋಗವು ಚನ್ನಾಗಿ ಆಗುತ್ತದೆ.

೩ ಎಷ್ಟೋ ಜನ ಡಾಕ್ಟರರು ಈ ಜ್ವರಗಳಿಗೂ ಮಲೇರಿಯಾ ಹಾಗು ಇತರ ದೂಷಿತ ಜ್ವರಗಳಿಗೂ ಕ್ವಿನಾಯಿನ್ ಕೊಡುತ್ತಿರುತ್ತಾರೆ; ಆದರೆ ಕ್ವಿನಾ ಯಿನದಲ್ಲಿ ಜ್ವರವನ್ನು ತಡೆದಿರುವ ಗುಣಮಾತ್ರವಿರುತ್ತದಷ್ಟೇ? ಕ್ವಿನಾಯಿನ್ನ ದಿಂದ ಕಿವಿ ಮಂದಾಗುವದು, ಕಿವಿಯಲ್ಲಿ ಸಪ್ಪಳವಾಗುವದು, ತಲೆಶೂಲಿ, ಪಿತ್ತ ವೃದ್ಧಿ, ನಿದ್ರಾನಾಶ ಮುಂತಾದ ವಿಕಾರಗಳಾಗುತ್ತವೆ. ಈ ವಿಕಾರಗಳಲ್ಲಿ ಯಾವುದೊಂದೂ ಆಗದೆ, ಬಂದ ಜ್ವರ ಆರಲಿಕ್ಕೆ ಬೇವಿನಂಥ ದಿವ್ಯೌಷಧವು ಬೇರೊಂದಿಲ್ಲ. ೨ ಸೇರು ನೀರಲ್ಲಿ ೧ ಸೇರು ಬೇವಿನ ತೊಗಟಿ ಜಜ್ಜಿ ಹಾಕಿ ಚತುರ್ಥಾಂಶ ಕಷಾಯ ಮಾಡಿ ಸೋಸಿಟ್ಟು ದಿನಾಲು ಎರಡು ಮೂರು ಸಾರೆ ೧೦-೧೦ ಮೆಣಸಿನ ಕಾಳ ಪುಡಿ ಹಾಕಿ ಕೊಡಬೇಕು. ಪ್ರಮಾಣ ೩ ತೊಲಿ. ಖಾತ್ರಿಯಿಂದ ಗುಣ ಬರುತ್ತದೆಂದು ಎದೆ ತಟ್ಟಿ ಹೇಳಬಲ್ಲೆವು.

೪ ಶುದ್ಧ ನೇಪಾಳದ ಬೇರು ೨ ಭಾಗ, ರಸ ಸಿಂಧೂರ ೨ ಭಾಗ, ಹುಲು ಗುಲೀಬೀಜ ೬ ಭಾಗ, ಅಮೃತಬಳ್ಳಿಯ ಸತ್ವ ೧ ಭಾಗ ಇವನ್ನೆಲ್ಲ ಲಿಂಬೀಹುಳಿ ಯಲ್ಲಿ ಅರೆದು ೨ ಗುಂಜಿನ ತೂಕದ ಗುಳಿಗೆ ಕಟ್ಟಬೇಕು. ಚಳಿ ಬರುವ

ಮೊದಲು ೬ ತಾಸು ಇಂಥವೊಂದು ಗುಳಿಗೆಯನ್ನು ಜೇನುತುಪ್ಪದೊಡನೆ ಕೊಡತಕ್ಕದ್ದು. ಇದರಿಂದ ವಿಷಮಜ್ವರ ಹಾಗು ಇನ್‍ಫ್ಲುಎಂಝಾ ಮುಂತಾದ ಸಾಂಸರ್ಗಿಕ ಜ್ವರಗಳ ನಿವಾರಣವಾಗುತ್ತದೆ.

೫ ಕಾಡ ಕವಡೇಕಾಯಿಯನ್ನು ಜಜ್ಜಿ ಅರಿವೆಯಲ್ಲಿ ಹಾಕಿ ಹಿಂಡಿ ರಸ ತೆಗೆಯಬೇಕು. ಆ ರಸದೊಳಗಿನ ೨-೨ ಹನಿಗಳನ್ನು ಮುಂಜಾವು ಸಂಜೆಗಳಲ್ಲಿ ೧-೧ ತೊಲಿ ನೀರಿನೊಡನೆ ಕೊಡತಕ್ಕದ್ದು. ಕಫದ ವೇಗವು ಕಡಿಮೆಯಾಗಿ, ಮೊದಲಾಗಿದ್ದ ಕಫವು ಕತ್ತರಿಸಿ ಬೀಳುತ್ತದೆ. ಇದೊಂದೇ ಔಷಧವನ್ನು ೪-೫ ದಿನ ಕೊಟ್ಟರೆ ಕಫದ ವಿಕಾರವು ಶಾಂತವಾಗುತ್ತದೆ. ಈ ಕಾಡಕವಡೀಕಾಯಿ ರಸವು ವಿಷಾರಿಯಾಗಿರುವದರಿಂದ ೨ ಹನಿಗಳಿಗಿಂತಲೂ ಹೆಚ್ಚು ಕೊಡಲಾಗದು.

---

## ೫೩ ಪ್ಲೇಗ(ಗಂಟು ಬೇನೆ.)

ಈ ಭಯಂಕರ ರೋಗವು ಈ ವರೆಗೆ ಬಹಳ ಜನರನ್ನು ನಾಶಪಡಿಸಿರುತ್ತದೆ. ಕ್ರಿ. ಶ. ೧೮೯೬ರಿಂದ ಈ ವರೆಗೆ ಸರಾಸರಿ ೧ ಕೋಟಿ ಜನರು ಈ ಗಂಟುಬೇನೆಯಿಂದ ಸತ್ತಿರುತ್ತಾರೆ! ಆದರೂ ಇಂದಿಗೂ ಈ ಬೇನೆಗೆ ಖಾತ್ರಿಯ ಔಷಧವು ಸಿಕ್ಕಿರುವದಿಲ್ಲ. ಇಂಥ ಈ ಭಯಂಕರ ರೋಗದ ಐತಿಹಾಸಿಕ ಸ್ವರೂಪವನ್ನು ಜನರ ಮುಂದಿಟ್ಟು ಬಳಿಕ ಚಿಕಿತ್ಸೆಯನ್ನು ಹೇಳುವೆವು.

### ಪ್ಲೇಗಿನ ಐತಿಹಾಸಿಕ ಸಂಗತಿಯು.

ಮುಸಲ್ಮಾನ ಇತಿಹಾಸಕರ್ತರು ಈ ಗಂಟುಬೇನೆಯ ಬಗ್ಗೆ ಬರೆದಿಟ್ಟಿರುವದೇನಂದರೆ:—ಹಿಂದುಸ್ತಾನದಲ್ಲಿ ಇಸವಿ ಸನ್ ೯೦೭ರಲ್ಲಿ ಸಿಕಂದರ ಲೋದಿಯ ಕಾಲದಲ್ಲಿ "ಹೇಗೀರಾ" ಎಂಬಲ್ಲಿಗೆ ಬಂದು ಹೋದ ಈ ಗಂಟುಬೇನೆಯು ಪುನಃ ಕ್ರಿ. ಶ. ೯೫೫ರಲ್ಲಿ ಅಲ್ಲಿಗೇ ಬಂದಿತು. ೧೬೧೮ರಲ್ಲಿ ಜಹಾಂಗೀರ ಬಾದಶಹನ ಕಾಲದಲ್ಲಿ ಈ ಬೇನೆಯು ಪಂಜಾಬದಲ್ಲಿ ಪ್ರಾರಂಭವಾಗಿ ಲಾಹೋರ-ದಿಲ್ಲಿಗಳ ವರೆಗೆ ಹಬ್ಬಿತ್ತು. ಅದರಿಂದ ಆಗ ಎಷ್ಟೋ ಪಟ್ಟಣಗಳೂ, ಹಳ್ಳಿಗಳೂ ಹಾಳಾಗಿ ಹೋದವು. ಅದಕ್ಕೂ ಮೊದಲು ಎರಡು ವರ್ಷ ಮಳೆಯಾಗದೆ ಹವೆ ಕೆಟ್ಟದ್ದರಿಂದ ಆ ಬೇನೆಯುಂಟಾಯಿತೆಂದು ಆಗಿನ ಜನರು ಆ ಬೇನೆಯ ಕಾರಣವನ್ನು ಬರೆದಿಟ್ಟಿದ್ದಾರೆ. ಹೀಗೆ ಎಷ್ಟೋ ಸಾರೆ ನಮ್ಮ ಹಿಂದುಸ್ತಾನದಲ್ಲಿ ಈ ಪ್ಲೇಗುರಾಜನ ಹಾವಳಿಯಾಯಿತು. ಶಫಲಬಿ ಮಹಮ್ಮದನ ಕಾಲಕ್ಕೆ ಅವನ ದಂಡಿನಲ್ಲಿ ೧೩೨೫ರಿಂದ ೧೩೫೧ರ ವರೆಗೆ ಹಲವು ಸಾರೆ ಪ್ಲೇಗು ಉಂಟಾಯಿತು. ಅದೇ ಶತಕದ ಕೊನೆಗೆ ತೈಮೂರಲಿಂಗನ ಸೈನ್ಯದಲ್ಲಿ ಈ ಪ್ಲೇಗಿನ

ಹಾವಳಿಯಾಯಿತು. ಸನ್ ೧೪೪೩ರಲ್ಲಿ ಮಾಳವದೇಶದಲ್ಲಿ ಪ್ಲೇಗುಬೇನೆ ಇತ್ತು. ಆ ಕಾಲಕ್ಕೆ ಮೊದಲನೇ ಸುಲ್ತಾನ ಮಹಮ್ಮದಖಾನನ ಅನೇಕ ಜನ ಕುದುರೆಯ ಸ್ವಾರರು ಮಡಿದರು. ಮುತಾಮದಖಾನನೆಂಬ ಆಗಿನ ಒಬ್ಬ ಲೇಖಕನ ಲೇಖದಿಂದ ತಿಳಿಯುವದೇನಂದರೆ:—ಸನ್ ೧೬೧೫ರಲ್ಲಿ ಮತ್ತೆ ಪ್ಲೇಗರೋಗವು ಹಿಂದುಸ್ತಾನದಲ್ಲಿ ಪ್ರಾರಂಭವಾಯಿತು. ಅದು ಈಗಿನಂತೆಯೇ ಚುರುಕಾಗಿದ್ದಿತು. ಪುನಃ ಕ್ರಿ. ಶ ೧೬೮೯ರಲ್ಲಿ ದಕ್ಷಿಣದಲ್ಲಿ ವಿಜಾಪುರದಲ್ಲಿ ಔರಂಗಜೇಬ ಬಾದಶಹನ ದಂಡಿನ ಛಾವಣಿಯೊಳಗೆ ಈ ರೋಗವುಂಟಾಗಿ ಸರಾಸರಿ ೧ ಲಕ್ಷ ಜನ ದಂಡಾಳುಗಳು ಪ್ರಾಣಕ್ಕೆರವಾದವು. ಆಗ ಈ ಬೇನೆಯು ಅಲ್ಲಿ ಮೂರು ತಿಂಗಳ ವರೆಗೆ ಸತತವಾಗಿತ್ತು; ಮತ್ತು ಮುಂದೆ ೩ ವರ್ಷಗಳ ವರೆಗೆ ಸಾಧಾರಣವಾಗಿ ಇತ್ತೇ ಇತ್ತು. ಈ ಪ್ಲೇಗಿನ ಬೇನೆಯಿಂದಲೇ ಆದಿಲ್‌ಶಾಹಿಯ ಕಾಲದ ಭರವಸತಿಯು ವಿಜಾಪೂರ ಪಟ್ಟಣವು ಹಾಳಾಗಿ ಹೋಯಿತು. ವಿಜಾಪೂರ ಪ್ರಾಂತವೂ ಆ ಬೇನೆಯಿಂದ ಹಾಳಾಯಿತು. ಆ ಬೇನೆಯು ನಿಂತ ಬಳಿಕ ಖಾನೇಸುಮಾರಿ ಮಾಡಲು, ೨೦ ಲಕ್ಷ ಜನಸಂಖ್ಯೆಯೊಳಗಿನ ಅರ್ಧಜನರು ಮಾತ್ರ ಅಂದರೆ ಹತ್ತೇ ಲಕ್ಷ ಜನರು ಉಳಿದಿದ್ದರು! ಮತ್ತು ೯ ಲಕ್ಷ ಮನೆಗಳೊಳಗಿನ ೧೮೦೦೦ ಮನೆಗಳು [ಮನೆತನಗಳು] ಮಾತ್ರ ಉಳಿದವು! (ವಿಜಾಪೂರ ಗೆಝೆಟ ಪಾನು ನಂ. ೪೩೭.) ಇದಾದ ಬಳಿಕ ಉತ್ತರ ಹಿಂದುಸ್ತಾನದಲ್ಲಿ ಮೊದಲನೆ ಪ್ಲೇಗಿನ ಹಾವಳಿಯು ಕಚ್ಛ ಪ್ರಾಂತದಲ್ಲಿ ಇ. ಸನ್ ೧೮೧೫ರಲ್ಲಿ ಪ್ರಾರಂಭವಾಗಿ, ೧೮೨೧ರ ವರೆಗೆ ಗುಜರಾಥ ಮತ್ತು ಸಿಂಧಪ್ರಾಂತಗಳಲ್ಲಿತ್ತು. ಹಿಂದುಸ್ತಾನದೊಳಗೆ ಹಿಮಾಲಯದ ನೈಋತ್ಯದಿಕ್ಕಿನಲ್ಲಿರುವ ಕುಮಾವೂನ, ಗಢವಾಲ ಮುಂತಾದ ಪ್ರಾಂತಗಳಲ್ಲಿ ೧೮೨೩ರಿಂದ ೧೮೪೪ರ ವರೆಗೆ ಈ ಬೇನೆಯ ಹಾವಳಿಯು ಆಗಾಗ್ಗೆ ಆಗುತ್ತಲೇ ಇದ್ದಿತು. ಬಳಿಕ ಅದು ೧೮೨೬ರಲ್ಲಿ ದಿಲ್ಲಿ ಪ್ರಾಂತವನ್ನು ಪ್ರವೇಶಿಸಿ ಅಲ್ಲಿಂದ ಹಬ್ಬುತ್ತ ಹಸ್ಸಿತ್ತ, ರೋಹಿಲಖಂಡ, ರಜಪೂತಸ್ತಾನ, ಜೋಧಪೂರ, ಮೇವಾಡ ಪ್ರಾಂತಗಳ ವರೆಗೆ ಪಸರಿಸಿತು. ೧೮೪೪ರಿಂದ ೧೮೯೬ರ ವರೆಗೆ ಈ ರೋಗವು ಹಿಂದುಸ್ತಾನದಲ್ಲೆಲ್ಲೂ ಇರಲಿಲ್ಲ; ಆದರೆ ಹಾಂಗಕಾಂಗ [ಚೀನ] ದಿಂದ ೧೮೯೬ರಲ್ಲಿ ಪ್ಲೇಗರೋಗವು ಮುಂಬಯಿಗೆ ಬಂದಿತು. ಅಂದಿನಿಂದ ೧೯೨೦ರ ವರೆಗೆ ಅಂದರೆ ಸರಾಸರಿ ೨೫ ವರ್ಷದಲ್ಲಿ ನಮ್ಮ ದೇಶದೊಳಗಿನ ಒಂದು ಕೋಟಿ ಜನರನ್ನು ಈ ರೋಗವು ನುಂಗಿಬಿಟ್ಟಿರುತ್ತದೆ! ಈಗಲಾದರೂ ಈ ರೋಗದ ಕಾಟವು ಅಲ್ಲಲ್ಲಿ ಇರುತ್ತಿರುವದು ಕಿವಿಗೆ ಬೀಳುತ್ತಲೇ ಇದೆ. ೧೮೯೬ರಲ್ಲಿ ಬಂದ ಪ್ಲೇಗಿನ ಹಾವಳಿಯು ಇಡಿ ಹಿಂದುಸ್ತಾನ ದೇಶವನ್ನು ಜೊಂದು ಹಿಡಿದು ಹುರಿದು ಬಿಟ್ಟಿತು!

೧೬೮೪ರಲ್ಲಿ ಔರಂಗಜೇಬನು ವಿಜಾಪುರಕ್ಕೆ ಬರಲು ಆತನೊಡನೆ ಆತನ ಹಕೀಮನಾದ ಮಹಮ್ಮದ ಅಜೇಮಿ ಎಂಬವನೂ ದಕ್ಷಿಣಕ್ಕೆ ಬಂದಿದ್ದನು. ಆ ಹಕೀಮನು ಬರೆದಿರುವ "ತಿಬ್ಬೇ ಅಖಬರ" ಎಂಬ ಗ್ರಂಥದಲ್ಲಿ ಬರೆದಿರುವದೇನಂದರೆ:—"ಉರ್ದುಭಾಷೆಯಲ್ಲಿ ಪ್ಲೈಗಿಗೆ "ತಾಊನ" ಎನ್ನುತ್ತಾರೆ. ಈ ಬೇನೆಯಲ್ಲಿ ಏಳುವ ಗಂಟಿಗೆ "ಘನಸಿ" ಅನ್ನುವರು. ಅದು ಸಣ್ಣ ದುಂಡು ಗಡಲೆಯಿಂದ ದೊಡ್ಡ ಅಕ್ರೋಡ ಫಲದಷ್ಟು ಆಗುತ್ತದೆ. ಒಮ್ಮೊಮ್ಮೆ ಅದಕ್ಕೂ ದೊಡ್ಡದಾಗುತ್ತದೆ. ಈ ಗಂಟಿನಲ್ಲಿ ಉರುಪು ಬಹಳ. ಗಂಟಿನ ಸುತ್ತಲು ಬೇರೆ ಬೇರೆ ಬಣ್ಣಗಳು ತೋರುತ್ತವೆ; ಆದರೆ ಕರೇ ಬಣ್ಣದ ಪ್ಲೇಗಿನ ಗಂಟು ಮಹಾ ಭಯಂಕರವಾದದ್ದು! ಎಲ್ಲಿಯ ವರೆಗೆ ಆ ಗಂಟಿನ ಬಣ್ಣವು ಹಳದಿ ಇಲ್ಲವೆ ಕೆಂಪಾಗಿರುತ್ತದೆಯೋ ಅಲ್ಲಿಯವರೆಗೆ ಆ ರೋಗಿಗೆ ಬಹಳ ವಾಂತಿಯಾಗುತ್ತಿರುತ್ತದೆ. ಅದರಿಂದ ಅವನು ಭ್ರಮಿಷ್ಟನೂ, ಎಚ್ಚರಗೇಡಿಯೂ ಆಗುವನು. ಗಂಟುಗಳು ಬಗಲಲ್ಲಿ, ಕುತ್ತಿಗೆಯ ಮೇಲೆ, ನಾಲಿಗೆಯ ಕೆಳಗೆ, ಕಿವಿಯ ಹಿಂದೆ, ತೊಡೆಗಳ ಸಂದುಗಳಲ್ಲಿ ಮುಂತಾದ ಸ್ಥಳಗಳಲ್ಲಿ ಆಗುತ್ತವೆ. ಎಲ್ಲಕ್ಕಿಂತಲೂ ಕಿವಿಯ ಹಿಂದಾಗುವ ಗಂಟು ಮಹಾ ಭಯಂಕರವು! ಯಾಕಂದರೆ ಅದು ಮನಸ್ಸು ಮತ್ತು ಮಿದುಳುಗಳಿಗೆ ತೀರ ಸಮೊಪದಲ್ಲಿರುತ್ತದೆ. (ಸನ್ನಿಪಾತ ಜ್ವರದಲ್ಲಿ ಆ ಗಂಟಿಗೆ ಕರ್ಣಮೂಲವೆನ್ನುತ್ತಾರೆ) ಯಾವ ದಿನಗಳಲ್ಲಿ ಕಾಲರಾ (ಮಾರಿಕಾ) ಬೇನೆಯು ಬರುವದೋ ಅದೇ ದಿನಗಳಲ್ಲಿ ಈ ಪ್ಲೇಗಿನ ಗಂಟುಬೇನೆಯೂ ಬರುತ್ತದೆ. ಪ್ಲೇಗಿನ ರೋಗಿಯು ಗಾಬರಿಗೊಳ್ಳುತ್ತಾನೆ; ಅದರಿಂದ ಅವನ ಎದೆಯು ಧಡಧಡ ಹಾರುತ್ತದೆ. ಆದುದರಿಂದ ಮೊದಲು ಆ ಹೃದಯ ವಿಕಾರಕ್ಕೇ ಉಪಾಯ ಮಾಡತಕ್ಕದ್ದು. ತಂಪಾದ ಸುಗಂಧಯುಕ್ತ ಮದ್ಯ, ದಾಳಿಂಬರದ ಪಾನಕ, ಸಫರಚಂದ (ಶೇಬು) ಹಣ್ಣಿನ ಪಾನಕ, ಮಾದಾಳ, ಕಿತ್ತಳೆ, ಲಿಂಬೀಹಣ್ಣು ಮುಂತಾದವುಗಳಲ್ಲಿ ಸಮಯಕ್ಕೆ ಯಾವವು ಸಿಗುವವೋ, ಅವುಗಳ ಪಾನಕವನ್ನು ಮಾಡಿ ರೋಗಿಗೆ ಕುಡಿಸತಕ್ಕದ್ದು. ಚಂದನ, ಕರ್ಪೂರ ಮುಂತಾದ ಸುಗಂಧ ದ್ರವ್ಯಗಳನ್ನು ಎದೆಗೆ ಲೇಪಿಸಬೇಕು. ಮನೆಯಲ್ಲಿ ದುರ್ಗಂಧನಾಶಕವಾದ ಧೂಪವನ್ನು ಹಾಕಬೇಕು; ಮತ್ತು ರೋಗಿಗೆ ಸುಗಂಧ ದ್ರವ್ಯಗಳನ್ನು ಮೂಸಿ ನೋಡಲಿಕ್ಕೆ ಕೊಡಬೇಕು. ರೋಗಿಯು ಮಲಗತಕ್ಕ ಸ್ಥಳವು ತಂಪು ಮತ್ತು ಶಾಂತವಾದದ್ದಿರಬೇಕು. ಗಂಟಿಗೆ ಪ್ರತ್ಯಕ್ಷವಾಗಿ ಉಪಚಾರ ಮಾಡದೆ ಅದರ ಸುತ್ತುಮುತ್ತು ಉಪಚಾರ ಮಾಡತಕ್ಕದ್ದು. ಅಂದರೆ ಗಂಟಿನೊಳಗಿನ ದುಷ್ಟ ರಕ್ತವು ಬೇರೆ ಕಡೆಗೆ ಪಸರಿಸುವದಿಲ್ಲ. ಗಂಟಿಗೆ ಜಿಗಳೇ ಹಚ್ಚಿ ಹೋದಷ್ಟು ಹೆಚ್ಚು ದುಷ್ಟ ರಕ್ತವನ್ನು ಕಳೆಯಬೇಕು. ತುಂಬಡಿ ಹಚ್ಚಿ ಸಹ ತೆಗೆಯ

ಬೇಕು. ರೋಗಿಗೆ ತಂಪಾದ ಪದಾರ್ಥಗಳನ್ನು ತಿನಿಸಬೇಕು. ಹಗುರಾದ ಅನ್ನ, ಮಾಂಸರಸ, ಹಾಲು ಈ ಪದಾರ್ಥಗಳನ್ನು ಧರ್ಮಾಚಾರದಂತೆ ಉಣಿಸ ಬೇಕು. ವಿಶೇಷ ಪ್ರಸಂಗದಲ್ಲಿ ಶಿರಗಳನ್ನು ಹರಿದು ರಕ್ತ ತೆಗೆಯಬೇಕು. ಗಂಟಿನೊಳಗಿನ ದೂಷಿತ ರಕ್ತವು ಹೊರಟುಹೋಯಿತೆಂದರೆ ರೋಗಿಯು ಬದುಕುತ್ತಾನೆ. ಪ್ಲೇಗಿನ ಗಂಟು ಕೊಯ್ಯುವದಾದರೆ ಸಂಪೂರ್ಣವಾಗಿ ಕೊಯ್ಯತಕ್ಕದ್ದು. ಕೊಯ್ಯುವ ಮೊದಲು ಚನ್ನಾಗಿ ವಿಚಾರ ಮಾಡಿ ಕೊಯ್ಯತಕ್ಕದ್ದು. ಕೊಯ್ಯುವಾಗ ದೂಷಿತ ರಕ್ತವು ಶರೀರದ ಬೇರೆ ಕಡೆಗೆ ಹತ್ತದಂತೆ ಎಚ್ಚರಪಡಬೇಕು. ರಕ್ತಸ್ರಾವವಾಗುವ ವರೆಗೆ ರೋಗಿಗೆ ಸುಗಂಧಯುಕ್ತ ತಣ್ಣೀರನ್ನು ಕುಡಿಸ ಬೇಕು. ಗಂಟು ದೊಡ್ಡದಿದ್ದರೇನೇ ಕೊಯ್ಯತಕ್ಕದ್ದು; ಇಲ್ಲವೆ ಜಿಗಳೀಹಚ್ಚಿ ರಕ್ತ ಶೋಷ ಮಾಡಿಸತಕ್ಕದ್ದು. ಸಣ್ಣ ಗಂಟು ಇದ್ದರೆ ಅದನ್ನು ಕೊಯ್ಯದೆ ಬರೇ ಜಿಗಳೀ ಹಚ್ಚಬೇಕು. ಸಾರಾಂಶ ಗಂಟಿನ ಸುತ್ತಲಿನ ಬಣ್ಣವನ್ನು ಪರೀಕ್ಷಿಸಿ, ವಿಷದ ಬಲಾಬಲದಂತೆ ವ್ಯವಸ್ಥೆ ಮಾಡತಕ್ಕದ್ದು. ಗಂಟು ಕೊಯ್ಯುವ ಮೊದಲು ಹಾಗು ನಂತರದಲ್ಲಿ ರೋಗಿಯು ಎಚ್ಚರದಪ್ಪಿ ಬೀಳುತ್ತಾನೆ; ಯಾಕೆಂದರೆ ಈ ಪ್ಲೇಗು ರೋಗದಲ್ಲಿ ಹೃದಯ ಹಾಗು ಮಿದುಳುಗಳು ಅಶಕ್ತವಾಗಿರುತ್ತವೆ. ಅದರಿಂದ ಶಕ್ತಿಯು ಕಾಯುಮವಾಗಿರುವಂತೆ ಉತ್ತೇಜಕ ಪೇಯಗಳನ್ನು ಕೊಡಬೇಕು. ಆಗ ಮಾಡತಕ್ಕ ಶೀತೋಪಚಾರಗಳ ವಿವರಣವನ್ನು ಮೇಲೆ ಹೇಳಿಯೇ ಇದೆ. ಪ್ಲೇಗ ಜ್ವರದ ಹೊರತು ಉಳಿದ ಜ್ವರಗಳ ರೋಗಿಗೆ ಶೀತೋಪಚಾರವು ತೀರ ವರ್ಜ್ಯವಾಗಿರುತ್ತದೆ; ಯಾಕಂದರೆ ಈ ಜ್ವರಗಳು ಉಳಿದ ಜ್ವರಗಳಿಗಿಂತ ತೀರ ಭಿನ್ನವಾಗಿರುತ್ತವೆ. ಈ ಗಂಟು ಬೇನೆಯು ವಿಷಾರಿ ಕೃಮಿಗಳಿಂದ ಉತ್ಪನ್ನವಾಗುವದರಿಂದ, ವಿಷಕ್ಕೆ ಶೀತೋಪಚಾರವೇ ತಕ್ಕದ್ದು; ಉಷ್ಣೋಪಚಾರವು ತಕ್ಕದ್ದಲ್ಲ. ಅದರಿಂದ ಪ್ಲೇಗಿನ ಜ್ವರದ ವೇಗವು ವೃದ್ಧಿಂಗತವಾಗುತ್ತದೆ; ಆದರೆ ಶೀತೋಪಚಾರ ಮಾಡುವಾಗಲೂ ವೈದ್ಯನು ತಾರ್ತಮ್ಯದಿಂದ ವರ್ತಿಸತಕ್ಕದ್ದು.

ನಮ್ಮ ಆರ್ಯ ವೈದ್ಯರಿಗಿಂತ ಯುನಾನಿ ವೈದ್ಯಕಲ್ಲಿಯೇ ಪ್ಲೇಗುರೋಗದ ಬಗ್ಗೆ ಹೆಚ್ಚು ಮಾಹಿತಿಯು ಉಪಲಬ್ಧವಾಗುತ್ತದೆ. ಯಾಕಂದರೆ ಈ ಬೇನೆಯು ಇಲ್ಲಿಗೆ ಅರೇಬಿಯಾ, ಆಫ್ರಿಕಾ ದೇಶಗಳಿಂದಲೇ ಬಂದಿರುತ್ತದೆ. ಪ್ರಾಚೀನ ದಿಂದಲೂ ಈ ರೋಗವು ಇಲ್ಲಿದ್ದದ್ದಾದರೆ ಯಾವ ನಮ್ಮ ಪೂರ್ವಜ ವೈದ್ಯಕರು ತಮ್ಮ ಚಿಕಿತ್ಸಾ ಪ್ರಭಾವದಿಂದಲೂ, ಶೋಧಗಳಿಂದಲೂ ಅರ್ವಾಚೀನ ಕಾಲದ ದೊಡ್ಡ ದೊಡ್ಡ ಶೋಧಕರನ್ನು ಕೂಡ ಅಚ್ಚರಿಪಡಿಸಿರುವರೋ, ಅವರು ಈ ಪ್ಲೇಗು ಬೇನೆಗೆ ಒಳ್ಳೇ ಮದ್ದನ್ನು ಶೋಧ ಮಾಡದೆ ಬಿಡುತ್ತಿದ್ದಿಲ್ಲವೆಂಬದು

ಶಿಶ್ರಿತವಾದದ್ದು. ಇರಲಿ. ಈ ಗಂಟುಬೇನೆಯ ಬಗ್ಗೆ ಅರಬೀಗ್ರಂಥಕಾರನಾದ 'ನಾಫ್ಸ್ಲು"ಎಂಬವನು ತನ್ನ 'ಶರಹಾ ಅಶಬಾಬ' ಎಂಬ ಗ್ರಂಥದಲ್ಲಿ ಪ್ಲೇಗಿಗೆ 'ತಾಊನ' ಎಂಬ ಹೆಸರನ್ನೇ ಉಪಯೋಗಿಸಿರುತ್ತಾನೆ. ಅವನು ಆ ಗ್ರಂಥ ದಲ್ಲಿ ಹೇಳಿದ ಉಪಾಯಗಳನ್ನು ನಾವು ಈ ಕೆಳಗೆ ಯೋಗ್ಯ ಸ್ಥಳದಲ್ಲಿ ಕೊಟ್ಟಿ ರುತ್ತೇವೆ. ಪ್ಲೇಗಿನ ಬೇನೆಯಿಂದ ಗಂಡಸರಿಗಿಂತ ಹೆಂಗಸರೇ ಹೆಚ್ಚು ಜನ ಸಾಯುವರೆಂದು ಲೆಕ್ಕದಿಂದ ತಿಳಿದು ಬಂದಿದೆ. ಅದರಲ್ಲಿಯೂ ಬಸುರಾದ ಹೆಣ್ಣುಮಕ್ಕಳಿಗೆ ಈ ಬೇನೆಯು ಬಂದರೆ ಅವರು ಬದುಕುವದು ದುಸ್ತರವೆಂದೇ ಹೇಳಬಹುದು.

## ಪ್ಲೇಗಜಂತು ವರ್ಣನ.

ಪ್ಲೇಗಿನ ಕ್ರಿಮಿಗಳು ಅರ್ಧಗೋಲ ಹಾಗು ಲಂಡವಾಗಿದ್ದು, ಅವುಗಳ ತುದಿಗಳು ದುಂಡಗಾಗಿರುತ್ತವೆ; ಇಲ್ಲವೆ ಚಚ್ಚೌಕಾಗಿರುತ್ತವೆ. ಅವು ಬಿಡಿಬಿಡಿ ಯಾಗಿ ಅಥವಾ ಒಂದಕ್ಕೊಂದು ಅಂಟಿಕೊಂಡಿರುವದನ್ನು ಇಲ್ಲವೆ ಸರಪಳಿ ಯಂತೆ ಒಂದಕ್ಕೊಂದು ಬಹು ಉದ್ದವಾಗಿ ಹೊಂದಿಕೊಂಡಿರುವದನ್ನು ಕಾಣ ಬಹುದು. ಒಮ್ಮೊಮ್ಮೆ ಆ ಜಂತುಗಳ ಸುತ್ತಲು ಅವರಣವಿರುವದೂ ದೃಷ್ಟಿಗೆ ಬೀಳುತ್ತದೆ. ಆ ಜಂತುಗಳಿಗೆ ಚಲನಶಕ್ತಿಯೇ ಇರುವದಿಲ್ಲ. ಅವು ರಕ್ತದಲ್ಲಿ ಸೇರಿದ ಕೂಡಲೆ ಅವುಗಳ ಬೆಳವಣಿಗೆಯು ಹೆಚ್ಚಿ ರಕ್ತವು ದೂಷಿತವಾಗುತ್ತದೆ. ಆ ಜಂತುಗಳು ಪ್ಲೇಗಿನ ಗಂಟಿನಲ್ಲಿ ಹೆಚ್ಚಾಗಿರುತ್ತವೆ. ಯಾರ ಪ್ರೈರಕ್ತವು ಪ್ಲೇಗಜಂತುಗಳ ಪೋಷಣಕ್ಕೆ ತಕ್ಕದ್ದಾಗಿರುವದೋ, ಅಂಥವರಿಗೇ ಪ್ಲೇಗಬೇನೆ ಯಾಗುತ್ತದೆ. ಉಳಿದವರಿಗೆ ಆ ರೋಗವು ಸೋಂಕುವದಿಲ್ಲ; ಒಮ್ಮೊಮ್ಮೆ ಆದರೂ ಅವನು ಸಾಯುವದಿಲ್ಲ, ಬದುಕುತ್ತಾನೆ. ಯಾಕಂದರೆ ಆತನ ಶರೀರ ದಲ್ಲಿ ಪ್ಲೇಗಜಂತುಗಳನ್ನು ನಾಶಪಡಿಸುವ ಶಕ್ತಿಯಿರುತ್ತದೆ. ಅಂತೆಯೇ ಪ್ಲೇಗಿನಂತಹ ಭಯಂಕರ ಸಾಂಸರ್ಗಿಕ ರೋಗದಿಂದ ಹಾಗು ಪ್ಲೇಗಿನಿಂದ ಸಾವಿರಾರು ಜನರು ನಿರ್ಭಯವಾಗಿ ಬದುಕುತ್ತಾರೆ. ಪ್ಲೇಗಜಂತುಗಳ ಏಳ್ಗೆಯನ್ನು ಕುಗ್ಗಿಸುವ ಶಕ್ತಿಯು ಮನುಷ್ಯನ ಅನ್ನದ ರಸದಲ್ಲಿ ಹಾಗು ಇತರ ಪಾಚಕರಸಗಳಲ್ಲಿ ಇರುತ್ತದೆ. ಅದಕ್ಕೂ ಹೆಚ್ಚಿನ ಶಕ್ತಿಯು ರಕ್ತದ ಗೋಲಕಗಳಲ್ಲಿರುತ್ತದೆ; ಆದರೆ ರಕ್ತಗೋಲಕಕ್ಕಿಂತ ಪ್ಲೇಗಜಂತುಗಳ ಕಸುವು ಇಲ್ಲವೆ ಸಮೂಹವು ಹೆಚ್ಚಾದರೆ ಮಾತ್ರ, ರಕ್ತಗೋಲಕಗಳ ಆಟವು ಸಾಗದಾಗು ತ್ತದೆ. ಅದರಿಂದ ಆ ಕ್ರಿಮಿಗಳು ತಮ್ಮ ಕಸುವನ್ನು ಹೆಚ್ಚಿಸಿ ರೋಗವನ್ನುತ್ಪನ್ನ ಮಾಡುತ್ತವೆ; ಆದರೆ ಎಲ್ಲಿಯ ವರೆಗೆ ಶರೀರದೊಳಗಿನ ಶಕ್ತಿಯು ದೃಢವಾಗಿರುವ ದೋ, ರಕ್ತ ಹಾಗು ಅದರ ಗೋಲಕಗಳು ನಿರ್ದೂಷಿತಗಳಾಗಿರುವವೋ,ಅಲ್ಲಿಯ್ಯು

ವರೆಗೆ ಪ್ಲೇಗು ಇಲ್ಲವೆ ಮತ್ತಾವ ಮಹಾ ಸಾಂಸರ್ಗಿಕ ರೋಗದ ಬಾಧೆಯೂ ಆ ಮನುಷ್ಯನಿಗಾಗುವದಿಲ್ಲ ಆದುದರಿಂದ ಇಂಥ ಪಿಡುಗುಗಳ ಕಾಲದಲ್ಲಿ ಪ್ರತಿಯೊಬ್ಬನೂ ತನ್ನ ಪ್ರಕೃತಿಯು ಸದೃಢವಾಗಿರುವ ಬಗ್ಗೆ ಹೆಚ್ಚಾಗಿ ಎಚ್ಚರಪಡತಕ್ಕದ್ದು ಅವಶ್ಯವಾಗಿದೆ.

## ಇಲಿಗಳಿಗೂ ಪ್ಲೇಗಿಗೂ ಇರುವ ಸಂಬಂಧವು.

ಕೃಮಿಜನ್ಯ ವಿಷದಿಂದ ರಕ್ತವು ದೂಷಿತವಾಗಿ ಈ ಗಂಟುಬೇನೆಯಾಗುವದೆಂದು ಮೇಲೆಯೇ ಹೇಳಿದೆ. ಇದು ಎಲ್ಲ ವಿದ್ವಾನ್ ವೈದ್ಯ ಹಾಗು ಡಾಕ್ಟರರ ಅನುಭವದಿಂದಲೇ ಸಿದ್ಧವಾಗಿರುತ್ತದೆ. ಚಳಿಜ್ವರ, ಗೊಬ್ಬರ, ಮೈಲಿಗಳ ಪಿಡುಗು ಹೇಗೆ ಬರುವದೋ ಹಾಗೆಯೇ ಈ ಪ್ಲೇಗಿನ ಪಿಡುಗೂ ಬರುತ್ತದೆ. ಪ್ಲೇಗು ಬರುವ ಮುಂಚೆ ದೂಷಿತ ಹವೆಯಲ್ಲಿ ಇದರ ಕ್ರಿಮಿಗಳುಂಟಾಗಿ ಅವು ತಿಳುವು ತೊಗಲಿನ ಪ್ರಾಣಿಗಳಾದ ಇಲಿಗಳನ್ನು ಮುತ್ತಿ ದಂಶ ಮಾಡುತ್ತವೆ. ಆ ವಿಷ ಜಂತುಗಳ ದಂಶದಿಂದ ಇಲಿಗಳಿಗೆ ವಿಷಬಾಧೆಯಾಗಿ ಜ್ವರ ಬಂದು ಗಂಟೇಳುತ್ತವೆ; ಹಾಗು ಅವು ಆ ವಿಕಾರದಿಂದ ಸಾಯುಹತ್ತುತ್ತವೆ. ಇಲಿಗಳಲ್ಲಿ ಹಲವು ಪ್ರಕಾರಗಳಿವೆ. (ಸುಶ್ರುತ ಮೂಷಿಕಾ ಕಲ್ಪಾಧ್ಯಾಯ ನೋಡಿರಿ.) ೧ ಲಾಲನ, ೨ ಪುತ್ರಕ, ೩ ಕೃಷ್ಣ, ೪ ಹಂಸೀರ, ೫ ಚಿಕ್ಕೀರ, ೬ ಛುಚ್ಛುಂದರ, ೭ ಅಲಸ, ೮ ಕಷಾಯದಶನ, ೯ ಕುಲಿಂಗ, ೧೦ ಅಜಿತ, ೧೧ ಚಪಲ, ೧೨ ಕಪಿಲ, ೧೩ ಕೋಕಿಲ, ೧೪ ಅರುಣ ಸಂಜ್ಞ, (ಕೆಂಪು ಬಣ್ಣದ ಇಲಿ) ೧೫ ಮಹಾ ಕೃಷ್ಣ (ಹೆಗ್ಗಣ) ೧೬ ಶ್ವೇತ ಮೂಷಕ (ಬಿಳೀ ಇಲಿ) ೧೭ ಕಪೋತಾಭ (ಪಾರಿವಾಳದ ಬಣ್ಣದ ಇಲಿ) ಎಂದು ಭೇದಗಳುಂಟು. ಈ ಪ್ರತಿಯೊಂದು ಬಗೆಯ ಇಲಿಗಳಿಗೆ ಹೀನಾಧಿಕ ವಿಷಲಕ್ಷಣಗಳುಂಟು. ಹುಲಿಯ ವಿಷವು ಅದರ ಉಗುರಿನಲ್ಲಿರುತ್ತದೆ; ಸರ್ಪದ ವಿಷವು ಅದರ ಹಲ್ಲಿನಲ್ಲಿ; ಚೇಳಿನ ವಿಷವು ಕೊಂಡಿಯಲ್ಲಿ; ಜೆರ್ರಿ ಮುಂತಾದ ಕೀಟಕಗಳ ವಿಷವು ಅವುಗಳ ಸ್ಪರ್ಶದಲ್ಲಿರುವಂತೆ ಇಲಿಗಳ ವಿಷವು ಅವುಗಳ ವೀರ್ಯದಲ್ಲಿ( ಧಾತುವಿನಲ್ಲಿ )ರುತ್ತದೆ. ಅದರಿಂದ ಯಾರ ಮೈಮೇಲೆ ಇಲಿಯ ಧಾತು ಪತನವಾಗುವದೋ ಇಲ್ಲವೆ ಅವು ತಮ್ಮ ವಿರ್ಯದಲ್ಲಿ ಎದ್ದಿದಂಥ ತಮ್ಮ ಉಗುರುಗಳಿಂದ ಮನುಷ್ಯನ ಯಾವ ಭಾಗವನ್ನು ಸ್ಪರ್ಶಮಾಡುವವೋ ಆಯಾ ಭಾಗದ ಅವನ ರಕ್ತವು ದೂಷಿತವಾಗುತ್ತದೆ; ಮತ್ತು ಅದರಿಂದ ಗಂಟುಬೇನೆ, ಬಾವು, ಕಲ್ಪಕದಂತಹ ವರ್ತುಳಗಳ ಭಯಂಕರ ಗುಳ್ಳೆಗಳು, ಭಯಂಕರಗಳಾದಂಥ ಅಗ್ನಿವಿಸರ್ಪಾದಿ ರೋಗಗಳು, ಸಂದುನೋವು, ತೀವ್ರವ್ಯಾಧೀ, ಭಯಂಕರ ಜ್ವರ, ಮೂರ್ಛೇ ಇತ್ಯಾದಿ ರೋಗಗಳುಂಟಾಗುತ್ತವೆ. ಮೂಷಕ ವಿಷವು ವರ್ಷಾಋತುವಿನಲ್ಲಿ (ಮಳೆಗಾಲದ

ಪ್ರಾರಂಭಕ್ಕೆ) ಕೋಪಗೊಳ್ಳುತ್ತದೆ. ಆಕಾಶದಲ್ಲಿ ಮೇಘಾಡಂಬರವು ಹೆಚ್ಚಾದಂತೆ ಪ್ಲೇಗು ಬೇನೆಯು ಹೆಚ್ಚಾಗುವದೆಂಬದು ಸಕಲರಿಗೂ ತಿಳಿದ ಮಾತಾಗಿರುತ್ತದೆ. ದೂಷಿತ ವಿಷವು ಕೋಪವಾಗುವ ಕಾಲವೂ ಅದೇ. ಅಂತೆಯೇ ಪ್ಲೇಗು ಹಬ್ಬುವ ಮೊದಲು ಎಲ್ಲೆಲ್ಲಿಯೂ ಇಲಿಗಳ ಬೆಳವಣಿಗೆಯಾದದ್ದು ಕಂಡುಬರುವದು. ಅವು ಒಂದರ ಮೇಲೊಂದು ಸ್ವೈರಗತಿಯಿಂದ ಸಾಗಿ ಹೋಗುತ್ತವೆ; ಅಂದರೆ ಆ ಕಾಲಕ್ಕೆ ಅವುಗಳ ವೀರ್ಯವು ವೃದ್ಧಿಯಾಗುವದರಿಂದ ಅವು ಬಹಳ ಉನ್ಮತ್ತವಾಗಿರುತ್ತವೆ; ಮತ್ತು ಅವು ಅತಿ ವಿಷಯಲೋಲುಪವಾಗಿರುತ್ತವೆ. ಅದೇ ಕಾಲಕ್ಕೆ ಅವುಗಳಿಗೆ ಶುಕ್ರಗತಜ್ವರ (ರೋಗ) ವುಂಟಾಗಿ ಅವು ಸಾಯಹತ್ತುತ್ತವೆ. ಅವೇ ವಿಷ, ವಾಯು, ಕ್ರಿಮಿಗಳು ಧಾನ್ಯಾದಿಕಗಳ ದ್ವಾರ ದೇಶದ ತುಂಬ ಹರಡುತ್ತವೆ; ಹಾಗು ಆ ಇಲಿಗಳ ವೀರ್ಯವೇ ದೇಶದ ಅನರ್ಥಕ್ಕೆ ಕಾರಣೀಭೂತವಾಗುತ್ತಿರುತ್ತವೆ ಈ ಪ್ಲೇಗಿನ ಜ್ವರಗಳು ಇಲಿಗಳಿಗೆ ನೈಸರ್ಗಿಕವಾಗಿವೆ ಇದರಂತೆಯೇ ಇವು ವಿಷಸಂಭೂತವಾದ್ದರಿಂದ ಆಮುಕಾರಿ(ಶೀಘ್ರ ಮಾರಕ) ವಾಗಿರುತ್ತವೆಂಬದು ಪ್ರಸಿದ್ಧವೇ ಇದೆ. ನೈಸರ್ಗಿಕವಾದ್ದರಿಂದ ಇವು ಅಪರಿಹಾರ್ಯವಾಗಿವೆ ಮೊದಮೊದಲು ಈ ಪ್ಲೇಗಿನ ಹೆದರಿಕೆಗಾಗಿ ಇಲಿ ಕೊಲ್ಲುವ ವಿಧಾನವು ಪ್ರಚಾರದಲ್ಲಿದ್ದಿತು. ಈ ಮೊದಲು ಹೇಳಿದಂತೆ ಇಲಿಗಳ ಪ್ರಭೇದಗಳಿಗನುಸಾರವಾಗಿ ಅವುಗಳ ದೂಷಿತ ವೀರ್ಯದಲ್ಲಿಯೂ ಹೆಚ್ಚು ಕಡಿಮೆಯಿರುವದರಿಂದ ಪ್ಲೇಗಿನ ಪಿಡುಗುಗಳು ಎಲ್ಲ ಕಾಲಕ್ಕೂ ಒಂದೇ ಬಗೆಯಾಗಿ ಪಸರಿಸುವದಿಲ್ಲ ಮೊದಲಿನ ಪ್ಲೇಗಿನಿಂದ ಅಂದರೆ ೧೮೯೬ನೇ ಇಸವಿಯಿಂದ ಕೃಷ್ಣಮೂಷಕ(ಹೆಗ್ಗಣ)ಗಳು ವಿಶೇಷವಾಗಿ ಕಂಡು ಬರುವದಿಲ್ಲ. ಅವು ಹೆಚ್ಚು ವೀರ್ಯಯುಕ್ತಗಳಾದ್ದರಿಂದ ಪ್ರಖರ ವಿಷಾರಿಗಳಾಗಿರುತ್ತವೆಂಬದು ಖಂಡಿತವು. ದಿನದಿನಕ್ಕೆ ಪ್ಲೇಗಿನ ಪಿಡುಗು ಕಡಿಮೆಯಾಗಲಿಕ್ಕೆ ವಿಷದೂಷಿತ ಹವೆಯ ಅಭಾವವೇ ಕಾರಣವು. ಪ್ರಖರ ವಿಷದ ಇಲಿಗಳ ಅಥವಾ ಪ್ರಾಣಹರ ವಿಷದ ಇಲಿಗಳ ಲಕ್ಷಣಗಳನ್ನು ಚಿ. ಪ್ರ. ಗ್ರಂಥದೊಳಗಿನ ಜನಪದವ್ಯಾಪಚ್ಚಿಕಿತ್ಸದಲ್ಲಿ ಹೇಳಿದೆ. ಇಲಿಗಳನ್ನು ದೇವರೇ ಹುಟ್ಟಿಸಿರುವನಾದ್ದುದರಿಂದ ಅವುಗಳನ್ನೆಲ್ಲ ನಿರ್ಮೂಲ ಮಾಡಿ ಬಿಡುವದು ಅಶಕ್ಯಮಾತಾಗಿದೆ. ಇಲಿಗಳ ಬೆಳವಣಿಗೆಯು ಬಹು ತೀವ್ರ ಆಗುತ್ತಿರುತ್ತದೆ. ಹೆಣ್ಣಿಲಿಯು ಪ್ರತಿವರ್ಷ ೬ ಸೂಲುಗಳನ್ನು ಹಾಕುತ್ತದೆ; ಮತ್ತು ಪ್ರತಿ ಸೂಲಕ್ಕೆ ೮-೧೦ ಮರಿಗಳನ್ನಾದರೂ ಈಯುತ್ತದೆ. ಯಾವುದೊಂದು ಇಲಿಮರಿಯು ಆರುತಿಂಗಳದ್ದಾಗುವಷ್ಟರಲ್ಲಿ ಅದೂ ಮರಿಹಾಕಹತ್ತುತ್ತದೆ. ಹೀಗೆ ಭೂಮಿತಿಶ್ರೇಢಿಯಂತೆ ಬೆಳೆಯುತ್ತಿರುವ ಆ ಈಶನಿರ್ಮಿತ ಇಲಿಗಳ ಬೆಳವಣಿಗೆಯು ಮನುಷ್ಯಪ್ರಯತ್ನದಿಂದ ಸಮೂಲವಾಗಿ ನಾಶಹೊಂದುವದು

ಅಶಕ್ಯವೇ ಸರಿ; ಆದರೂ ಅವನ್ನು ಸಂಹರಿಸಲಿಕ್ಕೆ ತಕ್ಕ ಔಷಧಿಗಳನ್ನು ಶೋಧ ಮಾಡುವದು ವಿದ್ವಜ್ಜನ ಶೋಧಕರ ಕರ್ತವ್ಯವಾಗಿದೆ.

ಮನುಷ್ಯನ ಮೈಯೊಳಗೆ ಪ್ಲೇಗಿನ ವಿಷವು ಚಿಕ್ಕಾಟಗಳ ಮೂಲಕ ಹೇಗೆ ಪ್ರವೇಶವಾಗುವದೋ ಹಾಗೆಯೇ ಒಂದು ಇಲಿಯ ಮೈಯೊಳಗಿನ ಪ್ಲೇಗು ಜಂತುದೂಷಿತ ವಿಷವು ಮತ್ತೊಂದು ಇಲಿಗೆ ಆ ಚಿಕ್ಕಾಟಗಳ ದ್ವಾರದಿಂದಲೇ ಹಬ್ಬುತ್ತಿರುತ್ತದೆ. ಇಲಿಯ ಮೈಯೊಳಗಿನ ಪ್ಲೇಗ ವಿಷದೂಷಿತ ರಕ್ತವನ್ನು ತಿಂದು ಸಂಚರಿಸುತ್ತಿರುವ ಚಿಕ್ಕಾಟಗಳು ಮನುಷ್ಯನಿಗೆ ಕಡಿಯುವದರಿಂದಲೇ ಅವನಿಗೆ ಪ್ಲೇಗುಬೇನೆಯಾಗುತ್ತದೆ. (ಡಾಕ್ಟರ ಜನರು ಇತ್ತೀಚೆಗೆ ಪ್ರತಿಯೊಂದು ರೋಗಕ್ಕೆ ಮಾಡುತ್ತಿರುವ ಇಂಜಕ್ಶನ್ನದ ಪದ್ಧತಿಯಂತೆಯೇ ಈ ಚಿಕ್ಕಾಟಗಳಾದರೂ ದಂಶ ಮಾಡಿ ಪ್ಲೇಗಿನ ಹಬ್ಬುವಿಕೆಗೆ ಕಾರಣವಾಗುತ್ತವೆ)

ಚಿಕ್ಕಾಟಗಳು ೨ ಪ್ರಕಾರದವಿವೆ. ಎರಡೂ ಬಗೆಯ ಚಿಕ್ಕಾಟಗಳೂ ಅತಿ ಸೂಕ್ಷ್ಮ ಜಂತುಗಳ ಮೇಲೆ, ದನ-ಕರುಗಳ ಮೇಲೆ, ಪಕ್ಷಿಗಳ ಮೇಲೆ ಹಾಗು ಮನುಷ್ಯರ ಮೇಲೆ ಕುಳಿತು ಅವುಗಳ ರಕ್ತದಿಂದ ಹೊಟ್ಟೆಹೊರೆಯುತ್ತಿರುತ್ತವೆ; ಆದರೆ ಅವುಗಳಲ್ಲೊಂದು ಜಾತಿಯ ಚಿಕ್ಕಾಟಗಳು ಪ್ರಾಣಿಗಳ ರಕ್ತತಿಂದು ಅದರಲ್ಲಿ ರೋಗದ ಬೀಜವನ್ನು ಬಿತ್ತುತ್ತವೆ ಇನ್ನೊಂದು ಬಗೆಯವು ಬರೇ ರಕ್ತ ಕುಡಿದು ಜೀವಿಸತಕ್ಕವು. ಇವುಗಳಲ್ಲಿಯ ಎಷ್ಟೋ ಚಿಕ್ಕಾಟಗಳು ಬರೇ ಮನೆ ಮಾರಿನ ದನಕರುಗಳ ಮೇಲೆಯೇ ಇರುವವೆಂತಲ್ಲ. ಅಡವಿಯ ದನಕರುಗಳ ಮೈ ಮೇಲೂ, ಪಶುಪಕ್ಷಿಗಳ ಮೈ ಮೇಲೂ ಇರುತ್ತಿರುತ್ತವೆ. ಪ್ರಾಣಿಶಾಸ್ತ್ರಜ್ಞರು ಚಿಕ್ಕಾಟಗಳನ್ನು ಕೀಟಕವರ್ಗದಲ್ಲಿ ಎಣಿಸಿರುತ್ತಾರೆ; ಮತ್ತು ಅದರಲ್ಲಿ ೯ ಉಪ ಜಾತಿಗಳನ್ನು ಹೇಳಿರುತ್ತಾರೆ ಆ ಉಪಜಾತಿಗಳೊಳಗಿನ ಎರಡು ಪಕ್ಕದ ಚಿಕ್ಕಾಟವು ರೋಗಬೀಜವನ್ನು ಪಸರಿಸತಕ್ಕ ಪ್ರಾಣಿಯಾಗಿದೆ. ಇದು ಅಂಡಜವಾಗಿದ್ದು, ಪಾತರಗಿತ್ತಿಯಂತೆ ಇದಕ್ಕೆ ನಾಲ್ಕು ಅವಸ್ಥೆಗಳಾಗುತ್ತಿರುತ್ತವೆ ಮೊದಲನೆಯ ಅವಸ್ಥೆಯಲ್ಲಿ ತತ್ತಿಗಳಿರುತ್ತಿದ್ದು, ೨ನೆಯ ಅವಸ್ಥೆಯಲ್ಲಿ ನೂಲಿನಂತಹ ಸಣ್ಣ ಹುಳುವಾಗುವದು ೩ನೇ ಅವಸ್ಥೆಯಲ್ಲಿ ಇದು ಕೋಸಾ ಆಗಿ, ೪ನೆಯ (ಕಡೆಯ) ಅವಸ್ಥೆಯಲ್ಲಿ ಪಾತೀಪುಡಿ ಬಣ್ಣದ ಹಾರಾಡುವ ಚಪ್ಪಟೆ ಶರೀರದ ಚಿಕ್ಕಾಟವಾಗುವದು. ಚಿಕ್ಕಾಟಗಳ ಬೆಳವಣಿಗೆಯು ತೇವಿನ ಸ್ಥಳ, ಹಸಿ ನೆಲ, ಹೊಲಸು, ಕಸಕಡ್ಡಿಗಳಲ್ಲಿ ಬಹು ತೀವ್ರವಾಗಿ ಆಗುತ್ತದೆ; ಹಾಗು ಉಷ್ಣ ಹವೆಯಲ್ಲಿ ಮತ್ತು ಬೇಸಿಗೆ ಕಾಲದಲ್ಲಿ ಕಡಿಮೆಯಾಗುತ್ತದೆ ಅಲ್ಲದೆ ಸಿಲ್ಕು ಇದ್ದವೂ ನಾಶಹೊಂದುತ್ತವೆ.

ಚಿಕ್ಕಾಟವು ರಕ್ತ ಕುಡಿದು ಜೀವಿಸುವ ಪ್ರಾಣಿಯಾದುದರಿಂದ ಅದು ತನ್ನ ವಿಷಯುಕ್ತ ನೊಂಡಿಯನ್ನು ಮನುಷ್ಯನ ರಕ್ತದಲ್ಲಿ ಸೇರಿಸಿ ರಕ್ತ ಹೀರಹತ್ತಿ

ತೆಂದರೆ ಸಹಜವಾಗಿಯೇ ಅವನ ರಕ್ತದೊಳಗೆ ಅದರ ವಿಷವು ಮಿಶ್ರವಾಗುತ್ತದೆ. ಆ ವಿಷವು ಸೂಕ್ಷ್ಮ ಜಂತುಯುಕ್ತವಾದುದರಿಂದ ಅದು ರಕ್ತದಲ್ಲಿ ಸೇರಿದ ಕೂಡಲೆ ಆ ಸೂಕ್ಷ್ಮ ಕ್ರಿಮಿಗಳ ಬೆಳವಣಿಗೆಯು ಮನುಷ್ಯರಕ್ತದಲ್ಲಿ ಬಹು ತೀವ್ರವಾಗುತ್ತದೆ; ಮತ್ತು ಅದರಿಂದ ಎಲ್ಲ ರಕ್ತವೂ ಕೆಟ್ಟು(ವಿಷದೂಷಿತವಾಗಿ) ಜ್ವರಬಂದು ಸನ್ನಿಪಾತದ ಎಲ್ಲ ಲಕ್ಷಣಗಳು ತೋರಿ ಅವನು ಸಾಯುತ್ತಾನೆ. ಕಡಿಮೆ ಪ್ರತಿಯು ಇಲ್ಲವೆ ಅಲ್ಪ ದೋಷದ ವಿಷವು ವಿಶೇಷವಾಗಿ ಬಾಧಿಸದಿದ್ದರೆ, ಅಂಥ ಅಲ್ಪಸ್ವಲ್ಪ ರೋಗಿಗಳು ಜೀವಕ್ಕೆರವಾಗದೆ ಉಳಿಯುವರು; ಆದರೆ ಹೀಗೆ ಉಳಿಯುವವರ ಸಂಖ್ಯೆಯು ಅತ್ಯಲ್ಪವೆಂದೇ ಹೇಳಬೇಕಾಗುವದು. ವಿಷ ದೂಷಿತ ರಕ್ತದ ಅತಿರೇಕವಾಯಿತೆಂದರೆ, ಅದರಿಂದ ಗಂಟು ಏಳುತ್ತದೆ. ಅದರ ಕ್ರಮವು ಹೀಗೆ:—ವಿಷದೂಷಿತ ಚಿಕ್ಕಾಟವು ಮನುಷ್ಯನ ಟೊಂಕದ ಕೆಳಗೆ ಎಲ್ಲಿ ಕಡಿದರೂ ಅವನಿಗೆ ತೊಡೆಗಳ ಸಂಧಿಯಲ್ಲಿ ಪ್ಲೇಗಿನ ಗಂಟು ಏಳುತ್ತದೆ. ಟೊಂಕ ದಿಂದ ಕುತ್ತಿಗೆಯ ವರೆಗೆ ಎಲ್ಲಿ ಕಡಿದರೂ ಬಗಲಲ್ಲಿ ಗಂಟು ಏಳುತ್ತದೆ ಕುತ್ತಿಗೆ ಯಿಂದ ತಲೆಯ ವರೆಗೆ ಎಲ್ಲಿ ಕಡಿದರೂ ಕುತ್ತಿಗೆಯ ಮೇಲೆ ಇಲ್ಲವೆ ಕಿವಿಯ ಹಿಂದೆ ಕರ್ಣಮೂಲದ ಸ್ಥಳದಲ್ಲಿ ಆ ಗಂಟು ಏಳುತ್ತದೆ; ಹೀಗೆ ಆ ಗಂಟಿನ ಕ್ರಮ ವಿದ್ದರೂ ಒಮ್ಮೊಮ್ಮೆ ಕೈಗೆ ಇಲ್ಲವೆ ಕಾಲಿಗೆ ಸಹ ಗಂಟೇಳುವದನ್ನು ನೋಡ ಬಹುದು. ಇದಕ್ಕೆ ಕಾರಣವೇನಂದರೆ ನಡುವೆ ಎಲ್ಲಿಯಾದರೂ ಯಾವುದೊಂದು ರಕ್ತವಾಹಿನಿಗೆ ಚಿಕ್ಕಾಟವು ಕಡಿದು ಮುಂದೆ ಹೋಗುವ ರಕ್ತವನ್ನು ವಿಷಜಂತು ಗಳು ತಡೆಯುವದರಿಂದ ಅಲ್ಲಿ ಗಂಟು ಏಳುವದು ಹಸುಗೂಸುಗಳಿಗೆ ಪ್ಲೇಗ ರೋಗವು ಕ್ವಚಿತ್ತಾಗಿಯೇ ಬರುತ್ತಿರುತ್ತದೆ.

## ಸ್ಥಳಾಂತರ ಮಾಡುವದೂ, ಪ್ಲೇಗಿನ ಬಗ್ಗೆ ಎಚ್ಚರದಿಡುವದೂ.

"ಮ್ರಿಯಂತೇ ಮೂಷಕಾ ಯತ್ರ, ನಿವಸೇತ್ತತ್ರ ನ ಕ್ಷಣಂ"

(ನೃಸಿಂಹಪುರಾಣ)

ಮೇಲಿನ ಉಕ್ತಿಯಿಂದ ಸ್ಪಷ್ಟವಾಗುವದೇನಂದರೆ, ಇಲಿಗಳು ಅಭಿವೃದ್ಧಿ ಯಾಗಿ ಸಾಯಹತ್ತಿದ ಕೂಡಲೆ ಆ ಸ್ಥಳವನ್ನು ಬಿಟ್ಟು ದೂರ ಸ್ವಚ್ಛವಾದ ವಾತಾ ವರಣದಲ್ಲಿ ಹೋಗಿರಬೇಕು ಪ್ಲೇಗಿನ ಪಿಡುಗಿನಲ್ಲಿ ಸ್ಥಳಾಂತರ ಮಾಡತಕ್ಕ ವರು ಕೆಳಗಿನ ಸೂಚನೆಗಳನ್ನು ಮನದಟ್ಟಾಗಿ ಮಾಡಿಕೊಳ್ಳತಕ್ಕದ್ದು.

(೧) ಸ್ಥಳಾಂತರ ಮಾಡುವಾಗ ಇಲಿಯ ಉಪಸರ್ಗವಾಗದಂತೆ ಎಚ್ಚರ ಪಡಬೇಕು.

(೨) ಇಲಿ ಸತ್ತ ಸ್ಥಳವು ದೂಷಿತವೆಂದು ತಿಳಿದು ಅದನ್ನು ಕೂಡಲೆ ಬಿಡಬೇಕು.

(೩) ಇಲಿಗಳ ಮೈಮೇಲಿನ ಚಿಕ್ಕಾಟಗಳು ರೋಗಪ್ರಸಾರಕ ಹಾಗು ರೋಗವಾಹಕರಗಳೆಂದು ತಿಳಿದು ಅವುಗಳಿಂದ ಬಾಧೆಪಟ್ಟದಂತೆ ನೋಡಿಕೊಳ್ಳ ತಕ್ಕದ್ದು.

(೪) ಚಿಕ್ಕಾಟಗಳೂ, ಪ್ಲೇಗಜಂತುಗಳೂ ಉಷ್ಣತೆಯಿಂದ ಸಾಯುತ್ತವೆ. ಆದ್ದರಿಂದ ಹಾಸಿಗೆ-ಹುಪ್ಪಡಿಗಳನ್ನು ದಿನಾಲು ಬಿಸಿಲಲ್ಲಿ ಹಾಕಬೇಕು; ಇಲ್ಲವೆ ಬೆಂಕಿಯು ಜಳದಲ್ಲಿ ಕಾಸಬೇಕು.

(೫) ದೂಷಿತ ಸ್ಥಳಗಳೊಡನೆ ಸಂಬಂಧವಿಡಕೂಡದು; ಹಾಗು ರಾತ್ರಿ ಅಂಥಲ್ಲಿ ಮಲಗಬಾರದು. ಇಷ್ಟೇ ಅಲ್ಲ; ಅಲ್ಲಿ ಕ್ಷಣ ಸಹ ಇರಬಾರದು.

(೬) ಸ್ಥಳಾಂತರ ಮಾಡಿದ ಬಳಿಕ ಪುನಃ ಪುನಃ ದೂಷಿತ ಮನೆಗಳಿಗೆ ಬರಬಾರದು; ಹಾಗು ಅಲ್ಲಿ ವಹಿವಾಟ ಮಾಡಬಾರದು.

(೭) ದೂಷಿತ ಸ್ಥಳದಲ್ಲಿದ್ದವನಿಗೆ ತಮ್ಮ ಹತ್ತರ ಬರಗೊಡಬಾರದು; ಮತ್ತು ಆತನೊಡನೆ ಶಕ್ಯವಿದ್ದಷ್ಟು ಸಂಬಂಧವಿಡಬಾರದು.

(೮) ಮನೆಯೊಳಗೆ ಇಲಿಗಳು ಬೀಳಹತ್ತಿದೊಡನೆಯೇ ಮುಂದೆ ಹೇಳಿದ ಧೂಪಗಳಲ್ಲಿ ಯಾವದೊಂದನ್ನು ನಿಯಮಿತವಾಗಿ ಹಾಕಬೇಕು.

(೯) ಅಂಟವಾಳಕಾಯಿ ಹಾಕಿದ ನೀರಲ್ಲಿ, ಸೌಳಿನ ನೀರಲ್ಲಿ, ರಸಕರ್ಪೂರ ಮಿಶ್ರಿತ ನೀರಲ್ಲಿ ಇಲ್ಲವೆ ತುಕ್ಕೆ ಬೇಸಿದ ನೀರಲ್ಲಿ ಅರಿವೆಗಳನ್ನು ನೆಳೆಯುಬೇಕು; ಇಲ್ಲವೆ ಸಾದಾ ನೀರಲ್ಲಿ ೨ ಕುದಿ ಬರುವ ವರೆಗೆ ಅರಿವೆಗಳನ್ನು ಕುಚ್ಚಿ, ಬಳಿಕ ಜಳಜಳ ನೆಳೆದು ಬಿಸಿಲಲ್ಲಿ ಒಣಗಿಸತಕ್ಕದ್ದು.

(೧೦) ನೀರಿಗೆ ಒಂದು ಕುದಿಕೊಟ್ಟು ತಾಂಬ್ರದ ಪಾತ್ರೆಯಲ್ಲಿ ಹಾಕಿ ಆರಿಸಿ ಕುಡಿಯತಕ್ಕದ್ದು.

(೧೧) ಪ್ಲೇಗಿನ ಪಿಡುಗಿನ ದಿನದಲ್ಲಿ ಅಜೀರ್ಣವಾಗುವಂಥಹ ಅನ್ನವನ್ನು ಉಣಕೂಡದು; ಮತ್ತು ಯಾವ ಕಾರಣಗಳಿಂದ ಇತರ ಜ್ವರಗಳು ಬರುವವೋ ಆಯಾ ಕಾರಣಗಳನ್ನುಂಟುಮಾಡಿಕೊಳ್ಳಬಾರದು.

## ಹವೆಯನ್ನು ಶುದ್ಧಗೊಳಿಸುವ ಧೂಪಗಳು.

ಊರೊಳಗೆ ಪ್ಲೇಗಿನ ಪಿಡುಗಿದ್ದಾಗ ತಮ್ಮ ಮನೆಯಲ್ಲಿ ಇಲಿ ಬೀಳಲಿ-ಬೀಳದಿರಲಿ ದಿನಾಲು ಬೆಳಗ್ಗೆ ಕೆಳಗೆ ಬರೆದ ಧೂಪಗಳಲ್ಲಿ ಯಾವುದೊಂದು ಧೂಪವನ್ನು ಬೆಳಗು-ಸಾಯಂಕಾಲಗಳಲ್ಲಿ ಸುಡಲಿಕ್ಕೆ ತಪ್ಪಬಾರದು.

(೧) ಬೇವಿನ ಒಣಗಿದ ನೊಪ್ಪನ್ನು ಮನೆಯಲ್ಲಿ ಸುಡತಕ್ಕದ್ದು.

(೩) ಗುಗ್ಗುಳ, ರಾಳ, ಚಂದನ, ಲೋಭಾನಗಳಿಗೆ ತುಪ್ಪದ ವಾಸನೆ ಹಚ್ಚಿ ಸುಡಬೇಕು.

(೪) ಗಂಧಕ ಇಲ್ಲವೆ ಚಂದ್ರಜ್ಯೋತಿಯು ಕಡ್ಡಿಗಳನ್ನು ಮನೆಯಲ್ಲಿ ಸುಟ್ಟು ಕಿಟಕಿ-ಬಾಗಿಲುಗಳನ್ನು ಇಕ್ಕಿ ಆ ಹೊಗೆ ಹೊರಗೆ ಹೋಗದಂತೆ ಮಾಡಬೇಕು.

(೫) ಬೇವು, ರಾಳ, ಬೆಲ್ಲ, ಬಿಳೇಸಾಸುವೆ, ಗುಗ್ಗುಳ, ಚಂದನಗಳ ಧೂಪ ಸುಡಬೇಕು.

(೬) ಜ್ವರದೊಳಗೆ ಹಾಗು ವಿಷಮಜ್ವರದೊಳಗೆ ಹೇಳಿದ ಅನೇಕ ಧೂಪಗಳಲ್ಲಿ ಅನುಕೂಲವಾದವುಗಳ ಉಪಯೋಗ ಮಾಡಬೇಕು.

(೭) ಯಾರಿಗೆ ಅನಾನುಕೂಲತೆಯು ಮೂಲಕ ಹಾಗು ದಾರಿದ್ರ್ಯದ ಮೂಲಕ ಸ್ಥಳಾಂತರ ಮಾಡುವದು ಶಕ್ಯವಿಲ್ಲವೋ, ಅವರು ಮೇಲಿನ ಧೂಪಗಳನ್ನು ಹಾಕುತ್ತ ತಮ್ಮ ಮನೆಯಲ್ಲೇ ಇರಬೇಕು; ಊರೊಳಗಿನ ಇತರ ದೂಷಿತ ಮನೆಗಳಿಗೆ ಹೋಗದಂತೆ ಎಚ್ಚರಪಡಬೇಕು.

## ಪ್ಲೇಗಜ್ವರದ ಲಕ್ಷಣಗಳು.

ಸನ್ನಿಪಾತ ಜ್ವರದಂತೆಯೇ ಈ ಜ್ವರದಲ್ಲಿಯೂ ರೋಗಿಯ ನಾಡಿಯು ಅಸ್ಥಿರ ಹಾಗು ತೀವ್ರವಾಗಿರುತ್ತದೆ. ೧೦೩ರಿಂದ ೧೦೫ ಡಿಗ್ರಿಗಳ ವರೆಗೆ ಜ್ವರ ವಿರುತ್ತವೆ. ಒಮ್ಮೊಮ್ಮೆ ಅದಕ್ಕೂ ಹೆಚ್ಚು ಇರುತ್ತವೆ. ಮನಸ್ಸು ಹಾಗು ಚಿತ್ತಗಳು ಚಂಚಲವಾಗಿರುತ್ತವೆ. ಸ್ವಾಸ್ಥ್ಯವೆನಿಸುವದಿಲ್ಲ. ವಾಂತಿ ಇಲ್ಲವೆ ಜುಲಾಬುಗಳಾಗುತ್ತಿರುತ್ತವೆ. ಹಾಗು ಕೆಲಕೆಲವರಿಗೆ ಇವೆರಡೂ ಆಗುವದಿಲ್ಲ. ಮುಖಮುದ್ರೆಯು ತೇಜೋಹೀನವಾಗಿ ಕಪ್ಪಿಡುತ್ತದೆ. ತ್ರಿದೋಷಗಳಾಗುವದರ ಕಡೆಗೇ ಪ್ರಕೃತಿಯು ಎಳೆಯುತ್ತಿರುತ್ತದೆ. ಬಡಬಡಿಸುವದು, ಆಗಾಗ್ಗೆ ಎದ್ದೆದ್ದು ಹಂಡಾಡುವದು; ಕೆಲಕೆಲವರು ಬರೇ ಗುಂಗಿನಲ್ಲಿಯೇ ಬಿದ್ದುಕೊಳ್ಳುವರು. ಕಣ್ಣು ಕೆಂಪಾಗುತ್ತವೆ. ತಲೆಶೂಲಿ ಏಳುತ್ತದೆ. ಹೀಗೆ ಕೆಲವರಿಗೆ ಹೆಚ್ಚು, ಕೆಲವರಿಗೆ ಕಡಿಮೆ ಉಪದ್ರವಗಳಾಗುತ್ತವೆ. ನಾಲಿಗೆಯು ಹೊಲಸು ಪರಿಬಂದಂತೆಯೂ, ಬೆಳ್ಳಗೂ, ಕೆಂಪಗೂ ಆಗಿ ಅದರ ಮೇಲೆ ಒಕ್ಕೆಗಳೇಳುತ್ತವೆ. ತುಟಿ ಕಪ್ಪಾಗುತ್ತವೆ. ಕೈಕಾಲ ಬೆರಳುಗಳೂ, ಉಗುರುಗಳೂ ಕಪ್ಪಾಗುತ್ತವೆ. ಈ ಜ್ವರದಲ್ಲಿ ಬಹು ಬೇಗ ಶಕ್ತಿಪಾತವಾಗುತ್ತದೆ. ಆದ್ದರಿಂದ ರೋಗಿಯನ್ನು ಕೊಂಚವೂ ಅಗಳಾಡಗೊಡಬಾರದು. ಅತ್ಯಲ್ಪ ಅಗಳಾಡುವದರಿಂದಲೂ ಶಕ್ತಿಪಾತವಾಗುತ್ತದೆ. ಶಕ್ತಿಪಾತವಾಗದಂತಹ ಉಪಾಯಗಳನ್ನು ಮಾಡಬೇಕು. ಈ ಪ್ಲೇಗುಬೇನೆಗೆ ಗ್ರಾಂಥಿಕಸನ್ನಿಪಾತ ಇಲ್ಲವೆ ಔಪಸರ್ಗಿಕ

ಸನ್ನಿಪಾತವೆಂಬಲೂ ಅನ್ನುತ್ತಾರೆ. ಈ ಬೇನೆಯ ಲಕ್ಷಣಗಳೆಲ್ಲ ಭೂಗ್ನೇತ್ರ ಸನ್ನಿಪಾತದಂತೆ ಇರುತ್ತವೆ. ಜ್ವರ ಸತತವಾಗಿರುತ್ತವೆ, ಬೆವರು ಬರುವದಿಲ್ಲ, ನಿದ್ರೆ ಹತ್ತುವದಿಲ್ಲ, ಮೈ ಮೇಲೆ ಸಂಪೂರ್ಣ ಎಚ್ಚರವಿರುವದಿಲ್ಲ; ಇಲ್ಲವೆ ಅಲ್ಪ ಸ್ವಲ್ಪ ಎಚ್ಚರವಿರುತ್ತದೆ. ಈ ಎಲ್ಲ ಲಕ್ಷಣಗಳು ಯಾರಿಗೆ ಆಗುವವೋ ಅವರು ಬದುಕುವದು ಕಷ್ಟವು. ಈ ಬೇನೆಯಲ್ಲಿ ಬೇಗನೆ ಶಕ್ತಿಪಾತವಾಗಲಿಕ್ಕೆ ರುಧಿರಾಭಿಸರಣದಮೂಲಕ ಕೃಮಿಜನ್ಯ ವಿಷವು ಹೃದಯಕ್ಕೆ ತಗಲುವದೇ ಕಾರಣವಾಗಿದೆ; ಅದರಿಂದ ಹೃದಯವು ತೀರ ನಿರ್ಬಲವಾಗುತ್ತದೆ. ಉಳಿದ ಕಡೆಯ ಪ್ಲೇಗಿನ ಗಂಟುಗಳಿಗಿಂತ ಬಗಲೊಳಗಿನ ಹಾಗು ಕಿವಿಯ ಹಿಂದಿನ ಗಂಟುಗಳು ತೀವ್ರ ಘಾತುಕಗಳಾಗುತ್ತವೆ.

## ಈ ಬಗ್ಗೆ ವಿಶೇಷ ಮಾಹಿತಿಯೂ ಲಕ್ಷಣಗಳೂ.

ಪ್ಲೇಗಿನಲ್ಲಿ ಮುಖ್ಯವಾದ ೪ ಜಾತಿಗಳಿವೆ ೧ ಗಂಟುಯುಕ್ತವಾದದ್ದು. (ಈ ಜಾತಿಯ ರೋಗಿಗಳೇ ಬಹಳ) ೨ ಗಂಟು ಇಲ್ಲದ್ದು. (ಈ ಬೇನೆಯಲ್ಲಿ ರೋಗಿಯು ಕೂಡಲೆ ಎಚ್ಚರದಪ್ಪಿ ಬಹಳಮಾಡಿ ಬದುಕುವದಿಲ್ಲ) ೩ ಫುಪ್ಫುಸ ದಾಹವುಳ್ಳದ್ದು. ೪ ಕರುಳಿನ ವಿಕಾರವುಳ್ಳದ್ದು; ಅಂದರೆ ಆಮಾಂಶ ಇಲ್ಲವೆ ಜುಲಾಬು ಆಗುವದು. (ಈ ಜಾತಿಯ ರೋಗಿಗಳ ಸಂಖ್ಯೆಯು ಅತ್ಯಲ್ಪವು.) ಪ್ಲೇಗಿನ ಗಂಟುಗಳು ಎಷ್ಟೋ ಜನರಿಗೆ ಏಳುತ್ತವೆ; ಎಷ್ಟೋ ಜನರಿಗೆ ಏಳುವದಿಲ್ಲ; ಆದರೆ ಆ ರೋಗವಾದ ರೋಗಿಯ ನಾಲಿಗೆಯು ಮಾತ್ರ ಬೆಳ್ಳಗಾಗುತ್ತದೆ. ಕೆಲವು ಕೃಮಿಜನ್ಯ ರೋಗಗಳ ಜಂತುಗಳು ರೋಗಿಯ ಶರೀರದಲ್ಲಿರದೆ, ಭೂಮಿ ಇಲ್ಲವೆ ನೀರಲ್ಲಿ ಅವುಗಳ ಉತ್ಪತ್ತಿ ವೃದ್ಧಿಗಳಾಗುವವು. ಅವು ಅರಿವೆ ಅಂಚಡಿಗಳೊಡನೆ ಇಲ್ಲವೆ ಯಾವುದೊಂದು ಸಜೀವ ಇಲ್ಲವೆ ನಿರ್ಜೀವ ಜಂಗಮ ಪದಾರ್ಥಗಳೊಡನೆ ಸ್ಥಳಾಂತರ ಮಾಡುವವು ಆ ಹೊಸ ಸ್ಥಳವು ಅದಕ್ಕೆ ಸರಿ ಹೋದರೆ ಅವು ಅಲ್ಲಿ ಪ್ರಮಾಣವಿರಹಿತವಾಗಿ ಬೆಳೆಯುವವು. ಒಮ್ಮೆ ಹೀಗೆ ಅವುಗಳ ಪ್ರಸಾರವಾಯಿತೆಂದರೆ ಬಳಿಕ ಅವು ಯಾವ ಮಾನವೀ ಪ್ರಯತ್ನಗಳಿಂದಲೂ ಸಮೂಲ ನಾಶವಾಗುವದಿಲ್ಲ ಸೃಷ್ಟಿಯಲ್ಲಿ ಇಂಥ ಕೆಲ ವಿಚಿತ್ರ ರೋಗಗಳದ್ದು, ಅವುಗಳನ್ನು ನಿರ್ಲಕ್ಷಿಸುವದು ಮಾನವೀ ಪ್ರಯತ್ನಕ್ಕೆ ಮೀರಿದ ಸಂಗತಿಯಾಗಿರುತ್ತದೆ; ಆದರೂ ಕೂಡ ಮೈಲೀ ಚುಚ್ಚಿ ಮೈಲಿಗಳನ್ನು ಹುಚ್ಚನಾಯಿಯ ಕಡತಕ್ಕೆ ಇಂಜೆಕ್ಶನ್ ಮಾಡಿ ಅದರ ವಿಷವನ್ನು ತೆಗೆದುಹಾಕುವದು ಪಾಶ್ಚಾತ್ಯರ ಪದ್ಧತಿಯಿಂದ ಶಕ್ಯವಾಗಿರುತ್ತದೆ; ಮತ್ತು ಇದರಂತೆಯೇ ಪ್ಲೇಗಿನ ರೋಗಕ್ಕೆ ಪ್ಲೇಗಿನ ಲಸಿಗೆ ಚುಚ್ಚಿ ಅದರ ವಿಷ ಕಡಿಮೆ ಮಾಡುವದೂ ಶಕ್ಯವಾಗಿದೆ; ಆದರೆ ಪ್ಲೇಗಿನ ಪಿಡುಗು ಉಂಟಾಗದಂತೆ ಮಾಡುವದು ಅಶಕ್ಯವಾಗಿದೆ. ಗಂಟು

ದೇನೆಗೆ ಎಲ್ಲ ಋತುಗಳಲ್ಲಿ ಎಲ್ಲ ಬಗೆಯ ಹವೆಯೂ ತಕ್ಕದ್ದಾಗಿದೆ; ಅದು ಕಾರಣ ವಿಲ್ಲದಲೆ(ತನ್ನಷ್ಟಕ್ಕೆ ತಾನೇ) ಬಂದಾಗುತ್ತದೆ. ಇದರಂತೆ ಜಿಟ್ಟೆಗಳೂ, ಇಲಿಗಳೂ ಇಂಥ ಇನ್ನೂ ಅನೇಕ ಪ್ರಾಣಿಗಳ ಸೃಷ್ಟಿ ಸ್ಥಿತಿ ಲಯಗಳಾದರೂ ಮಾನವನ ಶಕ್ತಿಗೆ ಮೀರಿದ ಮಾತಾಗಿರುತ್ತವೆ. ಈಶ್ವರೀ ಸಂಕೇತದಂತೆ ಅಲ್ಪ ಪ್ರತಿಕೂಲತೆಯುಂಟಾದರೂ ಅವು ಒಮ್ಮೆಲೆ ಹೇಳ ಹೆಸರಿಲ್ಲದಂತೆ ನಾಶವಾಗುತ್ತವೆ; ಆದರೆ ಮಾನವರು ಅವುಗಳ ನಾಶದ ಬಗ್ಗೆ ಉಪಾಯ ಮಾಡಕೂಡದೆಂದು ತಿಳಿಯುದಾರದು. ಪ್ರಯತ್ನ ಮಾಡುವದು ಮನುಷ್ಯನ ಇತಿ ಕರ್ತವ್ಯವೇ ಆಗಿರುತ್ತದೆ.

ಪ್ಲೇಗ, ಇನ್‌ಫ್ಲ್ಯೂಎಂಝಾ, ಮಲೇರಿಯಾ, ದುರ್ಜಲಜನಿತಜ್ವರ ಇವೆಲ್ಲವುಗಳಿಗೆ ಒಳ್ಳೇ ಖಾತ್ರಿಯ ಔಷಧವೆಂದರೆ ಬೇವು.

## ಬೇವಿನ ಹೆಸರುಗಳು.

ಸಂಸ್ಕೃತದಲ್ಲಿ ಬೇವಿಗೆ:—ನಿಂಬ, ಪಾರಿಭದ್ರ, ಕಲ್ಪವೃಕ್ಷ, ಅಮೃತರು ಎಂದೆನ್ನುವರು. ಮರಾಠಿಯಲ್ಲಿ:-ಕಡೂನಿಂಬ, ಬಾಳಂತಲಿಂಬ, ಲಿಂಬ, ಪಾಡವ್ಯಾಚಾಲಿಂಬ, ಬಾಳಲಿಂಬ ಎಂದೂ; ಗುಜರಾಥಿಯಲ್ಲಿ:—ಲಿಂಬಡಾ ಎಂದೂ; ಹಿಂದುಸ್ತಾನಿಯಲ್ಲಿ:—ನಿಂಬ, ನೀಂಬಗಳೆಂದೂ; ಕನ್ನಡದಲ್ಲಿ:-ಬೇವು, ಬಾಣಂತಿ ಬೇವು, ಬೇವಿನಮರವೆಂದೂ; ತೆಲಗಿನಲ್ಲಿ:—ಪೆಕು ವೆಂಪುಗಳೆಂದೂ; ತಮಿಳಿನಲ್ಲಿ:—ವೆಂಬು ಎಂದೂ; ಇಂಗ್ಲಿಷಿನಲ್ಲಿ:—ಮಾರ್ಗೊಸಾ ಟ್ರೀ (Margosa Tree) ಎಂದೂ ಹೆಸರುಗಳಿರುತ್ತವೆ.

## ಬೇವಿನ ಗುಣಧರ್ಮಗಳು.

ಬೇವಿನ ಗಿಡದ ಗುಣಧರ್ಮದ ಮೂಲ ಸಂಸ್ಕೃತ ಶ್ಲೋಕಗಳನ್ನು ನೋಡಬೇಕಾದರೆ, ರಾಜನಿಘಂಟ, ಮದನಪಾಲನಿಘಂಟ, ನಿಘಂಟರತ್ನಾಕರ ಗ್ರಂಥಗಳನ್ನು ಪರಿಶೀಲಿಸಬೇಕಾಗುವದು.

"ನಿಂಬಪಂಚಕ"ವೆಂದರೆ ಬೇವಿನಗಿಡದ ಪಂಚಾಂಗಗಳು:—ಪಿತ್ತ, ರಕ್ತದೋಷ, ಒಣತುರಿ, ದಾಹ, ಕುಷ್ಟ, ವ್ರಣ ಮುಂತಾದವುಗಳ ನಾಶವು ಅದರಿಂದಾಗುತ್ತದೆ. ತೊಗಟೆ ಹಾಗು ಬೇರಿನ ತೊಗಟೆಗಳು ಶೀತಲ, ಕಹಿ, ಲಘು, ಗ್ರಾಹಕ, ಖಾರ, ಅಗ್ನಿಮಾಂದ್ಯಕರ, ಜಾವನ್ನು ಹಣ್ಣುಮಾಡತಕ್ಕಂಥವು, ವ್ರಣಶೋಧಕ, ಚಿಕ್ಕಬಾಲಕರಿಗೆ ಹಿತಕರ, ಅಹೃದ್ಯಗಳಾಗಿರುತ್ತವೆ; ಮತ್ತು ಕೃಮಿ, ಕಫ, ವ್ರಣ, ವಾಂತಿ, ಬಾವು, ವಿಷ, ಪಿತ್ತ, ಹೃದಯದಾಹ, ವಾಯು, ಕುಷ್ಟ, ಶ್ರಮ ತೃಷಾ, ಕೆಮ್ಮು, ಜ್ವರ, ಅರುಚಿ, ಮೇಹ, ರಕ್ತದೋಷ ಇವು

ಗಳ ನಾಶಕವಾಗಿರುತ್ತವೆ. ಎಳೇ ಎಲೆಗಳು:-ಗ್ರಾಹಕ, ವಾತಜನಕಗಳಾಗಿದ್ದು, ರಕ್ತಪಿತ್ಥ, ಕುಷ್ಟ, ನೇತ್ರರೋಗಗಳನ್ನು ನಾಶಪಡಿಸುವಂಥವಾಗಿವೆ. ಬಲಿತ ಎಲೆಗಳು, ಪ್ರಾಮುಖ್ಯವಾಗಿ ವ್ರಣನಾಶಕಗಳಾಗಿವೆ. ಎಲೆಗಳ ಕಡ್ಡಿಗಳು:— ಕೆಮ್ಮು, ಉಬ್ಬಸ, ಗುಲ್ಮ, ಅರ್ಶ, ಕ್ರಿಮಿ, ಮೇಹಗಳ ನಾಶಮಾಡುತ್ತವೆ. ಎಳೇಕಾಯಿಗಳು:-ಭೇದಕ, ಸ್ನಿಗ್ಧ, ಉಷ್ಣ, ಲಘುಗಳಾಗಿದ್ದು, ಮೇಹ ಹಾಗು ಕುಷ್ಟಗಳನ್ನು ನಾಶಪಡಿಸುತ್ತವೆ ಬೇವಿನ ಹಣ್ಣುಗಳು:—ಮಧುರ, ಕಹಿ, ಸ್ನಿಗ್ಧ, ಒಗರು, ಪಿತ್ಥಕರಗಳಾಗಿದ್ದು, ನೇತ್ರರೋಗ, ಕಫರೋಗ, ಕ್ಷತಕ್ಷಯ, ರಕ್ತ ಪಿತ್ಥಗಳನ್ನು ನಾಶಮಾಡುತ್ತವೆ. ಬೇವಿನ ಬೀಜದ ತಿಳುಲು:—ಕ್ರಿಮಿ ಕುಷ್ಟಗಳನ್ನು ನಾಶಪಡಿಸುತ್ತದೆ. ಈ ಪ್ರಕಾರವಾಗಿ ಬೇವಿನ ಮರದ ಗುಣ ಧರ್ಮಗಳಾಗಿದ್ದು ಇದರ ಪಂಚಾಂಗಗಳು ಇಲ್ಲವೆ ಕೆಲವಂಗಗಳು ಎಲ್ಲ ದೂಷಿತ ಜ್ವರಗಳಲ್ಲಿ ಬೇರೆ ಬೇರೆ ವಿಧವಾಗಿ ಉಪಯೋಗಿಸುವದುಂಟು. ಅಲ್ಲದೆ ಉಳಿದ ರೋಗಗಳಿಗೆ ಅವುಗಳ ಉಪಯೋಗವು ಹೇಗಾಗುವದೆಂಬದನ್ನು ಚಿ ಪ್ರ. ದೊಳ ಗಿನ ಆಯಾ ರೋಗಗಳ ಪ್ರಕರಣಗಳಲ್ಲಿ ಕಾಣಬಹುದು. ಒಟ್ಟಿನ ಮೇಲೆ ಈ ಬೇವಿನಮರಕ್ಕೆ ಕಲ್ಪವೃಕ್ಷವೆಂದು ಆರ್ಯ ಚಿಕಿತ್ಸಕರು ಕೊಟ್ಟ ಉಪಮೆಯು ಯೋಗ್ಯವಾಗಿರುತ್ತದೆ. ನಾನು ಈ ಬೇವಿನ ಪಂಚಾಂಗಗಳನ್ನು ಪ್ಲೇಗ ರೋ-ಗಕ್ಕೂ ಇತರ ಬೇನೆಗಳಿಗೂ ಉಪಯೋಗಿಸಿ ಕಲ್ಪನಾತೀತ ಯಶ ಹೊಂದಿರು ತ್ತೇನೆ. ಆದುದರಿಂದ ಎಲ್ಲ ಆರ್ಯ ವೈದ್ಯರೂ, ಡಾಕ್ಟರ,-ಹಕೀಮರೂ ಇದರ ಉಪಯೋಗನನ್ನು ಅವಶ್ಯವಾಗಿ ಮಾಡಬೇಕೆಂದು ನನ್ನ ಆಗ್ರಹದ ವಿನಂತಿ ಯಿರುತ್ತದೆ. ಈ ಉಪಾಯದಿಂದ ಪ್ಲೇಗಿನ ರಸಿಗೆ ಚುಚ್ಚೋಣ, ಇಲಿ ಕೊಲ್ಲೋಣ ಮುಂತಾದ ಖಟಾಟೋಪದ ಕಾರಣವೇ ಉಳಿಯಲಾರದು.

## ಸಾಧ್ಯಾಸಾಧ್ಯ ವಿಚಾರ.

ಪ್ಲೇಗು ಬರುವದೆಂದರ ಯಮನ ನಿಮಂತ್ರಣವೇ ಬಂದಿತೆಂಬದು ನಿಜ ವಿದ್ದರೂ, ಈ ಪಿಡುಗಿನಿಂದಲೂ ೧೦೦ಕ್ಕೆ ೨೫-೩೦ ಜನರು ಉಳಿದದ್ದನ್ನು ಕಾಣಬಹುದು. ಪ್ಲೇಗಿನ ವಿಷವು ಪಿಡುಗಿನ ದಿನಗಳಲ್ಲಿ ಎಷ್ಟು ತೀಕ್ಷ್ಣವಾಗಿರು ಪದೋ, ಅಷ್ಟು ತೀಕ್ಷ್ಣತೆಯು ಮುಂದೆ ಅದರಲ್ಲಿ ಉಳಿಯುವದಿಲ್ಲ; ಬಹು ಮಟ್ಟಿಗೆ ಕಡಿಮೆಯಾಗುತ್ತದೆ; ಅದರಿಂದ ಗಂಟುಬೇನೆಯು ಹಾವಳಿಯು ಅಡಗು ವದು; ಹಾಗು ಕೆಲ ಕೆಲವು ರೋಗಿಗಳೂ ಬದುಕಹತ್ತುತ್ತಾರೆ. ಯಾರ ಗಂಟು ಬೇಗನೆ ದೊಡ್ಡದಾಗಿ ಒಡೆಯುವದೋ, ಅವರು ಬಹುಶಃ ಬದುಕುತ್ತಾರೆ. ಸಣ್ಣ ಗಂಟು ಎದ್ದವರೂ, ಗಂಟೇ ಏಳದವರೂ ಬೇಗ ಸಾಯುತ್ತಾರೆ. ಪ್ಲೇಗ ದಲ್ಲಿ ಘುಪ್ಪುಸದಾಹವಾದರೆ ಬದುಕುವದೇ ಇಲ್ಲ. ಉಳಿದ ಸ್ಥಳಗ ಗಂಟುಗಳಿ

ಗಿಂತ ತೊಡೆಸಂದಿಯೊಳಗಿನ ಗಂಟಿನ ರೋಗಿಗಳು ಬದುಕುವ ಪ್ರಕಾರವು ಹೆಚ್ಚಾಗಿರುತ್ತದೆ. ಗಂಟು ಎದ್ದವನೂ, ತೀರ ದೊಡ್ಡ ಗಂಟಾದವನೂ ಬದುಕುವ ಕಾರಣವೇನಂದರೆ:-ಪ್ಲೇಗಿನ ಜಂತುಗಳು ಗಂಟಿನಲ್ಲಿ ಒಟ್ಟುಗೂಡುತ್ತವೆ. ಆ ಗಂಟಿಗೆ ಯೋಗ್ಯ ಉಪಚಾರ ಮಾಡಿದರೆ, ಅವುಗಳ ನಾಶವಾಗಿ ಹೋಗುತ್ತದೆ. ಅದರಿಂದ ಮೈಯೊಳಗಿನ ವಿಷದ ಪ್ರಮಾಣವು ಕಡಿಮೆಯಾಗುವದು. ಗಂಟಿನಲ್ಲಿ ಕೀವಾದರೆ ಆ ಕೀವಿನೊಳಗಿನ ಕ್ರಿಮಿಗಳು ಪ್ಲೇಗಿನ ಜಂತುಗಳನ್ನು ತಿಂದು ಬಿಡುತ್ತವೆ. ಅಂತೇ ಆ ಕೀವಿನೊಳಗೆ ಪ್ಲೇಗಿನ ಜಂತುಗಳು ಕಾಣುವದಿಲ್ಲ. ಆದುದರಿಂದ ಗಂಟಾಗಿ ಒಡೆಯುವದು ಸುಲಕ್ಷಣವಾಗಿದೆ; ಗಂಟಾಗದಿರುವದು ಅವಲಕ್ಷಣವೆಂದು ಅನುಭವದಿಂದ ಗೊತ್ತಾಗಿದೆ.

## ಪ್ಲೇಗಿಗೆ (ಗಂಟುಬೇನೆಗೆ) ಉಪಾಯಗಳು.

೧ ಪ್ಲೇಗುಬೇನೆಯಲ್ಲಿ ನರಚ್ಛೇದ ಮಾಡಿ ಎಂದೂ ರಕ್ತತೆಗೆಯಕೂಡದು. (ನರಕೊಯ್ದು ರಕ್ತತೆಗೆಯಬೇಕೆಂದು ಹಿಂದೊಮ್ಮೆ ಹೇಳಿದೆ. ಆದರೆ ಶಕ್ತಿಪಾತವಾಗುವ ಮತ್ತು ಲಕ್ಷಣವಿದ್ದರೆ, ರೋಗಿಯು ಅಶಕ್ತನಾಗಿದ್ದರೆ ರಕ್ತತೆಗೆಯಬಾರದು) ಶೀತಲ ಹಾಗು ಹೃದಯದ ಶಕ್ತಿಯನ್ನು ಸಂರಕ್ಷಿಸುವ ಉಪಾಯಗಳನ್ನು ಮಾಡಬೇಕು. ಚಂದನ, ಕರ್ಪೂರ, ಬಾಳದಬೇರು (ಯುನಾನಿ) ಮುಂತಾದವುಗಳನ್ನು ಗುಲಾಬದ ನೀರಲ್ಲಿ ತೆಯ್ದು ಗಂಟಿಗೆ ಹಚ್ಚತಕ್ಕದ್ದು. ತಂಪಾದ ಪಾನಕಗಳನ್ನು ಕುಡಿಸಬೇಕು. ಸಕ್ಕರೆಯೊಳಗೆ ಶೇಖರಿಸಿಟ್ಟ ಮಾಂಸವನ್ನು, ಚನ್ನಂಗಿ, ದುಂಡ ಗಡಲೆ, ಕೋಳೀಕತ್ತಿಯ ರಸಗಳನ್ನೂ, ಕಬ್ಬಿನ ಹಳಸಿದ ರಸದ ಪಾಕವನ್ನು ಹಾಕಿ ಕೊಡುವದು. ಗಂಟಿನಲ್ಲಿ ಕೀವಾದೊಡನೆ ಅದನ್ನು ಒಡೆದು ಕೀವು ತೆಗೆಯಬೇಕು. ಅದರ ಮೇಲೆ ಆಗಿಂದಾಗ ಚೆನ್ನಾಗಿ ಕಾಸಬೇಕು. (ಯುನಾನಿ)

೨ ಬೇವಿನತೊಗಟೆ ೨೫ ತೊಲಿ ಕುಟ್ಟಿ ೮೦ ತೊಲಿ ನೀರಲ್ಲಿ ಹಾಕಿ, ಅದರಲ್ಲಿ ೩ ತೊಲಿ ಮೆಣಸಿನ ಪುಡಿ ಇಲ್ಲವೆ ಕುರೇಸಾನೀ ಅಜ್ವಾನ ಕಾಲುತೊಲಿ ಹಾಕಿ ಅಷ್ಟಮಾಂಶ ಕಷಾಯಮಾಡಬೇಕು. ನಂತರ ಸೋಸಿ ಕಾಜಿನ ಸೀಸೆಯಲ್ಲಿ ಹಾಕಿ ಅದರಲ್ಲಿ ೨ ಗುಂಜಿಯಷ್ಟು ಕರೇಬೋಳದ ಪುಡಿಯನ್ನು ಹಾಕಿ ಸೀಸೆಯನ್ನು ಚೆನ್ನಾಗಿ ಅಗಳಾಡಿಸಿ ೨-೨॥ ತಾಸುಗಳ ಅಂತರದಿಂದ ಪ್ರತಿ ಸಾರೆ ೨ ತೊಲಿಯಂತೆ ೫ ಸಾರೆ ಆ ಕಷಾಯವನ್ನು ಕೊಡತಕ್ಕದ್ದು. ಸಣ್ಣವರಿಗೆ ವಯೋಮಾನದಂತೆ ಅರ್ಧ ಇಲ್ಲವೆ ಒಂದು ತೊಲಿ ಕಷಾಯ ಕೊಡಬೇಕು. ದಿವಸ ೩ ಇಲ್ಲವೆ ೫. ಪ್ಲೇಗು ಬೇನೆಯು ಖಂಡಿತವಾಗಿ ನಿವಾರಣವಾಗುತ್ತದೆ.

೩ ಬೇವಿನ ತೊಗಟೆಯ ಕಷಾಯದಲ್ಲಿ ಇಲ್ಲವೆ ನೆಕ್ಕಿನ ರಸದಲ್ಲಿ ರಾಜ ಚಂಡೇಶ್ವರ ಮಾತ್ರೆ, ತ್ರಿಭುವನಕೀರ್ತಿ, ಕಾಲಕೂಟ, ಮಹಾಜ್ವರಾಂಕುಶ, ವಿಶ್ವತಾಪಹರಣ ಈ ಮಾತ್ರೆಗಳಲ್ಲಿ ಯಾವುದೊಂದನ್ನು ೧ ಗುಂಜೆಯಷ್ಟು ತೆಯ್ದು ಕೊಟ್ಟರೆ ಚನ್ನಾಗಿ ಗುಣಪಡುತ್ತದೆ.

೪ ಬೇವಿನ ಪಂಚಾಂಗದ ಸತ್ವ ೩ ಗುಂಜಿ, ೧ ಗುಂಜಿ ಮೆಣಸಿನ ಪುಡಿ ಕೂಡಿಸಿ ಲಿಂಬೀಹಣ್ಣಿನ ಪಾನಕದಲ್ಲಿ ಇಲ್ಲವೆ ನೀರಲ್ಲಿ ಹಾಕಿ ಕೊಡಬೇಕು. ಈ ಸತ್ವವು ಉತ್ತಮವಾಗಿದ್ದು, ಜ್ವರಕ್ಕು, ಕ್ರಿಮಿಜನ್ಯ ವಿಷಗಳಿಗೂ ಗುಣಕಾರಿಯಾಗಿದೆ; ಮತ್ತು ಕ್ವಿನಾಯಿನದ ದೋಷವು ಈ ಸತ್ವದಲ್ಲಿರದ್ದರಿಂದ ಇದು ಎಲ್ಲ ಬಗೆಯಿಂದಲೂ ನಿರ್ದೋಷವಾಗಿದೆ.

೫ ಬೇವಿನ ಪಂಚಾಂಗ (ತೊಗಟೆ, ಎಲೆ, ಹೂವು, ಹಣ್ಣು, ಬೇರು) ೩ ತೊಲಿ, ೨೦ ಮೆಣಸಿನಕಾಳು, ಓಜ್ವಾನ, ದಾಳಿಂಬರ ತೊಗಟೆ, ಕುರೇಸಾನಿ ಅಜ್ವಾನ, ಹಪೀಜ, ಶುಂಠಿ, ಹಿಪ್ಪಲಿ ಕಾಲು ಕಾಲು ತೊಲಿ ಕೂಡಿಸಿ ೮೦ ತೊಲಿ ನೀರು ಹಾಕಿ ಅಷ್ಟಮಾಂಶ ಕಷಾಯ ಮಾಡಬೇಕು. ಪ್ರತಿಸಾರೆ ೨-೩ ತೊಲಿಯಂತೆ ೩ ತಾಸಿನ ಅಂತರದಿಂದ ಕೊಡುತ್ತಿರಬೇಕು ಅಥವಾ ಕಷಾಯ ಮಾಡದೆ, ಮೇಲಿನ ಔಷಧಿಗಳನ್ನು ಕಾಲು ತೊಲಿ ತೂಗಿ ಯಂತೆ ಚೂರ್ಣ ಮಾಡಿ, ಪ್ರತಿಸಾರೆ ಅರ್ಧ ತೊಲಿ ಚೂರ್ಣವನ್ನು ಜೇನತುಪ್ಪದೊಡನೆ ಇಲ್ಲವೆ ನೀರಿನೊಡನೆ ಕೊಡಬೇಕು. ಪಥ್ಯ:-- ಉಪ್ಪುಕಾರಗಳಿಲ್ಲದ ಅಕ್ಕಿಗಂಜಿ, ಮಜ್ಜಿಗೆ, ಕಾದಾರಿದ ನೀರು, ಭತ್ತದರಳಿನ ಕಾಟ ಇಲ್ಲವೆ ಗಂಜಿ. (ಈ ಔಷಧವು ಅನುಭವದಾಗಿರುತ್ತದೆ)

೬ ಧೂಪ.—ಬೇವಿನ ಒಣಗಿದ ಎಲೆ, ಗುಗ್ಗಳ, ರಾಳ, ಕೇರು ಇವನ್ನೆಲ್ಲ ಕೂಡಿಸಿ ಬಿಟ್ಟು ಅದರ ಧೂಪವನ್ನು ರೋಗಿಯ ಕೋಣೆಯಲ್ಲಿ ಸುಡಬೇಕು.

೭ ಟಿಂಚ್ಚರ ಆಯೋಡಿನ್ ಎಂಬ ವಿದೇಶೀ ಔಷಧವನ್ನು ೨-೩ ಹನಿಗಳಂತೆ ೨-೩ ತಾಸಿಗೊಮ್ಮೆ ಸಕ್ಕರೆ ನೀರೊಡನೆ ಕೊಡತಕ್ಕದ್ದು; ಹಾಗು ಅದನ್ನೇ ಗಂಟಿಗೂ ಹಚ್ಚುತ್ತಿರಬೇಕು. ಈ ಡಾಕ್ಟರೀ ಉಪಾಯವು ಶ್ರೇಷ್ಠವಾಗಿದೆ. ಇದರಿಂದಲೂ ರೋಗಿ ಬದುಕುವದು ಖಂಡಿತವು.

೮ ಪ್ಲೇಗಿನ ಹಾವಳಿಯ ದಿನಗಳಲ್ಲಿ ದಿನಾಲು ೧-೧॥ ತೊಲಿ ಬೇವಿನ ತೊಗಟೆಯ ರಸ ಇಲ್ಲವೆ ಕಷಾಯವನ್ನು ಕುಡಿಯುತ್ತಿರಬೇಕು. ಅಂದರೆ ಅವನಿಗೆ ಪ್ಲೇಗು ರೋಗವು ಬರುವದೇ ಇಲ್ಲ. ಬಂದರೂ ಸಾಯುವದಿಲ್ಲವೆಂಬುದನ್ನು ಸ್ವಂತದ ಅನುಭವದಿಂದ ಹೇಳುತ್ತೇನೆ. ವಾಚಕರು ಇದರ ಪ್ರತೀತಿಯನ್ನು ತಂದುಕೊಳ್ಳಬಹುದು. (ಸ್ವಂತದ ಅನುಭವ)

ಸೊಪ್ಪಿನ ರಸದಲ್ಲಿ ಅರೆದು ೪ ಗುಂಜಿತೂಕದ ಗುಳಿಗೆ ಕಟ್ಟಬೇಕು. ಪ್ರತಿಸಾರೆ ೧ ಗುಳಿಗೆಯನ್ನು ಕೊಡುವದು. ಇದರಿಂದ ಜ್ವರದ ವೇಗವು ಕುಂದುತ್ತದೆ.

(೧೬) ಮಾವಳ್ಳಿಯ ಗಿಡವನ್ನು ಬಡ್ಡಿ ಸಹಿತ ತಂದು ಅರೆದು ಉಂಡೆ ಮಾಡಿ ಯಾವ ಕಡೆಗೆ ಪ್ಲೇಗಿನ ಗಂಟು ಎದ್ದಿರುವದೋ ಆ ಕಡೆಯ ಕೈನಾಡಿಯ ಮೇಲೆ ಅದನ್ನಿಟ್ಟು ಅದರ ಮೇಲೆ ದೊಡ್ಡಬಿಲ್ಲೆಯನ್ನಿಟ್ಟು ಗಟ್ಟಿಯಾಗಿ ಅರಿವೆಯಿಂದ ಬಿಗಿಯಬೇಕು. ೨೪ ತಾಸುಗಳ ನಂತರ ಬಿಚ್ಚಬೇಕು. ಕಟ್ಟಿದ ಸ್ಥಳದಲ್ಲಿ ಗುಳ್ಳೆಯೇಳುವದು. ಅದನ್ನು ಸೂಜಿಯ ಮೊನೆಯಿಂದ ಚುಚ್ಚಿ ಒಡೆದರೆ ಒಳಗಿನಿಂದ ನೀರು ಹರಿಯುವದು. ಬಳಿಕ ಆ ಗಾಯಕ್ಕೆ ಹಳೇ ತುಪ್ಪ ಹಚ್ಚತಕ್ಕದ್ದು, ಗಂಟು ಕರಗಿ, ರೋಗಿಗೆ ಗುಣವಾಗುವದು. ಇದೊಂದು ಸುಲಭೋಪಾಯವಾಗಿರುತ್ತದೆ.

೧೭ ಹುಣಸೀಪಕ್ಕದಷ್ಟು ಚಲೋ ಕಲ್ಲುಸುಣ್ಣ. ಅಷ್ಟೇ ಚಲೋ ಹೆಸ್ರುಪ್ಪ ಇವುಗಳನ್ನು ಕೂಡಿಸಿ ಗುಳಿಗೆ ಕಟ್ಟಿ, ತಾಸಿಗೊಂದು ಗುಳಿಗೆಯಂತೆ ೪ ಗುಳಿಗೆಗಳನ್ನು ಕೊಡತಕ್ಕದ್ದು. ಜ್ವರದ ವೇಗವು ಹೆಚ್ಚಾಗಿದ್ದರೆ ಪ್ರತಿಸಾರೆ ೨-೪ ಗುಳಿಗೆ ಸಹ ಕೊಡಬಹುದು. ದಿವಸ ೪. ಗಂಟಿಗೆ ಕೇರ ಎಣ್ಣೆ ಹಚ್ಚುವದು. ಕೇರ ಎಣ್ಣೆ ತೆಗೆಯುವ ರೀತಿಯು:— ಕೇರುಗಳನ್ನು ಕೆಂಡದಲ್ಲಿ ಹಾಕಿ ಬೆಚ್ಚಗೆ ಮಾಡಿದ ಮೇಲೆ ಅವನ್ನು ಒಂದು ಕಬ್ಬಿಣಹಂಚಿನಲ್ಲಿ ಹಾಕಿ ಅದರ ಮೇಲೆ ಮತ್ತೊಂದು ಹಂಚನ್ನು ಅಂಗಾತಾಗಿಟ್ಟು ಕಸುವಿನಿಂದ ಒತ್ತತಕ್ಕದ್ದು. ಇಲ್ಲವೆ ಹಂಚಿನ ಮೇಲೆ ಕಾಲಿಟ್ಟು ನಿಂತು ಒತ್ತಬೇಕು; ಹಾಗು ಮೇಲಿನ ಆ ಹಂಚನ್ನು ಭಾರಸಹಿತ ತಿರುಗಿಸಬೇಕು. ಹೀಗೆ ಮಾಡಿ ಬಂದಂಥ ಎಣ್ಣೆಯನ್ನು ಸೀಸೆ ತುಂಬಿಡಬೇಕು. ಪ್ರಸಂಗವಶಾತ್ ಅದರ ಉಪಯೋಗವು ಚೆನ್ನಾಗಿ ಆಗುವದು.

೧೮ ಹಬಗಳ್ಳಿಯ ಎಲೆ ಸುಟ್ಟು, ಅದರ ತಿಳಲನ್ನು ಪ್ಲೇಗಿನ ಗಂಟಿಗೆ ಕಟ್ಟಬೇಕು. ಗಂಟು ಒಡೆಯುತ್ತದೆ; ಇಲ್ಲವೆ ಕರಗುತ್ತದೆ.

೧೯ ಅರ್ಧ ತೊಲಿ ಕರೇಬಾಳ, ಅರ್ಧ ತೊಲಿ ಅಫು ಇವುಗಳನ್ನು ಕೂಡಿಸಿ ನೀರಿನಲ್ಲಿ ಅರೆದು ಬೆಚ್ಚಗೆ ಮಾಡಿ ಗಂಟಿಗೆ ಲೇಪಿಸತಕ್ಕದ್ದು. ೨-೪ ಸಾರೆ ಹಚ್ಚುವಷ್ಟರಲ್ಲಿಯೇ ಗಂಟು ಕರಗಿ ಹೋಗುತ್ತದೆ.



## ೫೪ ಎಲ್ಲ ಬಗೆಯ ಜ್ವರಗಳಿಗೂ ಉಪಾಯಗಳು.

೧ ಅಡಸಾಲದ ಕಣ್ಣೆಲೆಗೆ ೧ ತೊಲಿ ರಸದಲ್ಲಿ ೧ ಗುಂಜಿ ಕಸ್ತೂರಿ ಹಾಕಿ ಕೊಟ್ಟರೆ ಎಲ್ಲ ಪ್ರಕಾರದ ಜ್ವರಗಳೂ ಗುಣವಾಗುತ್ತವೆ.

೨ ಹೆಮ್ಮುಷ್ಟೀ ಬೀಜವನ್ನು ನೆನಿಸಿ ಕತ್ತರಿಸಿ, ಒಣಗಿಸಿ, ತುಪ್ಪದಲ್ಲಿ ಹುರಿದು ಚೂರ್ಣ ಮಾಡಿ ೧ ಗುಂಜಿಯಷ್ಟು ಪುಡಿಯನ್ನು ವೀಳ್ಯದೆಲೆಯೊಡನೆ ಕೊಡುವದು. ಎಲ್ಲ ವಿಧದ ಜ್ವರಗಳೂ ನಿಲ್ಲುತ್ತವೆ.

೩ ಜ್ವರದಲ್ಲಿ ವಾಯು ಆದರೆ:—ಒಂದು ತೊಲಿ ಅಜ್ವಾನವನ್ನು ಹಾಕಿ ಅಷ್ಟಮಾಂಶ ಕಷಾಯ ಇಳಿಸಿ, ಅದರಲ್ಲಿ ನೆಲ್ಲೀಕೊಪ್ಪಲದ ೧ ತೊಲಿ ರಸ ಹಾಕಿ ಕುಡಿಸಬೇಕು. ವಾಯುವು ಇಳಿಯುತ್ತದೆ. ಬಡಬಡಿಕೆಯು ನಿಲ್ಲುತ್ತದೆ. ಅಥವಾ ಅಜ್ವಾನವನ್ನು ಮಜ್ಜಿಗೆಯ ತಿಳಿಯಲ್ಲಿ ರಾತ್ರಿ ನೆನೆಹಾಕಿ ಬೆಳಿಗ್ಗೆ ಒಣಗಿಸಿ, ಥಳಿಸಿ, ಒಣಗಿದ ಕಾಳುಗಳನ್ನು ಕೇರಿಕೊಂಡು ಮಜ್ಜಿಗೆಯ ತಿಳಿಯಲ್ಲಿಯೇ ಅರೆದು ಬಾರೀಕಾಯಷ್ಟು ಗುಳಿಗೆ ಕಟ್ಟಿ ಜೇನತುಪ್ಪದೊಡನೆ ಇಲ್ಲವೆ ಬೆಲ್ಲದೊಡನೆ ಕೊಡತಕ್ಕದ್ದು.

೪ ವಿಷ್ಣುಕ್ರಾಂತದ ೨ ತೊಲಿ ರಸ ತೆಗೆದು ಸಕ್ಕರಿ ಕೂಡಿಸಿ ಕೊಟ್ಟರೆ ಸಕಲ ಜ್ವರಗಳೂ ನಿಲ್ಲುತ್ತವೆ.

೫ ಜ್ವರಗಳಿಗೆ ಯುನಾನಿ ಗುಳಿಗೆಯು:—ಆನೆ ಹಿಪ್ಪಲಿ ೧ ತೊಲಿ, ಹಿಪ್ಪಲಿ ಗಂಟು ೧ ತೊಲಿ, ಗಜಗದ ಬೀಜ ೧ ತೊಲಿ, ಜಾಲೀಕೊಪ್ಪಲ ೯ ತೊಲಿ ಇವನ್ನೆಲ್ಲ ಕೂಡಿಸಿ ಕುಟ್ಟಿ ಒಡೆಸೊಪ್ಪಿನ ಕಷಾಯದಲ್ಲಿ ಅರೆದು ಗಜಗದಷ್ಟು ಗುಳಿಗೆ ಕಟ್ಟಬೇಕು. ಅವು ಎಲ್ಲ ಜ್ವರಗಳಿಗೂ ದಿವ್ಯೌಷಧವಾಗಿವೆ.

೬ ನೊನ್ನೆಕ್ಕಾವಿಯನ್ನು ಆಕಳ ಹಾಲಲ್ಲಿ ೩ ದಿನ ನೆನೆಸಿ ನಂತರ ಬಿಸಿ ನೀರಿನಿಂದ ತೊಳೆಯಬೇಕು. ೩ ದಿನಗಳ ವರೆಗೆ ದಿನಾಲು ಹೊಸ ಹೊಸ ಹಾಲು ಹಾಕಬೇಕು. ಬಳಿಕ ಅದರ ಅರ್ಧದಷ್ಟು ಶುಂಠಿ ಹಾಕಿ ಕೂಡಿಸಿ ವೀಳ್ಯದೆಲೆಯ ರಸದಲ್ಲಿ ಅರೆದು ಅವರೇಕಾಳಷ್ಟು ಗುಳಿಗೆ ಕಟ್ಟತಕ್ಕದ್ದು. ಅನುಪಾನ:—ತಾಂಬೂಲ, ಅಲ್ಲದ ರಸ, ಕಲ್ಲುಸಕ್ಕರೆ, ಆಕಳ ಹಾಲು, ಜೇನತುಪ್ಪ, ತುಪ್ಪ ಇವುಗಳೊಡನೆ ಪ್ರಕೃತಿಮಾನಕ್ಕನುಗುಣವಾಗಿ ಕೊಡತಕ್ಕದ್ದು. ಈ ಔಷಧವು ಸಾದಾ ಜ್ವರಗಳಿಗೂ, ಚಿಕ್ಕಮಕ್ಕಳ ಜ್ವರಕ್ಕೂ ಅನುಕೂಲವಾಗಿರುತ್ತದೆ.

೭ ಎಲ್ಲ ಜ್ವರಗಳಿಗೂ ಜೀರ್ಣಜ್ವರಗಳಿಗೂ:—ಶುಂಠಿ, ದೀಪದ್ರಾಕ್ಷಿ, ಒಡೇಸೋಪು, ಲವಂಗ, ದಾಲಚಿನ್ನಿ, ಕಲ್ಲುಸಕ್ಕರೆ, ನೆಲ್ಲೀಚೆಟ್ಟು, ಉತ್ತತ್ತಿ, ಜ್ಯೇಷ್ಠಮಧು ಇವನ್ನೆಲ್ಲ ಪಾವಲಿ ತೂಕದಂತೆ ಹಾಕಿ ಅಷ್ಟಮಾಂಶ ಕಷಾಯ ಇಳಿಸಿ ಕೊಡುವದು. ದಿವಸ ೭.

೮ ಡಬಗಳ್ಳಿಯ ಶುಷ್ಕವಾದ ೩ ಎಲೆಗಳನ್ನು ಹೆಚ್ಚಿ ಅದರಲ್ಲಿ ಅರಿಷಿಣ, ಜೀರಿಗೆ, ಕಟುಕರೋಹಿಣಿಗಳನ್ನು ಪ್ರತ್ಯೇಕ ೧-೧ ತೊಲಿ ಕೂಡಿಸಿ ಪುಡಿ ಮಾಡಿ ಹಾಕಿ. ಅದರಲ್ಲಿ ಅರ್ಧ ತೊಲಿ ಜೋಳದ ಕಾಳುಗಳನ್ನು ಹಾಕಿ ಮುಚ್ಚಬೇಕು. ಅದರ ಮೇಲೆ ಅರಿವೆ ಸುತ್ತಿ, ಸುತ್ತಲು ಹಸೀಮಣ್ಣು ಬಡೆದು, ಕಾಕುಳ್ಳ ಚಿಕೆಯಲ್ಲಿ ಸುಡಬೇಕು. ತಾನಾಗಿಯೇ ಆರಿದ ಬಳಿಕ ಅದರೊಳಗಿನ ತಿಳುಲು ಸಹಿತ ಔಷಧವನ್ನು ಅರೆದು ೬ ಭಾಗ ಮಾಡಿ ದಿನಾಲು ಮುಂಜಾನೆ ಸಂಜೆಗೆ ಒಂದೊಂದು ಭಾಗವನ್ನು ನೀರಲ್ಲಿ ಕಲಿಸಿ, ಅದರಲ್ಲಿ ಕಾದ ಬೆಂಚಿಹಳ್ಳನ್ನು ಎದ್ದಿ ತೆಗೆದು ಕುಡಿಸಬೇಕು. ಮೂರೇ ದಿನಗಳಲ್ಲಿ ಎಂಥ ಜ್ವರಗಳಿದ್ದರೂ ನಿಲ್ಲುತ್ತವೆ.

೯ ಆಮಜ್ವರಗಳಿಗೆ:—ಅಳಲೇಕಾಯಿ, ಶುಂಠಿ, ನೆಲವರಿಗಳ ಕಷಾಯದಲ್ಲಿ ಕಲ್ಲುಸಕ್ಕರೆ ಹಾಕಿ ೩ ದಿನ ಕೊಟ್ಟರೆ ಎಲ್ಲ ಬಗೆಯ ಆಮಜ್ವರಗಳೂ ನಿಲ್ಲುತ್ತವೆ.

೧೦ ಎಲ್ಲ ಜ್ವರಗಳಿಗೂ ಅಂಜನವು:—ಕಾಗೆಯ ಮಲ, ಹೆಣದ ಕಟ್ಟಿಗೆಯ ಇದ್ದಲಿಗಳನ್ನು ಸರಿಯಾಗಿ ತಕ್ಕೊಂಡು ಅರೆದು ರೋಗಿಯ ಕಣ್ಣಿಗೆ ಅಂಜನ ಹಚ್ಚಬೇಕು. ಇದರಿಂದ ಜ್ವರ, ಭೂತಜ್ವರ, ಪಿಶಾಚಿ ಬಾಧೆ, ಡಾಕಿನಿ, ದೃಷ್ಟಿಜ್ವರ, ಚೌಡಿಜ್ವರ ಮುಂತಾದವುಗಳು ನಿಲ್ಲುತ್ತವೆ.

೧೧ ನೆಲಬೇವು, ಕೋಡುಮುರುಕನ ಬೀಜ, ವಾಯುವಡಂಗ, ಜೇಕಿನ ಗಡ್ಡಿ, ಶುಂಠಿ, ಲವಂಗ, ಜ್ಯೇಷ್ಠಮಧು, ಮೂತ್ರಲಬೀಜ, ವಿಷ್ಣುಕ್ರಾಂತಿ, ಅಮೃತಬಳ್ಳಿ, ಕಲ್ಲುಸಬ್ಬಸಿಗಿ, ಕಹಿಪಡುವಲ, ದೀಪದ್ರಾಕ್ಷಿ, ಉತ್ತುತ್ತಿ, ದ್ರಾಕ್ಷಿಗಳನ್ನು ಸಮನಾಗಿ ತಕ್ಕೊಂಡು ಅಷ್ಟಮಾಂಶ ಕಷಾಯವಿಳಿಸಿ ಕೊಡಬೇಕು ರಾತ್ರಿಯಲ್ಲಿ ಅದೇ ಜೀನಸಿನ ನಿಕಾಢೆ ಮಾಡಿ ಕೊಡುವದು. ಇದರಿಂದ ಎಲ್ಲ ಜ್ವರಗಳೂ ಶಾಂತವಾಗುತ್ತವೆ.

೧೨ ಜ್ವರಾಮೃತ ವಟಿ:—ಶುದ್ಧನೇಪಾಳದ ಬೀಜ, ಮೆಣಸು, ಆಕಳಕರಿ, ಲವಂಗಗಳನ್ನು ಸಮನಾಗಿ ತಕ್ಕೊಂಡು ಕೂಡಿಸಿ, ಪುಡಿ ಮಾಡಿ, ವೀಳ್ಯದೆಲೆಯ ರಸದಲ್ಲಿ ಅರೆದು ಗುಲಗಂಜಿ ತೂಕದ ಗುಳಿಗೆ ಕಟ್ಟಬೇಕು. ೧ ಗುಳಿಗೆಯನ್ನು ಲವಂಗ ಚೂರ್ಣ, ತಾಂಬೂಲ ಇಲ್ಲವೆ ಅಲ್ಲದರಸ ಇವುಗಳಲ್ಲಿ ಕೊಡತಕ್ಕದ್ದು.

೧೩ ಸಾಧಾರಣ ಜ್ವರಕ್ಕೆ ಉಪಾಯ:—ಆದಿತ್ಯವಾರ ದಿವಸ ಲೆಕ್ಕಿಯ ಇಲ್ಲವೆ ಗಾಯದ ಬೇರನ್ನು ತಂದು ರೋಗಿಯ ನಡಕ್ಕೆ ಕಟ್ಟಿದರೆ ಜ್ವರ ನಿಲ್ಲುತ್ತವೆ.

೧೪ ಸಿದ್ಧೌಷಧ:— ಕವಡೀ ಲೋಭಾನ ೩ ತೊಲಿ, ಸೋನ್ನಕ್ಯಾವಿ ೧ ತೊಲಿ, ಅರ್ಧತೊಲಿ ಕೇಶರ ಇವನ್ನೆಲ್ಲ ಬಿಸಿಲೊಳಗಿಟ್ಟು ಸಣ್ಣಗೆ ಅರೆಯಬೇಕು; ಹಾಗು ಪುಡಿಯನ್ನು ಸೀಸೆಯಲ್ಲಿ ತುಂಬಿಡಬೇಕು. ಚಿಕ್ಕವರಿಗೆ

ಛವಲೀ ತೂಕ ತುಪ್ಪದೊಳಗೆ ೧ ಗುಂಜಿ ಔಷಧವನ್ನೂ, ದೊಡ್ಡವರಿಗೆ ೨-೩ ಗುಂಜಿ ಔಷಧವನ್ನೂ ಹಾಕಿ ತಿನಿಸಬೇಕು.

೧೫ ಆಕಾಶಬಳ್ಳಿಯು, ಅಳ್ಳೇತೊಗಟೆಯು ಹಾಗು ಕರಿಕೆಯು ಬೂದಿಗಳನ್ನು ಸಮನಾಗಿ ಒಟ್ಟುಗೂಡಿಸಿಡಬೇಕು. ೧ ತೊಲಿ ಬೂದಿಯನ್ನು ಜೇನುತುಪ್ಪದೊಡನೆ ಕೊಡಬೇಕು.

೧೬ ಎಕ್ಕೇಎಲೆಯ ಎರಡು ಪತ್ರಾವಳಿಗಳನ್ನು ಹಚ್ಚಿ ಒಂದರ ಮೇಲೆ ಒಂದು ಹಿಡಿ ಜಾಡೇಸೊಪ್ಪು ಹಾಕಿ, ಅದರ ಮೇಲೆ ಒಂದು ತೊಲಿ ಹಿಪ್ಪಲಿ ಚೂರ್ಣ, ೧ ತೊಲಿ ಹೂವು ತೆಗೆದ ಲವಂಗದ ಚೂರ್ಣ ಕೂಡಿಸಿ ಹಾಕಬೇಕು. ಅದರ ಮೇಲೆ ಮತ್ತೆ ಜಾಡೆ ಸೊಪ್ಪು ಹಾಕಿ ಮೇಲೆ ಇನ್ನೊಂದು ಪತ್ರಾವಳಿ ಡಬ್ಬು ಹಾಕಿ ಅವನ್ನು ಸುತ್ತಿ ಅವುಗಳ ಮೇಲೆ ೩ ಥರ ಅರಿವೆ-ಕೆಸರು ಹಾಕಬೇಕು. ನಂತರ ಅದನ್ನು ಕುಳ್ಳಬೆಂಕಿಯಲ್ಲಿ ಹಾಕಿ ಅರಿವೆ-ಕೆಸರುಗಳ ೨ ಥರಗಳು ಸುಟ್ಟು ಹೋದನಂತರ ಅದನ್ನು ಹೊರಗೆ ತೆಗೆದು, ಒಳಗಿನ ಪತ್ರಾವಳಿಗಳನ್ನೂ, ಉಳಿದ ಎಲ್ಲ ಔಷಧಗಳನ್ನೂ ತೆಗೆದು ಅರೆದು ಅವರೇಕಾಳಷ್ಟು ಗುಳಿಗೆ ಕಟ್ಟಬೇಕು. ಜ್ವರದ ಬಲಾಬಲಗಳನ್ನು ತಿಳಿದು ೧-೨ ಗುಳಿಗೆಗಳನ್ನು ಅಲ್ಲದ ರಸ, ಕಲ್ಲುಸಕ್ಕರೆಗಳೊಡನೆ ಕೊಡತಕ್ಕದ್ದು.

೧೭ ಜ್ವರಕ್ಕೆ ಉಪಾಯ:— ಶನಿವಾರ ದಿನ ಉತ್ತರಾಣೀ ಗಿಡಕ್ಕೆ ೩ ಸುತ್ತು ಬಿಳೇನೂಲು ಸುತ್ತಿ ಅದರ ಹತ್ತರ ತಾಂಬೂಲವನ್ನಿಟ್ಟು ಬರಬೇಕು. ಮರುದಿನ ಬೆಳಿಗ್ಗೆ ಶುಚಿರ್ಭೂತರಾಗಿ ಯಾರೊಡನೆಯೂ ಮಾತಾಡದಂತೆ ಹಾಗು ಆ ಗಿಡದ ಮೇಲೆ ತನ್ನ ನೆಳಲು ಕೆಡವದಂತೆ ಹೋಗಿ, ಅದರ ಬೇರನ್ನು ತಂದು ಆ ಗಿಡಕ್ಕೆ ಮುನ್ನಾದಿನ ಸುತ್ತಿದ್ದ ದಾರದಿಂದಲೇ ಅದನ್ನು ಜ್ವರರೋಗಿಯ ಕೊರಳಲ್ಲಿ ಕಟ್ಟತಕ್ಕದ್ದು. ಇದರಿಂದ ದಿನ ಬಿಟ್ಟು ದಿನ ಬರತಕ್ಕ ಜ್ವರಗಳು ನಿಲ್ಲುತ್ತವೆ. ಇದರಂತೆಯೇ ಬಲಿತ ಕಲ್ಲಕಡಲೆಯ ಬೇರನ್ನು ಕಟ್ಟಿದರೂ ಗುಣತೋರುತ್ತದೆ.

೧೮ ಸರ್ವಜ್ವರಗಳಿಗೂ ಮಸ್ತಕ ಲೇಪ:—ನೆಲಬೇವು, ಉಪ್ಪು, ಶುಂಠಿ, ತೀಕ್ಷ್ಣ, ಚಂದನ, ಬಾಳದಬೇರು ಇವನ್ನೆಲ್ಲ ನೀರಲ್ಲಿ ಅರೆದು, ತಲೆಗೆ (ಹಣೆಗೆ) ಹಚ್ಚಿದರೆ ಎಲ್ಲ ಪ್ರಕಾರದ ಜ್ವರಗಳೂ ನಿಲ್ಲುತ್ತವೆ.

೧೯ ಎಲ್ಲ ಜ್ವರಗಳಿಗೂ ಅಂಜನ:—ಇಂಗು, ಬೇವಿನಬೀಜ, ಕರೇ ಹಾವಿನಪೊರೆ ಇವನ್ನು ಕತ್ತೆಯ ಉಚ್ಚೆಯಲ್ಲಿ ಅರೆದು ಕಣ್ಣಿಗೆ ಅಂಜನ ಮಾಡಿದರೆ ಎಲ್ಲ ಬಗೆಯ ಜ್ವರಗಳೂ ಶಾಂತವಾಗುತ್ತವೆ.

೨೦ ಯಾವುದೊಂದು ಜ್ವರ-ಕೆಮ್ಮು-ದಮ್ಮು-ಉಬ್ಬಸಗಳಿಗೆ ಗುಬ್ಬಿಯ

ಮನೆಯನ್ನು ಸುಟ್ಟು ಬೂದಿ ಮಾಡಿ, ಒಂದು ಚಿಮುಟಿಗಿ ಬೂದಿಯನ್ನು ಜೇನು ತುಪ್ಪದೊಡನೆ ನೆಕ್ಕಿಸತಕ್ಕದ್ದು. ದಿವಸ ೩ ಇಲ್ಲವೆ ೭ ಖಂಡಿತವಾಗಿ ಗುಣ ಬರುವದು.

೩೧ ಜ್ವರಗಳಿಗೆ ಕಲ್ಕವು:—ಲೆಕ್ಕೀಸೊಪ್ಪು, ದೇವಿನಸೊಪ್ಪು, ಗಜಗದ ಸೊಪ್ಪು ಇವುಗಳನ್ನು ನೀರು ಹಾಕಿ ಕುಟ್ಟಿ ರಸ ತೆಗೆದು, ಅದರಲ್ಲಿ ಜೀರಿಗೆಪುಡಿ ಹಾಕಿ, ಹಳೇ ಇಟ್ಟಂಗಿಯನ್ನು ಕಾಸಿ ಎದ್ದಿ, ಆರಿದ ಮೇಲೆ ಕುಡಿಸಬೇಕು. ದೊಡ್ಡವರಿಗೆ ೨ರಿಂದ ೪ ತೊಲಿ. ಸಣ್ಣವರಿಗೆ ೧ ತೊಲಿ. ದಿವಸ ೩ ಇಲ್ಲವೆ ೭.

೩೨ ಕ್ರಿಮಿಜನ್ಯ ಜ್ವರಗಳಿಗೆ:-ಕಾಡಜೀರಿಗಿ, ಕಟುಕರೋಣಿ, ನೆಲಬೇವು, ಡಿಕ್ಕೇಮಲಿ, ಶುಂಠಿ, ವಾದೇಲೋಣ ಇವನ್ನು ಸಮವಾಗಿ ತಕ್ಕೊಂಡು ಪುಡಿ ಮಾಡಿ ಬೆಳಗು-ಸಂಜೆಗಳಲ್ಲಿ ಅರ್ಧ ತೊಲಿ ಪುಡಿ ತಣ್ಣೀರಿನೊಡನೆ ಕೊಡತಕ್ಕದ್ದು. ಇಲ್ಲವೆ ಆ ಪುಡಿಯನ್ನು ತಣ್ಣೀರಲ್ಲಿ ಕಲಿಸಿ, ಅದರಲ್ಲಿ ಕಬ್ಬಿಣಸವಟು ಕಾಸಿ ಎದ್ದಿ ಸೋಸಿ ಕುಡಿಸಬೇಕು. ದಿವಸ ೩-೭. ಈ ಔಷಧವು ಸಣ್ಣ ಹುಡುಗರಿಗೂ, ಜಂತಿನ ಜ್ವರದವರಿಗೂ ಅನುಕೂಲವಾಗಿದೆ.

೩೩ ಪಂಚಾನನ ರಸ:—೨ಭಾಗ ಶುದ್ಧ ನೇಪಾಳದಬೇರು, ೪ಭಾಗ ಮೆಣಸು,೨ ಭಾಗ ಶುದ್ಧ ಗಂಧಕ, ೧ ಭಾಗ ಶುದ್ಧ ಇಂಗಳೀಕ, ೧೨ ಭಾಗ ತಾಮ್ರಭಸ್ಮ ಇವನ್ನೆಲ್ಲ ಕೂಡಿಸಿ ಚೂರ್ಣಮಾಡಿ ಎಕ್ಕೀಹಾಲಲ್ಲಿ ಅರೆದು ಉದ್ದಿನಕಾಳಷ್ಟು ಗುಳಿಗೆ ಮಾಡಬೇಕು. ಪ್ರತಿಸಾರೆ ೧ ಗುಳಿಗೆಯನ್ನು ಜೇನತುಪ್ಪದೊಡನೆ ಕೊಡುವದು. ಪಥ್ಯ:—ಹಾಲು ಅನ್ನ, ಸೈಂಧಲವಣ, ಕಲ್ಲುಸಕ್ಕರೆ, ತಣ್ಣೀರು.

೩೪ ಮಹಾಜ್ವರಾಂಕುಶ:---ಶುದ್ಧ ಪಾರಜ, ಗಂಧಕ, ನೇಪಾಳದಬೇರು ೧-೧ತೊಲಿ, ಶುದ್ಧ ಮದಗುಣಕೀಬೀಜ ೯ ತೊಲಿ, ಹಾಗು ಗೊಳಗೊಳಕಿಯ ಬೇರನ್ನು ಎಲ್ಲ ಸಾಮಾನುಗಳ ಇಮ್ಮಡಿ ತಕ್ಕೊಂಡು ಕುಟ್ಟಿ ವಸ್ತ್ರಗಾಳಚೂರ್ಣ ಮಾಡಿ, ದೊಡ್ಡಿಕಾಯಿ ರಸದಲ್ಲಿ ೧ ದಿನ, ಖಾರಗೆಣಸಿನ ರಸದಲ್ಲಿ ೧ ದಿನ ಅರೆದು ಅವರೇಕಾಳಷ್ಟು ಗುಳಿಗೆ ಮಾಡಬೇಕು. ಒಂದು ಗುಳಿಗೆಯನ್ನು ಅಲ್ಲದ ರಸದಲ್ಲಿ ಕೊಡಬೇಕು. ಅದರಿಂದ ತ್ರಿದೋಷಜನ್ಯಜ್ವರ, ಹಗಲು ಹಾಗು ರಾತ್ರಿ ಹೀಗೆ ದಿನಕ್ಕೆರಡು ಸಾರೆ ಬರುವ ಜ್ವರ, ದಿನಬಿಟ್ಟು ದಿನ ಬರುವ ಜ್ವರ ಮತ್ತು ಚಾತುರ್ಥಿಕ ಜ್ವರ ಇವೆಲ್ಲ ನಿಲ್ಲುತ್ತವೆ. ಈ ಔಷಧವು ವಿಷಮಜ್ವರಕ್ಕೆ ಅನುಕೂಲವಾಗಿದೆ.

೩೫ ಜ್ವರಮುರಾರಿ:—ಶುದ್ಧ ಕಲ್ಲ ಕಪ್ಪರಿಗೆಯ ಚೂರ್ಣಕ್ಕೆ ಲಿಂಬೀಹುಳಿಯ ೨೧ ಪುಟ ಕೊಟ್ಟು, ಬಳಿಕ ಅದನ್ನು ಆಕಳ ತಾಜಾ ಬೆಣ್ಣೆಯಲ್ಲಿ ಅರೆಯಬೇಕು. ಪ್ರತಿಸಾರೆ ೨ ಅವರೇ ಕಾಳಷ್ಟು ಔಷಧವನ್ನು ಸಕ್ಕರೆಯೊಡನೆ ಕೊಟ್ಟರೆ ಸಾದಾ ಜ್ವರಗಳು ನಿಲ್ಲುತ್ತವೆ.

೨೬. ಸುವರ್ಣಮಾಲಿನೀ ವಸಂತ:—ಬಂಗಾರದ ವರ್ಕ ಇಲ್ಲವೆ ಶುದ್ಧ (ಪುಡಿ) ೧ ತೊಲಿ, ಮುತ್ತಿನಪುಡಿ ೨ ತೊಲಿ, ಮೆಣಸು ೩ ತೊಲಿ, ಶುದ್ಧವಾದ ಕಲ್ಲುಕಪ್ಪುರಗೆ ೮ ತೊಲಿ, ಶುದ್ಧ ಇಂಗಳೀಕ ೨ ತೊಲಿ ಇವನ್ನೆಲ್ಲ ಕುಟ್ಟಿ ವಸ್ತ್ರಗಾಳ ಚೂರ್ಣ ಮಾಡಿ ೨|| ತೊಲಿ ಬೆಣ್ಣೆಯಲ್ಲಿ ಅದನ್ನು ಚನ್ನಾಗಿ ಅರೆದು ನಂತರ ಬೆಣ್ಣೆಯು ಹಡಸು ಹೋಗುವವರೆಗೆ ಲಿಂಬೀಹುಳಿಯಲ್ಲಿ ಅರೆಯಬೇಕು. ಬೆಣ್ಣೆಯು ಹಡಸು ಕೊಂಚವೂ ಉಳಿಯಕೂಡದು ೨ ಗುಂಜಿ ಈ ಔಷಧವನ್ನು ಜೇನುತುಪ್ಪ, ಹಿಪ್ಪಲಿಪುಡಿಗಳೊಡನೆ ಕೊಟ್ಟರೆ ಅದರಿಂದ ಜೀರ್ಣಜ್ವರ, ಧಾತುಗತಜ್ವರ, ಅತಿಸಾರ, ಕ್ಷಯ, ಪಾಂಡುರೋಗ, ಪಿತ್ಥವಿಕಾರ, ನೇತ್ರವಿಕಾರ, ದಾಣಂತಿರೋಗ, ಅಸ್ಥಿಜ್ವರ, ಉಬ್ಬಸ, ದಮ್ಮು ಮುಂತಾದವುಗಳ ನಾಶವಾಗುತ್ತದೆ.

೨೭ ಲಘುಸೂಚಿಕಾಭರಣ ಸನ್ನಿಪಾತಕ್ಕೆ:—೪ ತೊಲಿ ಶುದ್ಧ ನೇಪಾಳ ಬೇರು, ೩ ಮಾಸಿ ಶುದ್ಧ ಪಾರಜ ತಕ್ಕೊಂಡು ಎರಡು ಪ್ರಹರಗಳ ವರೆಗೆ ಚನ್ನಾಗಿ ಅರೆಯಬೇಕು. ಸುಟ್ಟ ಮಣ್ಣಿನ ೨ (ಬಟ್ಟಲು) ಪೇಲೆಗಳನ್ನು ತಕ್ಕೊಂಡು ಅವುಗಳ ಒಳಮಗ್ಗಲಿಗೆ ಕಾಜಿನ ಪುಡಿಯನ್ನು ನೀರಲ್ಲಿ ಸಣ್ಣಾಗಿ ಅರೆದು ಹಚ್ಚಬೇಕು. ಅದು ಒಣಗಿದ ಬಳಿಕ ಒಂದರಲ್ಲಿ ಮೇಲಿನ ಔಷಧವನ್ನು ತುಂಬಿ, ಅದರ ಮೇಲೆ ಮತ್ತೊಂದು ಪೇಲೆಯನ್ನು ಮುಚ್ಚಿ ಸಂದುಗಳನ್ನು ಅರಿವೆ-ಮಣ್ಣಿನಿಂದ ಮುಚ್ಚಿ ಒಣಗಿಸಬೇಕು. ಬಳಿಕ ಆ ಪೇಲೆಯನ್ನು ಒಲೆಯ ಮೇಲಿಟ್ಟು ಕೆಳಗೆ ಮಂದವಾಗಿ ಉರಿ ಮಾಡಬೇಕು. ೨ ಪ್ರಹರಗಳ ವರೆಗೆ ಉರಿ ಹಚ್ಚಿದ ನಂತರ ಮೇಲಿನ ಪೇಲೆಗೆ ತಂಗಲರವಿಯ ಮಡಿಕೆಯನ್ನು ಆಗಾಗ್ಗೆ ಹಾಕಬೇಕು. ಬಳಿಕ ಕೆಳಗಿಳಿಸಿ, ಆದರ ಸಂದುಗಳಿಗೆ ಸುತ್ತಿದ್ದ ಅರಿವೆ-ಮಣ್ಣುಗಳನ್ನು ತೆಗೆದು, ಯುಕ್ತಿಯಿಂದ ಮೇಲಿನ ಪೇಲೆಗೆ ಹತ್ತಿದ್ದ ಪಾರಜವನ್ನು ಕಾಜಿನ ಸೀಸೆಯಲ್ಲಿ ತುಂಬಿಡಬೇಕು. ಸನ್ನಿಪಾತ ಜ್ವರದಲ್ಲಿ ರೋಗಿಗೆ ಮೂರ್ಛೆ ಬಂದರೆ, ಕತ್ತಿಯಿಂದ ನೆತ್ತಿಯ ಮೇಲಿನ ಕೂದಲುಗಳನ್ನು ಬೋಳಿಸಿ, ಸೂಜಿಯ ಮೊನೆಯ ಮೇಲೆ ನಿಲ್ಲುವಷ್ಟು ಪಾರಜವನ್ನು ನೆತ್ತಿಯ ಮೇಲೆ ಗಾಯ ಮಾಡಿ ರಕ್ತ ಒರಿಸಿ ಆ ಗಾಯದಲ್ಲಿ ಹಾಕಿ ಬೆಟ್ಟಿನಿಂದ ಚೆನ್ನಾಗಿ ತಿಕ್ಕಿ ಆ ಪಾರಜವು ನೆತ್ತರದಲ್ಲಿ ಸಮರಸವಾಗುವಂತೆ ಮಾಡುವದು. ಅದರಿಂದ ರೋಗಿಯು ಕೂಡಲೆ ಸಾವಧನಾಗುತ್ತಾನೆ. ಮೂರ್ಛೆಯು ತಿಳಿಯುವದು. ಇದರಂತೆಯೇ ಹಾವು ಕಡಿದು ಮೂರ್ಛೆಯುಂಟಾಗಿ ಆಸನ್ನಮರಣನಾದ ಮನುಷ್ಯನೂ ಈ ಮೇಲಿನ ಉಪಾಯದಿಂದ ಎಚ್ಚರ ಹೊಂದುತ್ತಾನೆ ಈ ಔಷಧದ ಯೋಗದಿಂದ ಮೈದಾಹವಾದರೆ ಗುಲಕಂದ, ಡಾಳಿಂಬರ, ದ್ರಾಕ್ಷಿ ಮುಂತಾದವುಗಳನ್ನು ತಿನಿಸಿದರೆ ಶಮನವಾಗುತ್ತದೆ.

೨೮ ಗದಮುರಾರಿ ರಸ:—ತರುಣ ಮತ್ತು ಆಮಜ್ವರಗಳಿಗೆ ಶುದ್ಧ ಪಾರಜ, ಗಂಧಕ, ಸೀಸಭಸ್ಮ, ಲೋಹಭಸ್ಮ, ಅಭ್ರಕಭಸ್ಮ ಇವನ್ನೆಲ್ಲ ಸಮನಾಗಿ ತೆಗೆದುಕೊಂಡು ಅವುಗಳ ಅರ್ಧದಷ್ಟು ನೇಪಾಳದೇರು ಕೂಡಿಸಿ ಎಲ್ಲವನ್ನೂ ಬೆರಿಸಿ ಸಣ್ಣಾಗಿ ಅರೆದು ಸೀಸೆಯಲ್ಲಿ ತುಂಬಿಡಬೇಕು. ೧ ಗುಂಜಿ ಔಷಧವನ್ನು ಅಲ್ಲದ ರಸದೊಡನೆ ಕೊಟ್ಟರೆ ಜ್ವರ ನಿಲ್ಲುತ್ತವೆ.

೨೯ ಬಾಲಾರ್ಕ ಮಧು:—ಶುದ್ಧವಾದ ಪಾರಜ, ಗಂಧಕ, ಇಂಗಳೀಕ, ಜಾಪಾಳಬೀಜ ಸಮನಾಗಿ ತೆಗೆದುಕೊಂಡು ದಂತಿಫ(ದಾದ)ದ ಬೇರಿನ ಕಷಾಯದಲ್ಲಿ ಅರೆದು ೨ ಗುಂಜಿ ಪ್ರಮಾಣದ ಗುಳಿಗೆ ಕಟ್ಟಬೇಕು. ೧ ಗುಳಿಗೆಯನ್ನು ತಿಂದರೆ ಒಂದೇ ದಿವಸದಲ್ಲಿ ಜ್ವರ ನಿಲ್ಲುತ್ತವೆ. ಅನುಪಾನ ಅಲ್ಲದ ರಸ, ಸಕ್ಕರೆ ಇಲ್ಲವೆ ಬೆಲ್ಲ.

೩೦ ತ್ರಿಭುವನಕೀರ್ತಿ ರಸ:—ಶೋಧಿಸಿದ ಇಂಗಳಾಕ, ನೇಪಾಳಬೇರು, ಶುಂಠಿ, ಮೆಣಸು, ಹಿಪ್ಪಲಿ, ಬಳೆಗಾರ ಮತ್ತು ಹಿಪ್ಪಲಿಬೇರು ಇವನ್ನು ಸಮನಾಗಿ ತೆಗೆದುಕೊಂಡು ಪುಡಿ ಮಾಡಿ, ತುಳಸಿ, ಅಲ್ಲ ಮತ್ತು ಮದಗುಣಕೆ ಇವುಗಳ ರಸಗಳಲ್ಲಿ ಪ್ರತ್ಯೇಕವಾಗಿ ಒಂದೊಂದು ದಿನ ಅರೆದು, ಗುಲಗಂಜಿಯಷ್ಟು ಗುಳಿಗೆ ಮಾಡಬೇಕು. ಮುಂಜಾವು ಸಂಜೆಗಳಲ್ಲಿ ೧-೧ ಗುಳಿಗೆಯನ್ನು ಅಲ್ಲದ ರಸದೊಡನೆ ಇಲ್ಲವೆ ಜ್ವರೋಕ್ತ ಕಷಾಯದೊಡನೆ ಕೊಟ್ಟರೆ ಎಲ್ಲ ಬಗೆಯ ಜ್ವರಗಳೂ, ೧೩ ಪ್ರಕಾರದ ಸನ್ನಿಪಾತಗಳೂ ನಾಶವಾಗುತ್ತವೆ.

೩೧ ಕಂಚಿನ ಇಲ್ಲವೆ ಬೆಳ್ಳಿಯ ಪಾತ್ರೆಯಲ್ಲಿ ಅತಿ ತಂಪಾದ ನೀರು ಹಾಕಿ, ಆ ಪಾತ್ರೆಯನ್ನು ರೋಗಿಯ ಎದೆ, ತಲೆ, ಕಿವಿಗಳ ಪಕ್ಕದಲ್ಲಿ ಇಟ್ಟು ಆಗಾಗ್ಗೆ ಮೆಲ್ಲಗೆ ಸರಿಸಾಡಬೇಕು. ಆ ನೀರು ಬೆಚ್ಚಗಾದರೆ ಅವನ್ನು ಚೆಲ್ಲಿ ಹೊಸ ತಣ್ಣೀರು ಹಾಕಬೇಕು ಹೀಗೆ ೧ ಗಳಿಗೆಯ ವರೆಗೆ ಮಾಡಿದರೆ ಒಳ್ಳೇ ಗುಣ ಕಾಣುತ್ತದೆ. ೧೦೫ ಡಿಗ್ರಿಗಳ ವರೆಗೆ ಜ್ವರವಿದ್ದರೂ ಅಂಜುವ ಕಾರಣವಿಲ್ಲ. ಯಾವ ಸ್ಥಳದಲ್ಲಿ ಬರ್ಫವು ಸಿಗುವದಿಲ್ಲವೋ ಅಲ್ಲಿ ಈ ಉಪಾಯವು ಸುಲಭಸಾಧ್ಯವಾಗಿದ್ದು, ಇದರಿಂದ ಬರ್ಫದ ಕೆಲಸವಾಗುತ್ತದೆ. ನಿದ್ದೆ ಬರದಿದ್ದಾಗಲೂ, ಕೈ ಕಾಲುಗಳು ಉರಿಯುತ್ತಿದ್ದಾಗಲೂ ಇದೇ ಉಪಾಯ ಮಾಡಿದರೆ ಉತ್ತಮ ಗುಣ ಕಾಣುವದು.

೩೨ ಮೃತಪ್ರಾಣದಾಯಿನಿ ರಸ:—ಶುದ್ಧ ಪಾರಜ, ಗಂಧಕ, ಬಳೆಗಾರ, ನೇಪಾಳದ ಬೇರು, ಮದಗುಣಕಿಯ ಬೀಜ ಇವನ್ನೆಲ್ಲ ಸಮನಾಗಿ ತೆಗೆದುಕೊಂಡು ಕುಟ್ಟಿ ಅರೆದು, ಅದಕ್ಕೆ ಮದಗುಣಕೀಬೀಜದ ಹಾಗು ನೇಪಾಳದ ಬೇರಿನ ಕಷಾಯಗಳ ಪ್ರತ್ಯೇಕ ೩-೩ ಭಾವನೆ ಕೊಡಬೇಕು. ನಂತರ ಅದಕ್ಕೆ ಶುಂಠಿ, ಮೆಣಸು, ಹಿಪ್ಪಲಿಗಳ ಕಷಾಯದ ೫ ಭಾವನೆ ಕೊಟ್ಟು ಇಡಬೇಕು. ಇದನ್ನು

ಹರಿ ಔಷಧವು ಸಿದ್ಧವಾದಂತಾಯಿತು. ಈ ಔಷಧವನ್ನು ಸನ್ನಿಪಾತಜ್ವರ, ಸಂತತ ಜ್ವರ, ಭಯಂಕರ ಕಫರೋಗಗಳಿಗೆ ಅಲ್ಲದ ರಸದಲ್ಲಿ ೧ ಗುಂಜಿಯಷ್ಟು ಕೊಡ ಬೇಕು. ಪಥ್ಯ:—ಹಾಲೂ ಅನ್ನ, ಮೊಸರೂ ಅನ್ನ, ಪಾಯಸ, ಮಜ್ಜಿಗೆ ಅನ್ನ ಗಳನ್ನುಣ್ಣಬೇಕು. ಜ್ವರಾತಿಸಾರ, ಆಮಾತಿಸಾರ, ಸಂಗ್ರಹಣಿ, ಮೂಲವ್ಯಾಧಿ ಗಳಿಗೆ ಇದನ್ನು ಜೇನತುಪ್ಪ-ಸಕ್ಕರೆಗಳೊಡನೆ ಕೊಡಬೇಕು ವಾತಜ್ವರ, ಪ್ರಕಂಪ ವಾತ, ಬಾಹು ಕಂಪ, ಏಕಾಂಗವಾತಗಳಿಗೆ ಶುಂಠಿ, ಮೆಣಸು, ಚಿತ್ರಮೂಲ, ಹಿಪ್ಪಲಿ ಇವುಗಳ ಕಷಾಯದಲ್ಲಿ ಕೊಡತಕ್ಕದ್ದು; ಮತ್ತು ಅಪಸ್ಮಾರ, ಉನ್ಮಾದ ರೋಗಗಳಿಗೆ ಸಕ್ಕರೆ ಮದುಗುಣಿಕೆಯ ಬೀಜಗಳೊಡನೆ ಕೊಡುವದು. ಈ ಮೃತಪ್ರಾಣದಾಯಿ ರಸವು ಮೇಲಿನ ರೋಗಗಳಿಗೆ ಅನುಕೂಲವಾಗಿದೆ.

೩೩ ಸುದರ್ಶನಚೂರ್ಣ:—(ಭೇದೋಕ್ತ) ಚಾಳೀಸಪತ್ರಿ, ತ್ರಿಫಳ, ಯಾಲಕ್ಕಿ, ದಾಲಚಿನ್ನಿ, ತ್ರಿಕಟು, ನಿರಾಮೆಬಳ್ಳಿ, ತಿಗಡಿ, (ಓಮು) ಹಿಪ್ಪಲಿ ಬೇರು, ಅರಿಷಿಣ, ಮರಅರಿಷಿಣ, ಕಚೋರ, ಕಲ್ಲಕಡಲೆ, ಕೋಷ್ಠ, ನೆಲಗುಳ್ಳ ಬೇರು, ಗುಳ್ಳದಬೇರು, ಜೇಕಿನಗಡ್ಡೆ, ಕಲ್ಲುಸಬ್ಬಸಿಗಿ, ಬೇವು, ಕೊಳಂಜನ, ಅಜ್ವಾನ, ಬಾಳದಬೇರು, ಗಂಟುಭಾರಂಗಿ, ಜವಳ, (ಕಾಡುಮೆಣಸಿನಬೇರು) ಚಿತ್ರಮೂಲ, ಬಿಳೀಕಮಲದ ಮೂಲ, ತಗರ, ಕರೇಬಾಳದಬೇರು, ವಾಯು ವಡಂಗ, ಬಜೆ, ನೆಲಿಂಗಳ, ಕೋಡುಮುರುಕನ ತೊಗಟೆ, ಅಮೃತಬಳ್ಳಿ, ಕೋಡುಮುರುಕನಬೀಜ, ದೇವದಾರು, ಹಳದೀಬಾಳದಬೇರು, ನುಗ್ಗಿಬೀಜ, ಕಹಿಪಡುವಲ, ಕಟುಕರೋಣಿ, ಪದ್ಮಕಾಷ್ಠ, ತಮಾಲಪತ್ರ, ಗೋರೀಮಿಡಿ, (ಆಸ್ಕಂದ) ಜ್ಯೇಷ್ಠಮಧು, ಕೇಶರ, ತವಾಕ್ಷರ, ಲವಂಗ, ಉರಿಹೊನ್ನೆ, ಕಲ್ಲ ಹೂವು, ಮೂರೆಲೆಹೊನ್ನೆ, ಒಣಗಿದ ಮಾವಿನ ಗೊರಟ ಇವನ್ನೆಲ್ಲ ಸಮನಾಗಿ ತಕ್ಕೊಂಡು ವಸ್ತ್ರಗಾಳಚೂರ್ಣಮಾಡಿ ಅದರಲ್ಲಿ ಅದರ ಅರ್ಧದಷ್ಟು ಕಾಡೇಚಿರಾ ಯಿತ, (ನೆಲಬೇವಿನಕಡ್ಡಿ,) ಚೂರ್ಣವನ್ನು ಕೂಡಿಸಿಡಬೇಕು. ಅದಕ್ಕೆ ಸುದರ್ಶನ ಚೂರ್ಣವೆನ್ನುತ್ತಾರೆ. ಇದನ್ನು ಸೇವಿಸಿದರೆ ವಾತ, ಪಿತ್ಥ, ಕಫಜ್ವರ, ತ್ರಿದೋಷಜ್ವರ, ದ್ವಿದೋಷಜ್ವರ, ದ್ವಂದ್ವಜ್ವರ, ವಿಷಮಜ್ವರ, ಧಾತುಗತಜ್ವರ, ಅಭಿಘಾತಜ್ವರ, ಸಾಮಜ್ವರ, ಮಾನಸಜ್ವರ, ದಾಹಜ್ವರ, ಶೀತಜ್ವರ, ತೃತೀಯಕ ಜ್ವರ, ಚಾತುರ್ಥಿಕಜ್ವರ, ಎಕ್ಯಾಹಿಕ, ದ್ವ್ಯಾಹಿಕ, ವಿಪರ್ಯಾಸಜ್ವರ, ಸನ್ನಿ ಪಾತಜ್ವರ, ವರ್ಷಜ್ವರ, ಮಾಸಜ್ವರ, ತೃಷೆ, ದಾಹ, ಮೋಹ, ಭ್ರಮೆ, ಮಬ್ಬು, ಉಬ್ಬಸ, ದಮ್ಮು, ಅರುಚಿ, ಪಾಂಡುರೋಗ, ಹಲೀಮಕ, ಕಾಮಣಿ, ಪಕ್ಕೆ ಶೂಲಿ, ಬೆನ್ನುಶೂಲಿ, ಮೊಣಕಾಲಶೂಲಿ, ತೊಂಡೆಯುರೊಂಡಿಯುಶೂಲಿ, ಸಂಪೂ ರ್ಣವಾತವಿಕಾರ, ತಲೆಶೂಲಿ, ನಾನಾದೇಶಗಳ ನೀರಿನಿಂದಾದ ದೋಷ, ದೂಷೀ

ಪಿತ್ತ, ಸ್ತ್ರೀಯರ ಮುಟ್ಟಿನ ದೋಷ ಮುಂತಾದವುಗಳು ಗುಣವಾಗುವವು. ಔಷಧ ತಕೊಳ್ಳುವ ಕ್ರಮ:—ಅರ್ಧ ತೊಲಿ ಇಲ್ಲವೆ ೧ ತೊಲಿ ಚೂರ್ಣವನ್ನು ದಿನ ಕೊಂಡು ಸಾರೆ ಬಿಸಿನೀರಿನೊಡನೆ ತಕೊಳ್ಳತಕ್ಕದ್ದು. ಪಿತ್ತಾಧಿಕವಾಗಿದ್ದರೆ ತಣ್ಣೀರಿನಲ್ಲಿ ತಕೊಳ್ಳಬೇಕು

೩೪ ಜ್ವರಘಣಿ ಗುಳಿಗೆ:—ಶುದ್ಧಗಂಧಕ ೧ ಭಾಗ, ಪಾರಜ ೧ ಭಾಗ, ನೇಪಾಳದಬೇರು ೧ ಭಾಗ, ಇಂಗಳೀಕ ೪ ಭಾಗ, ಜಾಪಾಳಬೀಜ ೮ ಭಾಗ ತಕೊಂಡು ಮದಗುಣಿಕೆಯ ರಸದಲ್ಲಿ ೧ ಪ್ರಹರದ ವರೆಗೆ ನುಣ್ಣಗಾಗಿ ಅರೆದು ಗುಂಜಿತೂಕದ ಗುಳಿಗೆ ಕಟ್ಟಬೇಕು. ಅಲ್ಲದರಸ, ಜೇನುತುಪ್ಪ, ಇಲ್ಲವೆ ಸಕ್ಕರಿ ಇವುಗಳೊಡನೆ ೧ ಗುಳಿಗೆ ಕೊಟ್ಟರೆ ಅರ್ಧದಿನದಲ್ಲಿಯೇ ಜ್ವರ ನಿಲ್ಲುತ್ತವೆ

೩೫ ಕಲ್ಪಾಂತಭೈರವ:—ಶೋಧಿಸಿದ ಇಲಿ ಪಾಷಾಣ, ಅರೆದಾಳ, ಗಂಧಕ, ಪಾರಜ, ಜಾಪಾಳಬೀಜ, ಬಳಿಗಾರ, ತುತ್ಥ, (ಇವೆಲ್ಲ ಶುದ್ಧವಾದವನ್ನು ತಕೊಂಡು) ತಾಮ್ರಭಸ್ಮ, ಮೆಣಸು ಇವೆಲ್ಲ ಸಮಭಾಗ ಮತ್ತು ಶುದ್ಧ ನೇಪಾಳದ ಬೇರು ೨ ಭಾಗ ತಕೊಂಡು ಪುಡಿ ಮಾಡಿ, ಅದಕ್ಕೆ ತುಳಸಿ, ನುಗ್ಗಿ, ಲಕ್ಕಿ, ಕಾಡಿಗ್ಗರಗು, ಚಿತ್ರಮೂಲ, ಮದಗುಣಿಕಿ ಹಣ್ಣಿನ ರಸ, ಅಲ್ಲದ ರಸ ಇವುಗಳ ಬೇರೆ ಬೇರೆ ಭಾವನೆ ಕೊಟ್ಟು ಅರೆದು ಅರ್ಧ ಗುಂಜಿ ತೂಕದ ಗುಳಿಗೆ ಮಾಡಬೇಕು. ವೀಳ್ಯದೆಲೆಯೊಡನೆ ಇಲ್ಲವೆ ಅಲ್ಲದ ರಸದೊಡನೆ ೧ ಗುಳಿಗೆ ಕೊಡಬೇಕು. ಇದರಿಂದ ಎಲ್ಲ ಪ್ರಕಾರದ ವಾತರೋಗ, ಹದಿಮೂರೂ ಬಗೆಯ ಸನ್ನಿಪಾತಗಳು ಹೊಟ್ಟೆಯುಬ್ಬುವದು, ಕಾಮಣಿ, ಕೆಮ್ಮು, ದಮ್ಮು, ತ್ರಿದೋಷ ಜ್ವರ, ಕಾಲಜ್ವರ, ಯಕೃತ, ಪ್ಲೀಹ, ಉದರ, ಗುಲ್ಮ, ಶೂಲಿ, ಉಪದಂಶ, ಬೂಣಂತಿಯ ವಾತರೋಗ ವ[illegible] ಸ್ತ್ರೀಪುರುಷರ ನಾಶವಾಗುತ್ತದೆ; ಹಾಗು ಕಫವಾತ ಸಂಬಂಧದ ದುಸ್ಸಾಧ್ಯ[illegible] ಗಳು ವಾರಣವೂ ಆಗುತ್ತದೆ. ಬುದ್ಧಿವಂತ ವೈದ್ಯರು ಆಯಾ ರೋಗಕ್ಕೆ ತಕ್ಕದ್ದಾದ ಅನುಪಾನ ಯೋಜಿಸಿ ಕೊಡತಕ್ಕದ್ದು. ಈ ರಸಾಯನವನ್ನು ಭಗವಾನ್ ಶ್ರೀ ಶಂಕರನು ನಿರ್ಮಿಸಿರುತ್ತಾನೆ.

೩೬ ಜ್ವರಕೇಸರಿ:—(ವಿಷಮಜ್ವರದ ೨೪ನೇ ಉಪಾಯ ನೋಡಿರಿ.) ಅನುಪಾನವನ್ನು ಯೋಗ್ಯವಾಗಿ ಯೋಜಿಸಿ ಸರ್ವ ಜ್ವರಗಳಿಗೂ ಕೊಡತಕ್ಕದ್ದು.

ವೈದ್ಯನಾರಾಯಣನು ಸಕಲರಿಗೂ ಆರೋಗ್ಯವನ್ನುಂಟು ಮಾಡಲಿ!

---

ಜ್ವರಪ್ರಕರಣವು ಮುಗಿದುದು

# ನಮ್ಮಲ್ಲಿ ಸಿಗುವ ಪುಸ್ತಕಗಳು.

## ೧ ಐತಿಹಾಸಿಕ ಕಾದಂಬರಿ

೧ ಶಕ್ತಿಮಯೀ ೧ರೂ
೨ ವಡಗಾವದವಿಜಯ(ಸಚಿತ್ರ) ೧|ರೂ
೩ ಮರಾಟರ ಅವನತಿ ೧೪ಆ
೪ ಸಂಕ್ರಮಣ ೮ಆ
೫ ಕನ್ನಡಿಗರ ಕಾರಸ್ಥಾನ ೧೦ಆ
೬ ಕೃಷ್ಣಾಕುಮಾರಿ ೧ರೂ
೭ ಚಿಮಣಾಜೀಅಪ್ಪಾ ೧ರೂ ೨ಆ
೮ ದೈವಸಂಕಲ್ಪ ೧೪ಆ
೯ ದೈವತಂತ್ರ ೪ಆ
೧೦ ಗುರುಗೋವಿಂದಸಿಂಹ ೧೨ಆ
೧೧ ನರವೀರಕಾಸೀಮ ೧|ರೂ
೧೨ ಪತಿತೋದ್ಧರಣ ೪ಆ
೧೩ ಜಕಣಾಚಾರ್ಯ ೧೪ಆ
೧೪ ಕಂಕಣಚೋರ ೧|ರೂ
೧೫ ವಿಮಲಾ ೧ರೂ
೧೬ ರಾಜದಂಡ ೧ರೂ
೧೭ ಸೂರ್ಯಗ್ರಹಣ ೧ರೂ
೧೮ ಹಿಂದೂ-ಮುಸಲ್ಮಾನರಐಕ್ಯ ೪ಆ
೧೯ [ಸ.]ಮಹಾತ್ಮತುಳಸೀದಾಸ ೧||ರು
೨೦ ಫಿರಂಗಿಗಳ ಉತ್ಪಾತ ೧ರೂ
೨೧ ತಾಯಿನಾಡು ೧ರೂ

## ೨ ಸಾಮಾಜಿಕ ಕಾದಂಬರಿ

೧ ಸಂನ್ಯಾಸಿ ೧೦ಆ
೨ ಸೌಭಾಗ್ಯತಿಲಕ ೧ರೂ
೩ ಸದ್ಗುಣಿಕಮಲಾ[೨ನೇಆ.] ೧ರೂ
೪ ಬಂಧುಪ್ರೇಮ ೧೦ಆ
೫ ಸತೀಸಾಹಸ [೫ನೇ ಆ] ೪ಆ
೬ ರಾಜನಂದಿನಿ ೧೦ಆ
೭ ಪ್ರೇಮಯಜ್ಞ ೮ಆ
೮ ಗೃಹಲೀಲೆ ೧೨ಆ
೯ ಎರಡನೇ ಹೆಂಡತಿ ೮ಆ
೧೦ ಮನೋರಮಾ ೧೪ಆ
೧೧ ನೀಚ ಇನಾಮದಾರ ೧೨ಆ
೧೨ ಜಯ-ಪರಾಜಯ! ೧೨ಆ
೧೩ ವಿಲಕ್ಷಣಪತಿಸೇವೆ ೪ಆ
೧೪ ವಿಷಕುಂಭ ೪ಆ
೧೫ ಭಾಮಿನಿ ೮ಆ

## ೩ ಡಿಟೆಕ್ಟಿವ್ಹ ಕಾದಂಬರಿ

೧ ಅಂಬಿಕೆ. ೧ರೂ ೪ಆ
೨ ವಿಚಿತ್ರಘಟ [೨ನೇ ಆ.] ೮ಆ
೩ ಇಂದುಮುಖಿ ,, ೧೦ಆ
೪ ಭಗವಾನ್‌ದಾಸ ೧ರೂ
೫ ನಿಗೂಢ ಕೊಲೆ! [೨ನೇ ಆ] ೮ಆ
೬ ಭಯಂಕರಕೊಲೆ! ,, ೧೨ಆ
೭ ಘಾತುಕ ಶಿತಿಕಂಠ ,, ೧೦ಆ
೮ ಪತ್ತೇದಾರ ನರಸಿಂಗರಾಯ ೪ಆ

## ೪ ಪೌರಾಣಿಕ ಕಾದಂಬರಿ

೧ ಪರಶುರಾಮ ಪರಾಜಯ ೪ಆ
೨ ಅಂಗದನ ಫಿರ್ಯಾದು ೪ಆ
೩ ಈಶಪ್ರಸಾದ ೪ಆ

## ೫ ಚರಿತ್ರಗಳು.

೧ ಸ್ವಾಮೀ ಶ್ರದ್ಧಾನಂದ ೧೨ಆ
೨ ಶ್ರೀ ಬ್ರ. ಚೈ. ಮಹಾರಾಜರು ೧೨ಆ
೩ ಕೃಷ್ಣಾವಧೂತರು ೮ಆ
೪ ಶ್ರೀ ಶಿವಾಚಲಸಾಧುಗಳು ೧ರೂ
೫ ಶ್ರೀ ಮಡಿವಾಳಪ್ಪನವರು ೬ಆ
೬ ಶ್ರೀಅಕ್ಕಲಕೋಟಸ್ವಾಮಿಗಳು ೮ಆ
೭ ಸಂತ-ತುಕಾರಾಮ ೧ರೂ
೮ ಶ್ರೀ ಚಿದಂಬರವಿಜಯ ೧|||ರೂ
೯ ಶ್ರೀ ಮಾಣಿಕ ಪ್ರಭುಗಳು ೮ಆ
೧೦ ಕ. ಸ. ಮಂಡಲ ಭಾಗ೧-೨ ೯ಆ
೧೧ ಶ್ರೀ ಜ. ಸು. ಆಚಾರ್ಯರು ೧೨ಆ

೧೨ ಶ್ರೀ ಯಾಜ್ಞವಲ್ಕ್ಯ ವಿಜಯ ೧೪ಆ
೧೩ ಶ್ರೀ ರಾಘವೇಂದ್ರ ಕಥಾಮೃತ ಸಚಿತ್ರ ೧||ರೂ
೧೪ ಶ್ರೀ ಗಿರಿಯಮ್ಮನ ಚರಿತ್ರೆ ೮ಆ
೧೫ ಶ್ರೀ ಮೀರಾಬಾಯಿ ೪ಆ
೧೬ ಶ್ರೀ ಶಂಕರಭಗವಾನರಚರಿತ್ರೆ ೪ಆ
೧೭ ಶ್ರೀ ಸ. ರಾಮದಾಸರು ೧ರೂ ೨ಆ
೧೮ ಶ್ರೀ ಸತ್ಯಸಂಧಚರಿತ್ರೆ ೧೦ಆ
೧೯ ಶ್ರೀ ಶೇಷಾಚಲಲಘುಚರಿತ್ರ ೪ಆ
೨೦ ಬೆಳದಡಿ ಶ್ರೀ ಬ್ರಹ್ಮಾನಂದರು ೩ಆ
೨೧ ಗುಜರಾಥದ ಇತಿಹಾಸ ೬ಆ
೨೨ ಲೋಕಮಾನ್ಯ ಕಥಾ ೮ಆ
೨೩ ಸೌರಾಷ್ಟ್ರ ೫ಆ

## ೬ ನಾಟಕಗಳು.

೧ ವಿವೇಕೋದಯ ೮ಆ
೨ ಪ್ರೇಮಲೀಲಾ ಸಂಗೀತ ೧ರೂ
೩ ಪ್ರೇಮಪರಿವರ್ತನ ೧೨ಆ
೪ ಜಲಂಧರ(ಪಾತಿವ್ರತ್ಯಪ್ರಭಾವ)೧೦ಆ
೫ ನಾರದಲೀಲಾ ೧೦ಆ
೬ ಮೋಜಿನ ಮರಣ ೧೨ಆಣೆ
೭ ದೇವ-ದಾನವರು ೧೨ಆ
೮ ನಿರ್ಭಾಗ್ಯ ಭಾರತಿ ೬ಆ

## ೭ ಪೌರಾಣಿಕ-ಪಾರಮಾರ್ಥಿಕ.

೧ ಶ್ರೀ ಅಧ್ಯಾತ್ಮರಾಮಾಯಣ ೧||ರೂ
೨ ಶ್ರೀ ಆನಂದರಾಮಾಯಣ ೧||ರೂ
೩ ಶ್ರೀಶಿವಲೀಲಾಮೃತ ೭ಆ
೫ ಶ್ರೀ ಬನಶಂಕರೀಮಾಹಾತ್ಮ್ಯ ೮ಆ
೬ ಭಕ್ತವಿಜಯ ೧||ರೂ
೭ ಹಂಸಗೀತೆ ೬ಆ
೮ ವೆಂಕಟೇಶಮಾಹಾತ್ಮ್ಯ ೧ರೂ
೯ ಶ್ರೀ ನವನಾಥಭಕ್ತಿಸಾರ ೨||ರೂ
೧೦ ಏಕನಾಥೀ ಅವಧೂತಗೀತೆ. ೧ರೂ
೧೧ ಶ್ರೀದಿನಕರರಾಮದಾಸರೂ ವಿಲಗೀತೆಯೂ ೮ಆ

೧೩ ಮುಡಿ-ಮೈಲಿಗೆಗಳ ಗುಟ್ಟು ೫ಆ
೧೪ ಮಿತ್ರದುಃಖ (೨ನೇಆವೃತ್ತಿ) ೪ಆ
೧೫ ಪ್ರಗತಿ-ದಾಸ್ಯವಿಮೋಚನ ೬ಆ
೧೬ ಶ್ರೀ ಶೇಷಾಚಲ ಬೋಧಾಮೃತ ಸಾರ ೧ರೂ
೧೭ ಕರ್ನಾಟಕಕ್ಕೆ ದೇವತೆಗಳ ಆಗಮನ (೨ನೇ ಆವೃತ್ತಿ) ೧೦ಆ
೧೮ ಪ್ರಪಂಚದರ್ಪಣ೧-೨ಭಾಗ ೧-೨-೦
೧೯ ಸಂಸಾರ ಕರ್ತವ್ಯ ೧೨ಆ
೨೦ ಈಶಾವಾಸ್ಯೋಪನಿಷತ್ ೧೦ಆ
೨೧ ಭಕ್ತಾನಂದಲಹರಿ ೨ಆ
೨೨ ಕರ್ನಾಟಕಕಥಾಸರಿತ್ಸಾಗರ ೨||ರೂ
೨೩ ಶ್ರೀ ಶೇಷಾಚಲಭಜನಸಂಗ್ರಹ ೪ಆ

## ೮ ಧಾರ್ಮಿಕ ಹಾಗು ಇತರ.

೨ ಹಿಂದುಗಳುಬಲಿಷ್ಠರಾಗುವ ದೆಂತು ೮ಆ
೩ ಶು. ಯ. ಕಾಣ್ವಸಂಹಿತೆ ೩ರೂ.
೪ ಕಾಣ್ವ ತ್ರಿಕಾಲ ಸಂಧ್ಯಾ ೨ಆ
೫ ಋಗ್ವೇದಿ ತ್ರಿಕಾಲಸಂಧ್ಯಾ ೨ಆ
೬ ಕಾಣ್ವ ನಿತ್ಯವಿಧಿ ೮ಆ
೭ ಶ್ರಾದ್ಧಮಾರ್ತಂಡ ೧ರೂ
೮ ಉಪಾಕರ್ಮ ೧೦ಆ
೯ ಸಂಸ್ಕಾರಮಾರ್ತಂಡ ೨ರೂ
೧೧ ಶಾಂತಿಮಾರ್ತಂಡ ಭಾ.೧-೨ ೨ರೂ
೧೨ ಧರ್ಮಸಿಂಧು ೧ನೇಭಾಗ ೧ರೂ
೧೩ ಶ್ರೀ ಮಲ್ಹಾರಿಕೀರ್ತನ ೫ಆ
೧೪ ಹಾದಿಗನ-ಹರಟೆ ಭಗವಂತನಲ್ಲಿ ಭಕ್ತನ ಬಯಕೆ ೩ಆ
೧೫ ಜ್ವರಪ್ರಕರಣ ೧| ರೂ
೧೬ ಕನ್ನಡ ಶಿವಾನಂದಲಹರಿ ೨ಆ

ವಿಳಾಸ:—ಭಿ. ಹ. ಕಾಳೆ. ಪೋ|| ಆನಂದವನ, ಜಿ. ಧಾರವಾಡ.